

ನೆಮ್ಮದಿಯ ನಾಳೆ ನಮ್ಮದು

# ಹೊಸತು




ಮೇ ೨೦೦೮

ಬೆಲೆ : ರೂ. ೧೨



## ಮೇ ದಿನಾಚರಣೆ










# ಮೇ ದಿನದಂದು ಮನನ ಮಾಡಿಕೊಳ್ಳಲು...

*ಶ್ರೀಮಂತರ, ಸಾಮ್ರಾಜ್ಯಶಾಹಿಗಳ ಹಾರೈಕೆಗಳು ಹೀಗಿರುತ್ತವೆ :*

''ಕಚ್ಚಿಬಿಟ್ಟು ಮಂತ್ರ ಹಾಕುವವನು ಅದೃಷ್ಟಶಾಲಿ
ಯಾಕೆಂದರೆ ಅವನೆಂದಿಗೂ ಸಿಕ್ಕಿಬೀಳುವುದಿಲ್ಲ
ನೆರೆಯವನ ಮನೆಗೆ ಬೆಂಕಿ ಹಚ್ಚಿ
ಬೆಳಕು ಹರಿಯುವವರೆಗೂ ಅವನ ಜೊತೆ ಸೇರಿ ಅಳುವವನು ಅದೃಷ್ಟಶಾಲಿ
ಯಾಕೆಂದರೆ ಅವನನ್ನು ದಯಾಮಯಿಯೆನ್ನುತ್ತಾರೆ.
ಇತರರ ಬಳಿ ಐದು ಶಿಲ್ಲಿಂಗ್ ದೋಚಿಕೊಂಡು
ಉಪ್ಪು ಕೊಳ್ಳಲಿಕ್ಕಾಗಿ ಅರ್ಧ ಶಿಲ್ಲಿಂಗ್ ಕೊಡುವವನು ಅದೃಷ್ಟಶಾಲಿ
ಯಾಕೆಂದರೆ ಅವನನ್ನ ಉದಾರಿಯೆನ್ನುತ್ತಾರೆ.
ಕಚ್ಚಿಬಿಟ್ಟು ಮಂತ್ರ ಹಾಕುವುದು ತಿಳಿಯದವನು,
ಜನರ ಹತ್ತಿರ ಕದ್ದು
ಅವರನ್ನು ಜೇನು ಮಾತುಗಳಿಂದ ವಂಚಿಸುವುದಕ್ಕೆ ಪ್ರಯತ್ನಿಸದವನು,
ಅವರಿಗೆ ಕಷ್ಟಗಳು ಬರುತ್ತವೆ.
ಜನರೆಂದಿಗೂ ಎಚ್ಚರಾಗಬಾರದೆಂದು
ಅವರು ತಲೆಕೆಳಗಾಗಿ ನೋಡುತ್ತಾರೆ.
ಅವರು ತಮ್ಮ ಬಾಯಿಲೆ ಕೂಡ ನಮಗೆ ಅಂಟಿಸುತ್ತಾರೆ.
ಅವರು ತಮ್ಮ ದುಷ್ಟ ಚೇಷ್ಟೆಗಳನ್ನು ವಂಚನೆಯೆಂಬ
ಧಾರ್ಮಿಕ ವೇಷದಲ್ಲಿ ಅಡಗಿಸಿಕೊಳ್ಳುತ್ತಾರೆ.

*ಕಾರ್ಮಿಕರ ಸಿದ್ಧಾಂತ ಹೀಗಿರುತ್ತದೆ :*

ನಾವು ಕಾರ್ಮಿಕರು, ಒಂದೇ ಕುಟುಂಬಕ್ಕೆ ಸೇರಿದವರೆಂದು ನಂಬುತ್ತಿದ್ದೇನೆ.
ಆದ್ದರಿಂದ ಧರ್ಮ, ವರ್ಣ, ಕುಲ ಯಾವುದಾದರೂ ಸರಿ
ನಮ್ಮನ್ನು ಬೇರೆ ಮಾಡುವುದಕ್ಕೆ ಸಾಧ್ಯವಿಲ್ಲ
ನಮ್ಮ ಶಕ್ತಿ ಕಾರ್ಮಿಕರ ಸಂಘಟನೆಯಲ್ಲಿದೆಯೆಂದು ನಂಬುತ್ತಿದ್ದೇನೆ.
ಯಾತಕ್ಕೆಂದರೆ ಸಂಘಟಿತರಾದವರು ತಮ್ಮ ವರ್ಗ
ಎಂದಿಗೂ ಬಿಟ್ಟುಕೊಡರು.
ಸಂಘಟಿತವಾಗದವರು ಒಂದು ಬುಲೆಟ್ ಸದ್ದಿಗೆ ಚದುರುತ್ತಾರೆ.
ಆದ್ದರಿಂದ ಕಾರ್ಮಿಕರ ಐಕ್ಯತೆಯ ಬಗ್ಗೆ ವಿಶ್ವಾಸವಿರಿಸುತ್ತೇನೆ.
ಐಕ್ಯತೆಯೇ ನಮ್ಮ ಶಕ್ತಿ
ಸಾಮ್ರಾಜ್ಯಶಾಹಿ ಅದರ ಸ್ಥಳೀಯ ಪ್ರತಿನಿಧಿಗಳು
ಕಾರ್ಮಿಕರ ರೈತರ ಒಟ್ಟಾರೆ ದೇಶದ ಪ್ರಗತಿಗೆ ಶತ್ರುಗಳೆಂದು ನಂಬುತ್ತೇನೆ.
ಅದರಿಂದ ನಾನೆಂದಿಗೂ ನವವಸಾಹತುಶಾಹಿ ವಿಧಾನಕ್ಕೆ
ವಿರೋಧವಾಗಿ ಹೋರಾಡುತ್ತೇನೆಂದು ಪ್ರತಿಜ್ಞೆ ಮಾಡುತ್ತಿದ್ದೇನೆ.
ಯಾತಕ್ಕೆಂದರೆ ಮರಣಾಸನ್ನವಾಗಿರುವ ಸಾಮ್ರಾಜ್ಯಶಾಹಿಯ
ಕಡೆಯ ವಿಷಪೂರಿತ ಹೊಡೆತ
ನವವಸಾಹತು ವಾದ
ಈಗ ನಾವೆಲ್ಲರೂ ಸೇರಿ ಕಾರ್ಮಿಕ ಗೀತೆಯನ್ನು ಹಾಡೋಣ !''

**– ಗೂಗಿ ವಾ ಥಿಯಾಂಗೋ :**
''ದೇಗುಲದಲ್ಲಿ ದೆವ್ವ''
ಅನುವಾದ : ಡಾ|| ಬಂಜಗೆರೆ ಜಯಪ್ರಕಾಶ



(Ngugi Wa Thiango ಕೆನ್ಯಾ ದೇಶದ ಉದ್ದಾಮ ಸಾಹಿತಿ - ಹೋರಾಟಗಾರ. ಅವನ The Devil on the Cross ಎಂಬ ಕಾದಂಬರಿಯು 'ನವ ಸಾಮ್ರಾಜ್ಯಶಾಹಿ ಶೋಷಣೆಯಲ್ಲಿ ಪತನಗೊಳ್ಳುತ್ತಿರುವ ಕೆನ್ಯಾ ದೇಶದ ಕಥನ.' ತಿಪಟೂರಿನ ಹೊನ್ನಾರು ಪ್ರಕಾಶನ ೨೦೦೭ರಲ್ಲಿ ಪ್ರಕಟಿಸಿದೆ, ದುಡಿಯುವ ಜನತೆಗೆ ಅದೊಂದು ಕೈಪಿಡಿಯಾಗಬಲ್ಲದು.)

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ರಾಂಚಂದ್ರ ಕೊಪ್ಪಲು, ಆಚಾರ್ಯ, ಶ್ರೀಹರಿ, ಪ್ರಕಾಶ್,
ಎನ್. ಆರ್. ಬೊಮ್ನಳ್ಳಿ, ಶಿಶಿರ ಗಂಗೊಳ್ಳಿ
ಮುಖಚಿತ್ರ : ಮೇ ದಿನಾಚರಣೆ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

**ಹೊ**ಗೆನಕಲ್ ಬಳಿ ಯಥಾಪ್ರಕಾರ ನೀರು ಹರಿಯುತ್ತಿದೆ. ಮಾನ್ಯ ಯಡಿಯೂರಪ್ಪನವರು ಅವರ ಪಕ್ಷದ ನಾಯಕರೊಂದಿಗೆ ಇನ್ನೊಮ್ಮೆ ತೆಪ್ಪೋತ್ಸವ ಮಾಡಿಕೊಳ್ಳಬಹುದು. ತಮಿಳುನಾಡಿನ ಬಿಜೆಪಿ ನಾಯಕರನ್ನೂ ಅದೇ ತೆಪ್ಪದಲ್ಲಿ ಕೂರಿಸಿಕೊಳ್ಳಲು ಸಾಧ್ಯವಾದರೆ ಸೊಗಸು ಇನ್ನೂ ಹೆಚ್ಚುತ್ತದೆ. ನಮ್ಮ ರಾಜ್ಯದ ರಾಜಕೀಯ ಧುರೀಣರು ಎಷ್ಟು ಪ್ರತಿಭಾನ್ವಿತರೆಂದರೆ ಯಾವುದೋ ಘಳಿಗೆಯಲ್ಲಿ ಯಾರಿಗೂ ತಿಳಿಸದೆ ಯಾವಾವುದೋ ಒಪ್ಪಂದಗಳಿಗೆ ಸಹಿ ಹಾಕಿಬಿಡುತ್ತಾರೆ; ಆಮೇಲೆ ಹಾಗೆ ಸಹಿ ಹಾಕಿಲ್ಲವೆಂಬಂತೆ ಊಳಿಡುತ್ತಾರೆ. ಜನರು ಇವರಿಗೆ ಛೀಮಾರಿ ಹಾಕುವುದರ ಬದಲು ತಮಿಳು ನಾಡಿನ ರಾಜಕಾರಣಿಗಳನ್ನು ದೂಷಿಸಿ ಆ ರಾಜ್ಯದ ಬಸ್ಸು-ಲಾರಿಗಳನ್ನು ಸುಡುತ್ತಾರೆ. ಹೊಗೆನಕಲ್‌ನಲ್ಲಿ ಲಭ್ಯವಿರುವ ನೀರಿನ ಒಂದೆರಡು ಟಿ.ಎಂ.ಸಿ.ಗಳಷ್ಟು ಭಾಗವನ್ನು ಕೃಷ್ಣಗಿರಿಯ ಜನರಿಗೆ ನೀರು ಒದಗಿಸುವ ಯೋಜನೆಗೆ ಬಳಸಬೇಕೆಂಬುದು ತಮಿಳುನಾಡು ಸರ್ಕಾರದ ಆಶಯ. ಅದಕ್ಕೆ ಹತ್ತು ವರ್ಷಗಳ ಹಿಂದೆ ಕರ್ನಾಟಕ ಸರ್ಕಾರವು ಸಮ್ಮತಿ ಸೂಚಿಸಿದೆಯೆಂದು ಹೇಳಲಾಗುತ್ತಿದೆ. ಇದು ನಿಜವೇ ಎಂಬುದನ್ನು ರಾಜ್ಯಸರ್ಕಾರವು ಬಹಿರಂಗವಾಗಿ ತಿಳಿಸಬೇಕು. ಕಾವೇರಿ ಟ್ರಿಬ್ಯುನಲ್ ನೀಡುವ ತನ್ನ ಭಾಗದ ನೀರನ್ನು ತಮಿಳುನಾಡು ಹೇಗೆ ಬಳಸಿಕೊಂಡರೂ ಆ ರಾಜ್ಯಕ್ಕೆ ನಿಗದಿಗೊಳಿಸಲಾಗುವ ನೀರಿನ ಪ್ರಮಾಣವು ವ್ಯತ್ಯಾಸವಾಗುವುದಿಲ್ಲ. ಆದ್ದರಿಂದ ಈಗಿನ ಹೊಗೆನಕಲ್ ಯೋಜನೆಯಲ್ಲಿ ತಕರಾರಿವುದು ನೀರಿನ ಬಗ್ಗೆ ಅಲ್ಲ. ತಮಿಳುನಾಡು ಸರ್ಕಾರವು ನಿರ್ಮಾಣ ಮಾಡಲಿರುವ ಕಟ್ಟೆಯು ಕರ್ನಾಟಕಕ್ಕೆ ಸೇರಿದ ಅಥವಾ ಸೇರಬೇಕಾದ ಪ್ರದೇಶದಲ್ಲಿ ಇರುತ್ತದೆಯೇ ಎಂಬುದು ಪ್ರಶ್ನೆ. ಕಟ್ಟೆಯಾಗಲಿ, ಈ ಯೋಜನೆಯ ಬೇರೆ ಯಾವುದೇ ಯಂತ್ರ, ಕಟ್ಟಡ, ಇತ್ಯಾದಿಗಳಾಗಲಿ ಕರ್ನಾಟಕದ ಪ್ರದೇಶದಲ್ಲಿರಕೂಡದೆಂಬುದು ನ್ಯಾಯಯುತವಾದ ವಿಷಯ. ಗಡಿಯನ್ನು ಸರಿಯಾಗಿ ಗುರುತಿಸುವ ಮೊದಲೇ ಯೋಜನೆಯನ್ನು ಹಮ್ಮಿಕೊಳ್ಳುವುದಕ್ಕೆ ತಮಿಳುನಾಡು ಸರ್ಕಾರಕ್ಕೆ ಸ್ವಾತಂತ್ರ್ಯವಿಲ್ಲ. ಅದನ್ನು ಕೇಂದ್ರ ಸರ್ಕಾರವು ಹೇಳಬೇಕು; ಹೇಳದಿರುವುದು ತಮಿಳುನಾಡು ಸರ್ಕಾರಕ್ಕೆ ಬೆಂಬಲ ಸೂಚಿಸಿದಂತೆ. ಕೇಂದ್ರ ಸರ್ಕಾರವು ತಮಿಳುನಾಡು ರಾಜಕೀಯ ಪಕ್ಷಗಳ ಹಂಗಿನಲ್ಲಿದ್ದರೂ ತನ್ನ ಜವಾಬ್ದಾರಿಯಿಂದ ನುಣುಚಿಕೊಳ್ಳುವಂತಿಲ್ಲ. ರಾಜ್ಯದಲ್ಲಿ ಚುನಾವಣೆ ಮುಗಿದ ಕೂಡಲೆ ಮತ್ತೆ ಈ ಪ್ರಶ್ನೆ ಬರುತ್ತದೆ. ಆಗ ಕೇಂದ್ರ ಸರ್ಕಾರವು ಕೋಲೆಬಸವನಂತಿರಕೂಡದು.

ಈ ಸಂದರ್ಭದಲ್ಲಿ ಇನ್ನೊಂದು ಪ್ರಶ್ನೆ ಇದೆ: ದೇವನಹಳ್ಳಿ ವಿಮಾನ ನಿಲ್ದಾಣಕ್ಕೆ ಕಾವೇರಿ ನೀರು ಕೊಡಲು ನಮ್ಮ ಸರ್ಕಾರ ಒಪ್ಪಿದೆ. ಕೃಷ್ಣಗಿರಿಗೆ ಬೇಕಾಗುವ ನೀರಿಗಿಂತಲೂ ಹೆಚ್ಚು ನೀರು ಇಲ್ಲಿಗೆ ಬೇಕಾಗುತ್ತದೆ. ಆ ನೀರು ಸರಬರಾಜು ಮಾಡಲು ಕೊಳವೆಗಳನ್ನು ಹಾಕಲು ಎಷ್ಟು ಖರ್ಚು ? ಅದನ್ನು ಭರಿಸುವವರು ಯಾರು ? ವಿಮಾನ ನಿಲ್ದಾಣದ ಕಂಟ್ರಾಕ್ಟರ್ ಅದಕ್ಕಾಗಿ ಹಣ ತುಂಬಿದ್ದಾನೆಯೆ ? ಅಲ್ಲಿಗೆ ಅಷ್ಟು ನೀರು ಕೊಟ್ಟರೆ ಬೆಂಗಳೂರಿನ ನಾಗರಿಕರಿಗೆ ಎಷ್ಟು ನೀರು ಖೋತಾ ಆಗುತ್ತದೆ ? ಅದನ್ನು ಸರಿಪಡಿಸುವುದು ಯಾರು ಮತ್ತು ಹೇಗೆ ?

ಹೊಗೆನಕಲ್ ಯೋಜನೆಯನ್ನು ಕುರಿತ ಹೋರಾಟದ ಜೊತೆಗೆ ಈ ಪ್ರಶ್ನೆಗಳ ಬಗೆಗೂ ಸಮಜಾಯಿಷಿ ಪಡೆಯುವ ಅಗತ್ಯವಿದೆ. ನಮ್ಮ ಪಾಲಿನ ನೀರನ್ನು ಹೀಗೆ ವಿಮಾನ ನಿಲ್ದಾಣಕ್ಕೆ ಕೊಡಲು ತಮಿಳುನಾಡು ಸರ್ಕಾರದ ಆಕ್ಷೇಪವಿಲ್ಲ; ಆದರೆ ಬೆಂಗಳೂರಿನ ನಾಗರಿಕರ ಆಕ್ಷೇಪವೂ ಇಲ್ಲವೆಂದು ಅರ್ಥವೆ ?

* * *

ಕೆಲವು ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಮೀಸಲಾತಿ ಸೌಲಭ್ಯವನ್ನು ಮಾನ್ಯ ಮಾಡುವ ಸರ್ವೋಚ್ಚ ನ್ಯಾಯಾಲಯದ ತೀರ್ಪು ಹಿಂದುಳಿದ ವರ್ಗಗಳವರಿಗೆ ನೀಡಲಾಗಿರುವ ವಿಶೇಷ ಬಳುವಳಿ ಯೇನೂ ಅಲ್ಲ. ಸಾಮಾಜಿಕ ಅಗತ್ಯಕ್ಕೆ ತಕ್ಕಂತೆ ನಮ್ಮ ಜನರಿಗೆ ಕೆಲವು ಸವಲತ್ತುಗಳನ್ನು ಕಲ್ಪಿಸ ಬೇಕಾದ್ದು ದೇಶದ ಕರ್ತವ್ಯ ಮತ್ತು ಅವನ್ನು ಪಡೆಯುವುದು ಅವರ ಹಕ್ಕು. ಏನೋ ಪ್ರಳಯ ಉಂಟಾಗಿಹೋಯಿತೆಂಬಂತೆ ನಮ್ಮ ಕೆಲವು ತಥಾಕಥಿತ ಧೀಮಂತರು ಅರಚುವುದು ಹಳೆಯ ಸಂಪ್ರದಾಯದ ಒಂದು ಮುಂದುವರಿದ ಭಾಗ – ಅದೇನೂ ಅನಿರೀಕ್ಷಿತವಲ್ಲ. ಇವರಿಗೆಲ್ಲಾ ಒಂದೇ ಪ್ರಶ್ನೆ ಸಾಕು: ''ಸ್ವಾಮಿ, ನೀವು ಮತ್ತು ನಿಮ್ಮಂತಹ ಧೀಮಂತರೇ ನಮ್ಮ ದೇಶವನ್ನು ನೂರು ವರ್ಷ ಗಳಿಗೂ ಹೆಚ್ಚು ಕಾಲ ಆಳಿದಿರಲ್ಲಾ, ಏನು ಉತ್ತಮ ವ್ಯವಸ್ಥೆ ನೀಡಿದ್ದೀರಿ ? ಅರ್ಹತೆ ಆಧಾರದ ಮೇಲೆಯೇ ಶಿಕ್ಷಣ ಮತ್ತು ಅಧಿಕಾರ ಪಡೆದ ನೀವು ಜನರ ಯಾವ ಸಮಸ್ಯೆ ಬಗೆಹರಿಸಿದ್ದೀರಿ ? ಈಗಿರುವುದಕ್ಕಿಂತಲೂ ಕೆಳಮಟ್ಟಕ್ಕೆ ದೇಶವು ಹೋಗಲು ಸಾಧ್ಯವೆ ?'' ಆದ್ದರಿಂದ 'ಬೊಬ್ಬೆ ಹೊಡೆಯುವುದನ್ನು ನಿಲ್ಲಿಸಿ, ಈ ಹೊಸ ಪ್ರಯತ್ನವನ್ನು ಧಿಕ್ಕರಿಸದಿರಿ', ಎಂದು ಅವರಿಗೆ ಮನವಿ ಮಾಡಿಕೊಳ್ಳುವುದು ತಪ್ಪೇನಲ್ಲ. ಇಷ್ಟಕ್ಕೂ 'ಅರ್ಹತೆ' ಆಧಾರದ ಮೇಲಿನ ಸ್ಥಾನಗಳನ್ನು ಕಡಿಮೆ ಗೊಳಿಸದೆ, ಹೆಚ್ಚುವರಿ ಸ್ಥಾನಗಳನ್ನು ಕಲ್ಪಿಸಿ, ಈ ಹೊಸ ಸೂತ್ರವನ್ನು ಅಳವಡಿಸಲಾಗುತ್ತಿದೆ. ಆದ್ದರಿಂದ ಯಾರೂ ಯಾರ ಸ್ಥಾನವನ್ನೂ ಕಿತ್ತುಕೊಂಡುಬಿಡುತ್ತಿಲ್ಲ. ಅಲ್ಲದೆ, ಸಾರ್ವಜನಿಕ ಹಣದಿಂದ ನಡೆಯುವ ವಿದ್ಯಾಸಂಸ್ಥೆಗಳಲ್ಲಿ ಎಲ್ಲ ವರ್ಗಗಳವರಿಗೂ ಅವಕಾಶವಿರಬೇಕಾದ್ದು ಸಹಜ.

ಪ್ರಾಥಮಿಕ ಹಂತದಿಂದಲೇ ಎಲ್ಲರಿಗೂ ಉತ್ತಮ ಸೌಲಭ್ಯಗಳನ್ನು ಸಮಾನವಾಗಿ ಕಲ್ಪಿಸಿ

೯ನೇ ಪುಟಕ್ಕೆ



ತಿಂಗಳ ಪತ್ರಿಕೆ

ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೯ ಸಂಚಿಕೆ-೧೦ ಮೇ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**






**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks.com**




# ಚುನಾವಣೆಯಲ್ಲಿ ಮತದಾರರಿಂದ ನಿರೀಕ್ಷೆ

**ಶಾಂ**ತಿಯು ಕದಡಿಹೋಗಿರುವ ಗ್ರಾಮ ಶಾಂತಿಪುರ. ಅದು ಚಿಕ್ಕಮಗಳೂರು ಜಿಲ್ಲೆಯಲ್ಲಿದೆ. ಜಡ್ಡು ಮತಾಂಧತೆಗೆ ಕಳೆದ ಒಂದು ದಶಕದಿಂದ ಆ ಜಿಲ್ಲೆ ಉತ್ತರ ಹುಡುಕುತ್ತಿದೆ. ಈಚೆಗೆ ಭಾರತ ಕಮ್ಯುನಿಸ್ಟ್ ಪಕ್ಷದ ರಾಜ್ಯ ಸಮ್ಮೇಳನ ಚಿಕ್ಕಮಗಳೂರಿನಲ್ಲಿ ನಡೆದಾಗ ದೇಶದಲ್ಲಿ ಕೇವಲ ಕೇಸರಿಯಲ್ಲ, ಕೆಂಪೂ ಇದೆ ಎಂದು ಜನ ಸ್ವಲ್ಪ ನೆಮ್ಮದಿ ತಾಳಿದರು. ಶಾಂತಿಪುರದಲ್ಲಿ ಈಚೆಗೆ ಒಬ್ಬ ದಲಿತ ಮತ್ತು ಇಬ್ಬರು ಮುಸಲ್ಮಾನರನ್ನು ಊರಿನಲ್ಲಿ ನಡೆದಾಡಿಸಿದರು, ಅದೂ ತಲೆಯ ಮೇಲೆ ಮಾಂಸ ಹೊರಿಸಿ. ಒಂದು ಹಸು ಸಾಯಿಸಿದ್ದರೆಂದು ಅವರ ಮೇಲಿನ ಆಪಾದನೆ. ಜನಗಳನ್ನು ಎಗ್ಗಿಲ್ಲದೆ ಸಾಯಿಸುವವರಿಗೆ ಹಸುವಿನ ಕಾಳಜಿ ಇರುವುದು ಪ್ರಶಂಸನೀಯ! ಆದರೆ ರಾಜ್ಯದಲ್ಲಿ ಕಾನೂನಿದೆ, ಪೊಲೀಸರಿದ್ದಾರೆ, ನ್ಯಾಯಾಲಯವಿದೆ ಎಂಬುದನ್ನು ಸುಳ್ಳುಮಾಡಲಾಯಿತು. ಒಂದು ಮತಧರ್ಮದವರನ್ನು ಕೊಂದು ಗುಜರಾತಿನಲ್ಲಿ ಚುನಾವಣೆ ಗೆಲ್ಲಬಹುದಾದರೆ, ನಮ್ಮ ರಾಜ್ಯದಲ್ಲೇಕೆ ಅದೇ ಮಂತ್ರ ಪ್ರಯೋಗಿಸಬಾರದೆಂಬ ಹುನ್ನಾರ ಇದರಲ್ಲಿದೆ. ಕೊಲ್ಲದಿದ್ದರೆ ಚಚ್ಚಿಯಾದರೂ ಗೆಲ್ಲಬಹುದಲ್ಲ!

ಕರ್ನಾಟಕದ ಜನತೆ ಇಂತಹ ರಾಜಕೀಯವನ್ನು ಸಹಿಸಿಯಾರೆ? ಅಂತೆಯೇ, ಕಳ್ಳತನದಿಂದ ಗಣಿಗಾರಿಕೆ ನಡೆಸಿ ಬಳ್ಳಾರಿ ಜಿಲ್ಲೆಯೊಂದರಲ್ಲೇ ದಿನಕ್ಕೆ ನಾಲ್ಕು ಸಾವಿರ ಕೋಟಿ ಆದಾಯದ ಪೈಕಿ ಅರ್ಧದಷ್ಟನ್ನು ನುಂಗಿಹಾಕುತ್ತಿರುವ ಜನರನ್ನು ಪೋಷಿಸುತ್ತಿರುವ ಬಿಜೆಪಿ ಮತ್ತು ಕಾಂಗ್ರೆಸ್ ಪಕ್ಷಗಳ ಅನೈತಿಕತೆಯನ್ನು ಇನ್ನೆಷ್ಟು ಕಾಲ ಸುಮ್ಮನೆ ನೋಡುತ್ತ ಕುಳಿತಿರಬಲ್ಲರು? ಬಿಜೆಪಿಯ ಎಷ್ಟು ಮಂದಿ ಶಾಸಕರ ಹೆಸರುಗಳು ಪೆಟ್ರೋಲು ಪಂಪು ಹಗರಣದ ಪಟ್ಟಿಯಲ್ಲಿದ್ದವು? ''ನಮ್ಮದು ಬೇರೆಯ ಪಕ್ಷಗಳಿಗಿಂತ ಭಿನ್ನವಾದ ಪಕ್ಷ'' ಎಂದು ಬಿಜೆಪಿ ಹೇಳಿಕೊಳ್ಳುವುದರ ಅರ್ಥ ಈಗ ಬಹಿರಂಗವಾಗಿದೆ: ಬೇರೆ ಪಕ್ಷಗಳವರು ೨೫ ವರ್ಷಗಳಲ್ಲಿ ಸೂರೆಗೊಂಡಷ್ಟನ್ನು ನಾವು ಎರಡೇ ವರ್ಷಗಳಲ್ಲಿ ಬಾಚಿ ತುಂಬಿಕೊಳ್ಳುತ್ತೇವೆ, ಎಂಬುದು ಅದರರ್ಥವಿರಬೇಕು. ಬೆಂಗಳೂರಿನ ಉತ್ತರಹಳ್ಳಿ, ಶಿವಾಜಿನಗರ ಮುಂತಾದ ಕ್ಷೇತ್ರಗಳ ಪ್ರತಿನಿಧಿಗಳು ಎಲ್ಲೆಲ್ಲೂ ಭೂಮಿಯನ್ನು ತಮ್ಮದಾಗಿಸಿಕೊಂಡು ಸಂಪತ್ತನ್ನು ಏಕಾಏಕಿ ಹತ್ತು-ಇಪ್ಪತ್ತು ಪಟ್ಟುಗಳಷ್ಟು ವರ್ಧಿಸಿಕೊಂಡಿದ್ದಾರೆಂದು ಸ್ವತಃ ಬಿಜೆಪಿ ಸದಸ್ಯರೇ ತಲೆ ತಗ್ಗಿಸಿದ್ದಾರೆ. ತುಮಕೂರಿನ ಶ್ರೀ ಎಸ್. ಮಲ್ಲಿಕಾರ್ಜುನಯ್ಯನವರು ಸುಮಾರು ೬೦ ವರ್ಷಗಳಿಂದ ಆರೆಸ್ಸೆಸ್-ಜನಸಂಘ-ಬಿಜೆಪಿಗಾಗಿ ದುಡಿದಿದ್ದಾರೆ. ಮೊನ್ನೆಮೊನ್ನೆ ಅವರಾಡಿದ ಒಂದು ಮಾತನ್ನು ಹಿಂತೆಗೆದುಕೊಳ್ಳುವಂತೆ ಮಾಡಲು ಸಂಸ್ಕೃತಿಯ ಅಪರಾವತಾರಗಳಾದ ಕಾರ್ಯಕರ್ತರು ಅವರನ್ನು ಒಂದು ಕೊಠಡಿಯಲ್ಲಿ ಕೂಡಿಹಾಕಿ ಹೇಳಿಕೆ ಪಡೆದುಕೊಂಡರೆಂದು ವರದಿಯಾಗಿದೆ. ಪ್ರತಿಯೊಂದು ಸಂದರ್ಭದಲ್ಲೂ 'ಹೊರಗಿನವರು' ಎಂಬ ಹಣೆಪಟ್ಟಿ ಹಚ್ಚಿ ಬೇರೆ ಪಕ್ಷಗಳ ಕೆಲವು ಕ್ರಮಗಳನ್ನು ಟೀಕಿಸುವ ಬಿಜೆಪಿಗೆ ವೆಂಕಯ್ಯ ನಾಯ್ಡು ಹೊರಗಿನವರಲ್ಲ, ಅವರ ಬಾಯಿ ತೆಗೆದುಕೊಳ್ಳುವುದಕ್ಕೆ ಕರ್ನಾಟಕದ ಯಾವ ಸಮಸ್ಯೆಯೂ ಪ್ರೇರಣೆ ನೀಡುವುದಿಲ್ಲ. ಯಶವಂತಪುರದಲ್ಲಿ ಶ್ರೀಮತಿ ಶೋಭಾ ಕರಂದ್ಲಾಜೆಯವರು ದಿಢೀರನೆ ಒಳಗಿನವರಾಗಿದ್ದಾರೆ. ದಕ್ಷಿಣ ಕನ್ನಡದಲ್ಲಿ ಹೊತ್ತಿಸಿದ ಮತಾಂಧತೆಯ ದ್ವೇಷದ ಕಿಡಿಗಳನ್ನು ಬೆಂಗಳೂರಿಗೆ ರವಾನಿಸುವ ಕೆಲಸವನ್ನು ಶ್ರೀ ಸದಾನಂದಗೌಡರು ಮಾಡಹೊರಟಿದ್ದಂತೆ ತೋರುತ್ತದೆ.

ವಿಶೇಷ ಆರ್ಥಿಕ ವಲಯವು ಒಂದು ದೇಶದ್ರೋಹಿ ಯೋಜನೆ. ಅದನ್ನು ಬಿಜೆಪಿ-ಕಾಂಗ್ರೆಸ್-ಜೆಡಿ(ಎಸ್), ಮೂರೂ ಪಕ್ಷಗಳು ಬೆಂಬಲಿಸಿ ರೈತರನ್ನು ಕಂಗಾಲಾಗಿಸಿವೆ. ಸ್ವದೇಶದ ಕಾನೂನು ಅನ್ವಯವಾಗದ ಒಂದು ಜಗತ್ತನ್ನು ನಮ್ಮ ದೇಶದಲ್ಲಿ ನಿರ್ಮಿಸಿಕೊಂಡು, ಫಲವತ್ತಾದ ಭೂಮಿಯನ್ನು ಕೆಲವು ಬಂಡವಳಿಗರ ಮೋಜಿಗೆ ಬಿಟ್ಟುಕೊಡುವುದು ಜನವಿರೋಧಿ ನೀತಿ. ಅದನ್ನು ಈ ಪಕ್ಷಗಳ ಮೂತಿಗೆ ತಿವಿದು ಹೇಳಲು ನಮ್ಮ ರಾಜ್ಯದ ಜನರಿಗೆ ಈಗೊಂದು ಮಹತ್ತರ ಸಂದರ್ಭ ಒದಗಿಬಂದಿದೆ. ಚುನಾವಣೆಯ ಇಂದಿನ ಪರ್ವಕಾಲದಲ್ಲಿ ಯಾರನ್ನು ಆರಿಸುತ್ತೇವೆ ಎಂಬುದಕ್ಕಿಂತಲೂ ಯಾವ ನೀತಿಗಳನ್ನು ಪುರಸ್ಕರಿಸುತ್ತೇವೆ ಎಂಬುದು ಅತಿಮಹತ್ವದ ಪ್ರಶ್ನೆಯಾಗಿದೆ. ಬಿಜೆಪಿ-ಕಾಂಗ್ರೆಸ್ ಪರಸ್ಪರ ವಿರೋಧಿಗಳಂತೆ ನಟಿಸುತ್ತಿದ್ದರೂ ಎರಡೂ ಪಕ್ಷಗಳ ಆರ್ಥಿಕ ಮತ್ತು ವಿದೇಶಾಂಗ ನೀತಿ ಒಂದೇ ಆಗಿದೆ. ದೇಶವನ್ನು ಉದಾರೀಕರಣದ ಪಂಜರದೊಳಗೆ ನೂಕಿ ವಿದೇಶಿ ಬಂಡವಳಿಗರಿಗೆ ವಿಲಾಸ ಕಲ್ಪಿಸಿಕೊಟ್ಟದ್ದು ಈ ಎರಡು ಪಕ್ಷಗಳು. ಮುಕ್ತ ಮಾರುಕಟ್ಟೆಯನ್ನು ಪ್ರಶಂಸಿಸುತ್ತಾ ಇದ್ದು, ಇಂದು ಬೆಲೆ ಏರಿಕೆಯು ಗಗನವನ್ನು ಮುಟ್ಟಿರುವಾಗ ಜಾಗತಿಕ ಸನ್ನಿವೇಶದಿಂದ ಹಾಗಾಗಿದೆಯೆಂದು ಸಬೂಬು ಹೇಳುವ ಬಂಡವಳಿಗರ ಪಕ್ಷಗಳು ಇವೆರಡು. ಲಾಭದ ಸುರಿಮಳೆಯಾಗುತ್ತಿದ್ದಾಗ ಸರ್ಕಾರವು ಮಾರುಕಟ್ಟೆಯ ನಿಯಮಗಳನ್ನು ರೂಪಿಸಲು ಮಧ್ಯಪ್ರವೇಶ ಮಾಡಕೂಡದೆಂದು ಆಗ್ರಹಿಸುತ್ತಿದ್ದ ಈ ಪಕ್ಷಗಳು, ಮಾರುಕಟ್ಟೆಯಲ್ಲಿ ಬಿಕ್ಕಟ್ಟನ್ನು ಸೃಷ್ಟಿಸಿ ಈಗ ಅದನ್ನು ಸರಿಪಡಿಸಲು ಸರ್ಕಾರ ಮಧ್ಯಪ್ರವೇಶ ಮಾಡಬೇಕೆಂದು ಉಪಚಾರದ ಮಾತುಗಳನ್ನಾಡುತ್ತಿವೆ. ಆಳುವ ವರ್ಗದ ಇಕ್ಕಳದ ಎರಡು ಭಾಗಗಳೆಂದರೆ ಈ ಎರಡು ಪಕ್ಷಗಳು. ಒಂದು ನೇರವಾಗಿ ಮತಧಾರ್ಮಿಕ ನೆಲೆಯಲ್ಲಿ ನಿಂತು ಹಿಂಸೆಯನ್ನು ಪ್ರಚೋದಿಸುತ್ತದೆ, ಇನ್ನೊಂದು ಅದನ್ನು ನೋಡುತ್ತಾ ಕಣ್ಣು ಮುಚ್ಚಿಕೊಳ್ಳುತ್ತದೆ. ನಿನ್ನೆ ಇರದಿದ್ದ ದ್ವೇಷ, ಹಿಂಸೆ, ಅಸೂಯೆ, ಶಂಕೆ, ಎಲ್ಲಾ ಮತೀಯತೆಯ ವೇಷದಲ್ಲಿ ಇಂದು ನಮ್ಮನ್ನು ಕಾಡುತ್ತಿವೆ.

ರಾಜ್ಯದ ಆಳ್ವಿಕೆಯಲ್ಲಿ ಭಾಗಿಗಳಾಗಿದ್ದ ಮೂರು ದೊಡ್ಡ ರಾಜಕೀಯ ಪಕ್ಷಗಳಲ್ಲಿ ಶಾಸಕರಾಗಲು ಪೈಪೋಟಿಯು ಕರಾಳರೂಪವನ್ನು ಧರಿಸಿದೆ. ಹೀಗೆ ಅಧಿಕಾರಕ್ಕಾಗಿ ಅಂತಃಕಲಹವು ಹೆಚ್ಚಾಗಿರುವುದು ಈ ಪಕ್ಷಗಳಿಗೆ ಅಧಿಕಾರ ಯಾವ ಪುರುಷಾರ್ಥಕ್ಕೆ ಬೇಕಾಗಿದೆಯೆಂಬುದರ ಸೂಚನೆಯಾಗಿದೆ. ಅದಕ್ಕೆ ಜನತೆಯು ಛೀಮಾರಿ ಹಾಕಬೇಕು.

ಚುನಾವಣೆಯ ಇಂದಿನ ಮಹತ್ವದ ಸನ್ನಿವೇಶದಲ್ಲಿ ಕರ್ನಾಟಕದ ಜನತೆಯು ಮತೀಯತೆಯ ಪಿಡುಗನ್ನು ಹೊಸಕಿ

ಹಾಕಬೇಕಾಗಿದೆ. ಕಾಂಗ್ರೆಸ್ ಪಕ್ಷವು ಬಿಜೆಪಿಗಿಂತಲೂ ಸ್ವಚ್ಛವಾದ ಪಕ್ಷವೇನೂ ಅಲ್ಲ, ಆದರೆ ಮತೀಯ ದ್ವೇಷದ ಕಿಡಿಯನ್ನು ಹೊತ್ತಿಸದಿರುವುದು ಅದರ ಒಂದು ಲಕ್ಷಣ. ಮುಂದೆ ಆ ಕಿಡಿಯನ್ನು ಆರಿಸಲು ಮುಂದಾಗುವಾಗ ಕಾಂಗ್ರೆಸ್ ಪಕ್ಷದ ಮೇಲೆ ಒತ್ತಾಯ ಹೇರುವುದು ಜನರ ಹಾಗೂ ಇತರ ರಾಜಕೀಯ ಪಕ್ಷಗಳ ಕರ್ತವ್ಯವಾಗುತ್ತದೆ. ಈಗಿನ ಚುನಾವಣೆಯ ಸಂದರ್ಭದಲ್ಲಿ ಜನಪರ ಆಶಯಗಳನ್ನು ಕೇಂದ್ರವಾಗಿರಿಸಿಕೊಂಡು, ಈವರೆಗೆ ಆಳಿರುವ ಪಕ್ಷಗಳ ರಾದ್ಧಾಂತಗಳಿಗೆ ಕಡಿವಾಣ ಹಾಕಲು ಸರ್ವೋದಯ ಕರ್ನಾಟಕ ಪಕ್ಷ, ಭಾರತ ಕಮ್ಯುನಿಸ್ಟ್ ಪಕ್ಷ, ಭಾರತೀಯ ರಿಪಬ್ಲಿಕನ್ ಪಕ್ಷ ಮತ್ತು ಅಖಿಲ ಭಾರತ ಫಾರ್ವರ್ಡ್ ಬ್ಲಾಕ್ ಒಟ್ಟಾಗಿ ''ಜನಪರ ರಾಜಕೀಯ ರಂಗ''ವನ್ನು ರಚಿಸಿಕೊಂಡಿವೆ. ರಾಜ್ಯದ ಹಿತವನ್ನು ಕಾಪಾಡಲು ಮತ್ತು ಜನಸಾಮಾನ್ಯರ ಆಕಾಂಕ್ಷೆಗಳನ್ನು ಪೂರೈಸುವತ್ತ ಹೆಜ್ಜೆಹಾಕಲು ಈ ರಂಗವು ಬದ್ಧವಾಗಿರುತ್ತದೆಂದು ನಿರೀಕ್ಷಿಸಬಹುದಾಗಿದೆ. ರೈತ ಸಂಘಗಳು, ದಲಿತ ಸಂಘರ್ಷ ಸಮಿತಿಗಳು ಸರ್ವೋದಯ ಕರ್ನಾಟಕ ಪಕ್ಷದಲ್ಲಿ ಸಮ್ಮಿಳಿತವಾಗಿವೆ. ಭಾರತ ಕಮ್ಯುನಿಸ್ಟ್ ಪಕ್ಷ (ಮಾರ್ಕ್ಸ್‌ವಾದಿ) ಮುಂತಾದುವು ಜನಪರ ರಾಜಕೀಯ ರಂಗದಲ್ಲಿ ಸೇರ್ಪಡೆ ಹೊಂದದಿದ್ದರೂ ಅವು ಜನತೆಯ ಆಶೋತ್ತರಗಳನ್ನು ಪ್ರತಿನಿಧಿಸುವುದರಲ್ಲಿ ಈ ರಂಗದೊಂದಿಗೆ ಕೈಜೋಡಿಸುತ್ತವೆಂಬ ಸೂಚನೆ ಇದೆ. ಇವೆಲ್ಲಾ ಕೂಡಿ ಚುನಾವಣೆಯನ್ನೆದುರಿಸಿದರೆ ತೃತೀಯ ರಂಗವು ಗಟ್ಟಿಗೊಳ್ಳಲು ಸಾಧ್ಯವಿದೆ ಮತ್ತು ಜನತೆ ಅದನ್ನು ಪುಷ್ಟೀಕರಿಸಬೇಕು. ''ಪ್ರಜಾತಂತ್ರ ವಿರೋಧಿ, ಜನವಿರೋಧಿ, ಕೋಮುವಾದಿ ಬಿಜೆಪಿಯನ್ನು ಸೋಲಿಸಿ'' ಎಂಬ ಘೋಷಣೆಯೊಂದಿಗೆ ಒಂದು ''ಜನತೆಯ ಪ್ರಣಾಳಿಕೆ''ಯನ್ನು ಹಲವು ಸಂಘ-ಸಂಸ್ಥೆಗಳು, ಕ್ರಿಯಾಶೀಲರು, ಹೊರಡಿಸಿರುವುದು ಸ್ವಾಗತಾರ್ಹವಾಗಿದೆ. ಪ್ರೊ॥ ಎಚ್. ಎಲ್. ಕೇಶವಮೂರ್ತಿ ಯವರ ನೇತೃತ್ವದಲ್ಲಿ, ರೈತಸಂಘವೂ ಸೇರಿದಂತೆ ಹಲವು ಪ್ರಜಾಪ್ರಭುತ್ವವಾದಿ ಶಕ್ತಿಗಳು ಈ ಪ್ರಣಾಳಿಕೆಗೆ ಬದ್ಧವಾಗಿ ಕಾರ್ಯ ನಿರತವಾಗಿವೆ. ಜನಪರ ರಾಜಕೀಯ ರಂಗವನ್ನು ಈ ಶಕ್ತಿಗಳು ಬೆಂಬಲಿಸುತ್ತವೆಂಬ ನಿರೀಕ್ಷೆ ಇದೆ. ಇದು ''ಪ್ರಜಾ ಪ್ರಭುತ್ವಕ್ಕಾಗಿ ಜನರ ಒಕ್ಕೂಟ''ವಾದ್ದರಿಂದ ಜನಪರ ರಾಜಕೀಯ ರಂಗದ ಅಭ್ಯರ್ಥಿಗಳನ್ನು ತಪ್ಪದೆ ಬೆಂಬಲಿಸಬೇಕು. ಯಾರನ್ನು ಸೋಲಿಸಬೇಕೆಂದು ಉದ್ದೇಶಿಸಲಾಗುತ್ತದೋ ಅವರನ್ನು ಸೋಲಿಸುವುದೆಂದರೆ ಬೇರೊಬ್ಬರನ್ನು ಗೆಲ್ಲಿಸುವ ಕೆಲಸ ಆಗಬೇಕೆಂದರ್ಥ.

ಇದೆಲ್ಲದರ ಪರಿಣಾಮವಾಗಿ ಈ ಬಾರಿಯ ಶಾಸನ ಸಭೆಯಲ್ಲಿ ಜನರ ಹಿತ ಕಾಪಾಡುವಂತಹ, ಅಭಿವೃದ್ಧಿ ಎಂಬುದನ್ನು ಜನತೆಯ ನೆಲೆಯಲ್ಲಿ ವ್ಯಾಖ್ಯಾನಿಸಿ ಕ್ರೂರ ಬಂಡವಾಳಶಾಹಿ ಶೋಷಣಾ ತಂತ್ರಗಳಿಗೆ ಪ್ರತಿರೋಧ ಒಡ್ಡುವ, ಒಂದು ಜನಪರ ಬಣವು ಗಣನೀಯ ಸಂಖ್ಯೆಯಲ್ಲಿರುವಂತಾಗಬೇಕು. ಕರ್ನಾಟಕದ ಜನತೆಯು ತನ್ನ ಭವಿಷ್ಯವನ್ನು ಹಸನಾಗಿ ರೂಪಿಸಿಕೊಳ್ಳಲು ಇದೊಂದು ಸಂಧಿಕಾಲ. ಅದನ್ನು ಫಲಪ್ರದವಾಗುವ ರೀತಿಯಲ್ಲಿ ಸಂಯೋಜಿಸುವುದು ಎಲ್ಲ ಜನಪರ ಪಕ್ಷಗಳ, ಶಕ್ತಿಗಳ ಕರ್ತವ್ಯ.

ಚುನಾವಣೆಯಲ್ಲಿ ಮತದಾನ ಮಾಡುವ ಕರ್ನಾಟಕದ ನಾಗರಿಕರು ಜನಪರ ಕನಿಷ್ಠ ಕಾರ್ಯಕ್ರಮವೊಂದನ್ನು ಬೆಂಬಲಿಸುವಾಗ ಕೆಳಗಿನ ಅಂಶಗಳಿಗೆ ಒತ್ತುಕೊಡಬೇಕು ಮತ್ತು ಅವನ್ನು ಒಪ್ಪಿ ಕೆಲಸಮಾಡುವ ಪಕ್ಷಗಳನ್ನು ಹಾಗೂ ವ್ಯಕ್ತಿಗಳನ್ನು ಚುನಾಯಿಸಬೇಕು: (ಅ) ಮತಧಾರ್ಮಿಕ ಸಾಮರಸ್ಯವನ್ನು ಕಾಪಾಡುವುದು, ಕೋಮುದ್ವೇಷವನ್ನು ಪ್ರಚೋದಿಸ ದಿರುವುದು; (ಆ) ರಾಜ್ಯದ ನೀರು-ಭೂಮಿ-ಭಾಷೆ-ಗಡಿಗಳನ್ನು ಅಚ್ಚುಕಟ್ಟಾಗಿ ಸಂರಕ್ಷಿಸುವುದು; (ಇ) ಮಹಿಳೆಯರಿಗೆ ಗಮನಾರ್ಹವಾದ ರೀತಿಯಲ್ಲಿ ಪ್ರಾತಿನಿಧ್ಯ ದೊರಕುವಂತೆ ಮಾಡುವುದು; (ಈ) ವಿಶೇಷ ಆರ್ಥಿಕ ವಲಯದ ಕುತ್ತನ್ನು ನಿವಾರಿಸುವುದು; (ಉ) ಕೃಷಿಯ ವರ್ಧನೆಗೆ ಸ್ಪಷ್ಟ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದು; (ಊ) ಗಣಿಗಾರಿಕೆ ಮುಂತಾದ ಉದ್ಯಮಗಳಲ್ಲಿ ರಾಜ್ಯದ ಸಂಪತ್ತಿನ ಹರಣವಾಗದಂತೆ ನೋಡಿಕೊಳ್ಳುವುದು; (ಋ) ಅಸಂಘಟಿತ ದುಡಿಯುವ ಜನರ ಹಿತವನ್ನು ರಕ್ಷಿಸುವ ಕಾನೂನನ್ನು ಜಾರಿಗೆ ತರುವುದು; (ೠ) ಮಕ್ಕಳ ದುಡಿಮೆಯನ್ನು ನಿಷೇಧಿಸಿ ಮಕ್ಕಳಿಗೆ ಸೂಕ್ತ ರಕ್ಷಣೆ, ಶಿಕ್ಷಣ ಸೌಲಭ್ಯ, ಕಲ್ಪಿಸುವುದು; (ಎ) ಸಮಾನ ಶಿಕ್ಷಣದ ಸೌಲಭ್ಯಗಳಿಗೆ ಆದ್ಯತೆ ನೀಡುವುದು; (ಏ) ಸರ್ಕಾರದಿಂದ ಅಗತ್ಯ ಸೇವೆಗಳೆಲ್ಲಾ ಜನಸಾಮಾನ್ಯರಿಗೆ ಕಿರುಕುಳವಿಲ್ಲದಂತೆ ಲಭ್ಯವಾಗುವುದು; (ಐ) ಕಾಳಸಂತೆ, ವಿದೇಶಿ ಬಂಡವಾಳದ ಅಮಲು ಇತ್ಯಾದಿ ಜನವಿರೋಧಿ ಪ್ರಕ್ರಿಯೆಗಳಿಗೆ ಅವಕಾಶವಿಲ್ಲದಂತೆ ಸರ್ಕಾರಿ ಯಂತ್ರವನ್ನು ಸ್ವಚ್ಛಗೊಳಿಸುವುದು; ಮತ್ತು (ಒ) ಪರಿಶಿಷ್ಟ ಜಾತಿ, ಬುಡಕಟ್ಟು ಹಾಗೂ ಅರಣ್ಯವಾಸಿ ಜನರ ಮರ್ದನವನ್ನು ಸರ್ವಥಾ ತೊಡೆದುಹಾಕುವುದು.

''ಜನಪರ ರಾಜಕೀಯ ರಂಗ'' ಮತ್ತು ''ಪ್ರಜಾಪ್ರಭುತ್ವಕ್ಕೆ ಜನರ ಒಕ್ಕೂಟ'' ಇವಕ್ಕೆ ಬದ್ಧವಾಗಿವೆ. ಬಿಜೆಪಿ-ಕಾಂಗ್ರೆಸ್-ಜೆಡಿ(ಎಸ್) ಪಕ್ಷಗಳು ಇವಕ್ಕೆ ಬದ್ಧವಾಗಿವೆಯೇ ಇಲ್ಲವೇ ಎಂಬುದು ಜನತೆಯ ಅನುಭವಕ್ಕೆ ಬಂದಿದೆ.

ಈ ಹಿನ್ನೆಲೆಯಲ್ಲಿ ಈಗಿನ ಚುನಾವಣೆಯು ನಮ್ಮ ರಾಜ್ಯದ ಶಾಸನಸಭೆ ಮತ್ತು ಆಡಳಿತ ಯಂತ್ರಕ್ಕೆ ಚುರುಕುಮುಟ್ಟಿಸಲು ಒಂದು ಅವಕಾಶವನ್ನಿತ್ತಿದೆ. ಕರ್ನಾಟಕದ ಜನತೆಯು ತನ್ನ ಮತ್ತು ರಾಜ್ಯದ ಭವಿಷ್ಯವನ್ನು ಸುಭದ್ರಗೊಳಿಸಿಕೊಳ್ಳುವ ರೀತಿಯಲ್ಲಿ ಮತವನ್ನು ಚಲಾಯಿಸುತ್ತದೆಂಬ ಆಶಾಭಾವನೆಯನ್ನು ತಾಳೋಣ ಮತ್ತು ಅದು ಸಾಕಾರಗೊಳ್ಳುವಂತೆ ಕ್ರಿಯಾಶೀಲರಾಗೋಣ. ಸಾಮಾನ್ಯವಾಗಿ ಚುನಾವಣೆಗಳ ಸಂದರ್ಭದಲ್ಲಿ ಮತದಾರರ ನಿರೀಕ್ಷೆ-ಅಪೇಕ್ಷೆಗಳನ್ನು ಚರ್ಚಿಸುವುದುಂಟು. ಅನೇಕ ಚುನಾವಣಾ ಪ್ರಣಾಳಿಕೆಗಳು ಕಾರ್ಯಸೂಚಿಗಳನ್ನು ಪ್ರಕಟಿಸುತ್ತವೆ; ಆದರೆ ಆಮೇಲೆ ಆಡಿಟ್ ವರದಿಗಳನ್ನು ನೀಡುವುದಿಲ್ಲ. ಆದ್ದರಿಂದ ತಮ್ಮ ನಿರೀಕ್ಷೆಗಳನ್ನು ಪಟ್ಟಿ ಮಾಡುವ ಬದಲು ಮತದಾರರು ತಮ್ಮಿಂದ ಏನನ್ನು ನಿರೀಕ್ಷಿಸಲಾಗುತ್ತದೆಂಬುದನ್ನು ಅರಿತು ಮತ ಚಲಾಯಿಸುವುದು ಒಳ್ಳೆಯ ಸಂಪ್ರದಾಯವಾಗುತ್ತದೆ. ಏನಾಗಬೇಕೋ ಅದನ್ನು ಆಳುವ ಪಕ್ಷಗಳು ಮಾಡುವಂತೆ ನಿರ್ದೇಶಿಸುವ ಮತದಾರರು, ಏನಾಗಬಾರದೋ ಅದು ನಡೆದುಹೋಗದಂತೆ ತಡೆಗಟ್ಟುವ ಜವಾಬ್ದಾರಿಯನ್ನು ಇಂದು ನಿರ್ವಹಿಸಬೇಕಾಗಿದೆ.


ತಿಂಗಳ ಪತ್ರಿಕೆ
ಹೊಸತು
ನೆನ್ನೆಯದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೭೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಅಡ್ಡಪಲ್ಲಕ್ಕಿ ಉತ್ಸವ

ಡಾ|| ಸಂಗಮೇಶ ಸವದತ್ತಿಮಠ – ಇವರು ಭಾಷಾ ವಿಜ್ಞಾನದ ಘನ ವಿದ್ವಾಂಸರೆಂಬುದು ತಿಳಿದಿತ್ತು. 'ಹೊಸತು'ವಿನಲ್ಲಿ ಪ್ರಕಟವಾದ ಲೇಖನದಿಂದಾಗಿ ಇವರ ಪ್ರೌಢ ಪಾಂಡಿತ್ಯದ ಮತ್ತೊಂದು ಆಯಾಮವನ್ನು ಪರಿಚಯ ಮಾಡಿಕೊಳ್ಳುವ ಅವಕಾಶವೊದಗಿತು. ಲೇಖಕರು 'ಅಡ್ಡಪಲ್ಲಕ್ಕಿ ಉತ್ಸವ'ದ ಬಗೆಗೆ ಬೆರಗುಗೊಳಿಸುವಷ್ಟು ಐತಿಹಾಸಿಕ ಮಾಹಿತಿಯನ್ನು ಸಂಗ್ರಹಿಸಿ ತಮ್ಮ ಅಭಿಪ್ರಾಯವನ್ನು ಪ್ರತಿಪಾದಿಸಿದ್ದಾರೆ (ಏಪ್ರಿಲ್ ಸಂಚಿಕೆ). ಅಲ್ಲದೆ, ಲೇಖನದ ಕಡೆಯ ಭಾಗದಲ್ಲಿ ಬರುವ ಮಾತುಗಳನ್ನು ಮೊದಲಿಗೆ ದಪ್ಪ-ಕಪ್ಪು ಅಕ್ಷರಗಳಲ್ಲಿ ಮುದ್ರಿಸಿ ಪತ್ರಿಕೆಯ ಸಂಪಾದಕರು, ಓದುಗರು ಈ ಮಾತುಗಳ ಕಡೆ ಹೆಚ್ಚಿನ ಗಮನ ಹರಿಸುವಂತೆ ಮಾಡಿರುವುದು ವಿಶೇಷ. ಲೇಖಕರಿಗೂ ಪತ್ರಿಕೆಯ ಸಂಪಾದಕರಿಗೂ ಧನ್ಯವಾದಗಳು.

ಸಮತಾವಾದ ವ್ಯವಸ್ಥೆಯನ್ನು ವಿಡಂಬನೆ ಮಾಡುವ ಸಲುವಾಗಿ 'ಹಸ್ತದಲ್ಲಿನ ಐದು ಬೆರಳುಗಳೂ ಸರಿಸಮವಾಗಿವೆಯೆ ನೋಡಿ!' ಎಂದು ಛೇಡಿಸುವವರಿದ್ದಾರೆ. ಆದರೆ ಸಮತಾವಾದಿ ಅಥವಾ ಸಮಾಜವಾದಿ ವ್ಯವಸ್ಥೆಯ ಅರ್ಥ, ಇಲ್ಲಿ ಎಲ್ಲರೂ ಒಂದೇ ಬಗೆ, ಸರಿಸಮಾನರು ಎಂದಲ್ಲ; ಸಾಮಾಜಿಕಾರ್ಥಿಕ ಸಂಪತ್ತು ಎಲ್ಲರಿಗೂ ಸಮ್ಮತವಾದ ಪ್ರಮಾಣದಲ್ಲಿ, ಕೆಲಸದ ಯೋಗ್ಯತಾನುಸಾರವಾಗಿ ಹಂಚಿಕೆಯಾಗಬೇಕು ಎಂಬುದು ಇಲ್ಲಿನ ಮುಖ್ಯಾರ್ಥ. 'ಪ್ರತಿಯೊಬ್ಬನಿಂದಲೂ ಅವನವನ ಸಾಮರ್ಥ್ಯಕ್ಕೆ ಅನುಗುಣವಾದ ದುಡಿಮೆ; ಪ್ರತಿಯೊಬ್ಬನಿಗೂ ಅವನವನ ಅಗತ್ಯಕ್ಕೆ ಅನುಸಾರವಾದ ಸೌಲಭ್ಯ' – ಎಂಬುದು ಸಮತಾವಾದಿ ಸಮಾಜದ ಒಂದು ಪ್ರಾಯೋಗಿಕ ಆದರ್ಶ. ಸಮಾಜವಾದವು ಉತ್ಪಾದನಾ ಸಾಮಗ್ರಿಗಳು ಸಾರ್ವಜನಿಕರ ಹತೋಟಿಯಲ್ಲಿರಬೇಕೆಂದು ಪ್ರತಿಪಾದಿಸುತ್ತದೆ.

ಡಾ|| ಸವದತ್ತಿಮಠ ಅವರು ಸರ್ಕಾರಿ ನೌಕರರಲ್ಲಿ ಮತ್ತು ಪ್ರಜಾರಾಜ್ಯದ ಪ್ರಭುತ್ವ ನಡೆಸುವವರಲ್ಲಿ ಇರುವ, ಸಂಬಳ ಸಾರಿಗೆಗಳು ಮತ್ತಿತರ ಸೌಲಭ್ಯಗಳ ತಾರತಮ್ಯವನ್ನು ಪ್ರಶ್ನಿಸಿದ್ದಾರೆ. ಆದರೆ ಎಲ್ಲರಿಗೂ ಗೊತ್ತಿರುವ ಹಾಗೆ ಸರ್ಕಾರಿ ನೌಕರರನ್ನು ಆರಿಸುವುದಕ್ಕೆ ಕೆಲವು ನಿರ್ದಿಷ್ಟ ಅರ್ಹತೆಯ ಮಾನದಂಡಗಳಿವೆ. ಹೆಚ್ಚಿನ ಅರ್ಹತೆ ಮತ್ತು ಸಾಮರ್ಥ್ಯಗಳುಳ್ಳವರಿಗೆ ಹೆಚ್ಚಿನ ಸೌಲಭ್ಯಗಳು ದೊರೆಯುತ್ತವೆ. ಈಗ ತಾನೆ ಕೆಲಸಕ್ಕೆ ಸೇರಿದ ಕಾಲೇಜು ಅಧ್ಯಾಪಕನಿಗೂ ಹತ್ತಾರು ವರ್ಷಗಳು ಸೇವೆಸಲ್ಲಿಸಿ, ಹೆಚ್ಚಿನ ಅರ್ಹತೆ ಗಳಿಸಿದ ಪ್ರೊಫೆಸರರಿಗೂ ಒಂದೇ ಪ್ರಮಾಣದ ಸಂಬಳ ಕೊಡುವುದು ಸೂಕ್ತವೆ ? ಕೊಟ್ಟರೆ ನಮ್ಮ ಆಕ್ಷೇಪವೇನೂ ಇಲ್ಲ.

ಪ್ರಜಾಪ್ರಭುತ್ವದಲ್ಲಿ ಕೂಡ, ಜನರ ಪರವಾಗಿ ಆಡಳಿತ ನಿರ್ವಹಿಸುವವರನ್ನು ಆರಿಸಲು 'ಮತದಾನ' ಎಂಬ ಮಾನದಂಡವಿದೆ. ವಿವಿಧ ಹಂತಗಳಲ್ಲಿ ನಡೆಯುವ ಚುನಾವಣೆಗಳಲ್ಲಿ ಹೆಚ್ಚು ಮತ ಗಳಿಸಿದವರು ಮೇಲು ಮೇಲಿನ ಸ್ಥಾನ ಪಡೆಯುತ್ತಾರೆ. (ಚುನಾವಣೆಗಳು ಪ್ರಾಮಾಣಿಕವಾಗಿ ನಡೆಯುತ್ತವೆಯೆ ? ಎಂಬ ಪ್ರಶ್ನೆ ಬೇರೆ). ತದನುಗುಣವಾಗಿ ಮೇಲು ಮೇಲಿನ ಸ್ಥಾನಗಳಲ್ಲಿ ಇರುವವರಿಗೆ ಹೆಚ್ಚಿನ ಸೌಲಭ್ಯಗಳು ದೊರೆಯುತ್ತವೆ. ಏನೇ ಇರಲಿ; ಈ ಎಲ್ಲ ಸಂಗತಿಗಳಿಗೂ ಅಡ್ಡಪಲ್ಲಕ್ಕಿ ಉತ್ಸವಕ್ಕೂ ಸಂಬಂಧ ಕಲ್ಪಿಸುವುದು ವಿಚಿತ್ರವೆನಿಸುತ್ತದೆ.

''ಭಕ್ತರ ಒತ್ತಾಯಕ್ಕೆ ಮಣಿದು ಅವರು (ಮಠಾಧಿಪತಿಗಳು) ಪಲ್ಲಕ್ಕಿಯಲ್ಲಿ ಕೂಡುತ್ತಾರೆ'' ಎನ್ನಲಾಗಿದೆ. ನಿಜ, ಈ ಮಾತನ್ನು ಹಲವರು ಹೇಳುತ್ತಾರೆ. ಆದರೆ, ಸಾಮಾನ್ಯವಾಗಿ ಮಠಾಧಿಪತಿಗಳು, ಸ್ವಾಮಿಗಳು ಮೊದಲಾದ ಗುರುಹಿರಿಯರು ಭಕ್ತರಿಗೆ, ಶಿಷ್ಯರಿಗೆ ವಿರಕ್ತಿಯ ಮಾರ್ಗದರ್ಶನ ಮಾಡಿಸುವುದನ್ನು ಸಮಾಜವು ನಿರೀಕ್ಷಿಸುತ್ತದೆ. ಇದಕ್ಕೆ ಬದಲಾಗಿ ಸ್ವಾಮಿಗಳೇ ಭಕ್ತರ ಒತ್ತಾಯಕ್ಕೆ ಮಣಿಯುವುದು ವಿಪರ್ಯಾಸ.

''ಪಲ್ಲಕ್ಕಿಯಲ್ಲಿ ಗಂಟೆಗಟ್ಟಲೆ ಕುಳಿತು ಉರಿಬಿಸಿಲಿನಲ್ಲಿ ಮೆರವಣಿಗೆ ಮಾಡಿಸಿಕೊಳ್ಳುವುದರ ಹಿಂಸೆಯನ್ನು ಬಲ್ಲವರೇ ಬಲ್ಲರು'' ಎಂದು ಮರುಗಿದ್ದಾರೆ, ಲೇಖಕರು. ಪಾಪ!




ಜಗದ್ಗುರುಗಳ ಪರಿಸ್ಥಿತಿಯ ಬಗೆಗೆ ನಮಗೂ ಸಹಾನುಭೂತಿಯಿದೆ.

ಇಂತಹ ಹಿಂಸೆಗೆ ಲೇಖಕರು ಸೂಚಿಸುವ ಪರಿಹಾರವು ಕುತೂಹಲಕಾರಿಯಾಗಿದೆ. ಅಡ್ಡಪಲ್ಲಕ್ಕಿ ಉತ್ಸವಗಳು ''ದೊಡ್ಡ ವಾಹನಗಳಲ್ಲಿ ನಡೆಯುವಂತೆ ಎಲ್ಲ ಭಕ್ತರೂ ನೋಡಿಕೊಳ್ಳಬೇಕು. ಮೆರವಣಿಗೆಗೆ ಪಲ್ಲಕ್ಕಿಯೇ ಬೇಕೆಂದು ಅವರು ಪಟ್ಟು ಹಿಡಿಯಬಾರದು. ಇದಕ್ಕೆ ಎಲ್ಲಾ ಧರ್ಮಗಳ ಸ್ವಾಮಿಗಳೂ ಬದ್ಧರಾಗಬೇಕು...'' ಇತ್ಯಾದಿ. ಒಪ್ಪೋಣ; ಅಷ್ಟಾದರೆ ಸಾಕು. ಹೇಗೂ ಸುಖಾಸನಗಳಿಂದಲೂ ಸಕಲ ಸೌಭಾಗ್ಯಗಳಿಂದಲೂ ಕೂಡಿದ ಹೊಸ ಹೊಸ ವಾಹನಗಳು ಮಾರುಕಟ್ಟೆಗೆ ಬಂದಿವೆ. ಎಲ್ಲ ಸ್ವಾಮಿಗಳಿಗೂ ಭಕ್ತರು ವೈಭವೋಪೇತ ವಾಹನಗಳನ್ನು ಕಾಣಿಕೆಯಾಗಿ ಅರ್ಪಿಸಿದರೆ ಸಾಕು. ಆಗ –

*ಅಡ್ಡ ಪಲ್ಲಕ್ಕಿಯೇನು ?*
*ಕೋಟಿ ರೂಪಾಯಿ ಕಾರೇನು ?*
*ಎರಡೂ ಒಂದೇ !*
*ಕೋಟಿ ರೂಪಾಯಿ ಕಾರೇ ಇರಲಿ ನನಗೆ –*

ಎಂದು ಜಗದ್ಗುರುಗಳು ವೈರಾಗ್ಯವನ್ನು ಬೋಧಿಸುತ್ತ ಮೆರವಣಿಗೆ ಹೊರಡಬಹುದು !

ಇನ್ನು, ವೀರಶೈವ ಸ್ವಾಮಿಗಳ ಅಡ್ಡಪಲ್ಲಕ್ಕಿ ಉತ್ಸವವನ್ನು ಆಕ್ಷೇಪಿಸಿದ ಬ್ರಾಹ್ಮಣರ ಬಗೆಗಾಗಲಿ, ಬ್ರಾಹ್ಮಣರನ್ನು 'ಚೆನ್ನಾಗಿ ಥಳಿಸಿದ' ಲಿಂಗಾಯಿತರ ಬಗೆಗಾಗಲಿ ಬಹುತೇಕ 'ಹೊಸತು' ಓದುಗರಿಗೆ ಅಂಥ ಆಸಕ್ತಿಯೇನೂ ಇರಲಿಕ್ಕಿಲ್ಲ. ಬುದ್ಧಿಗೇಡಿತನದ ಮೇಲೆ ಯಾವೊಂದು ಜಾತಿಗೂ ಸರ್ವಸ್ವಾಮ್ಯದ ಹಕ್ಕಿಲ್ಲವಷ್ಟೆ.

*ಬೆಂಗಳೂರು* ***ಕೆ. ಎಲ್. ಗೋಪಾಲಕೃಷ್ಣಯ್ಯ***

ಸಂಗಮೇಶ ಸವದತ್ತಿಮಠ ಅವರ 'ಅಡ್ಡಪಲ್ಲಕ್ಕಿ ಉತ್ಸವ'ದ ಬಗ್ಗೆ ಇರುವ ಲೇಖನ ಸಕಾಲಿಕವಾಗಿದೆ, ಏಕೆಂದರೆ ಹೊಸ ಸಾಮಾಜಿಕ ಚಿಂತನೆಗೆ ಈ ಲೇಖನ ಅವಕಾಶ ಮಾಡಿಕೊಡುತ್ತದೆ. ಬದಲಾವಣೆಯೇ ಬೆಳವಣಿಗೆಯ ಲಕ್ಷಣ ಎಂಬ ತಾತ್ವಿಕ ನಿಲುವು ಹೇಳುತ್ತಾ ಲೇಖಕರು ಪಂಚಾಚಾರ್ಯರನ್ನು ಕಿತ್ತೂರಿನವರಂತೆ ಕಾರಿನಲ್ಲಿ ಮೆರೆಸಲಿ ಎಂದು ಹಾರೈಸಿದ್ದಾರೆ. ಬದಲಾವಣೆ ಎಂಬ ಶಬ್ದದ ಅರ್ಥ ಲೇಖಕರು ತಿಳಿದರೆ ಒಳಿತು. ಎಲ್ಲ ಬದಲಾವಣೆಗಳು ಬೆಳವಣಿಗೆಗಳಲ್ಲ. ಬೆಳವಣಿಗೆಯ ಹಲವು ಸಿದ್ಧಾಂತಗಳಿವೆ. ಲಿಂಗಾಯತರು (ವೀರಶೈವರು) ಸಂಘರ್ಷದ ಮೂಲಕ ಬೆಳವಣಿಗೆ ಹೊಂದಿದ್ದಾರೆ. ಒಂದು ಕಾಲಕ್ಕೆ ಲಿಂಗಾಯತ ತನ್ನ ಹೊರಬಾಂಧವರೊಡನೆ ಘರ್ಷಣೆಗೆ ಇಳಿದರೆ, ಈಗ ಒಳಬಾಂಧವರ ಸಂಗಡ ಘರ್ಷಣೆಗೆ ಇಳಿಯಬೇಕಾಗಿದೆ. ಬ್ರಾಹ್ಮಣೀಕರಣದತ್ತ ಒಂದು ಕಾಲಕ್ಕೆ ಲಿಂಗಾಯತರು ಹೆಜ್ಜೆ ಹಾಕಿದರು. ೧೯-೨೦ನೇ ಶತಮಾನದ ಕೊನೆಗೆ ವಿರಕ್ತ ಸ್ವಾಮಿಗಳ ಪ್ರಭಾವದಿಂದ ಕರ್ನಾಟಕದಲ್ಲಿ ಲಿಂಗಾಯತೀಕರಣ ಪ್ರಕ್ರಿಯೆ ಪ್ರಾರಂಭವಾಯಿತು. ಈಗ ಎಲ್ಲ ವೀರಶೈವ ಲಿಂಗಾಯತರು ಹಿಂದುಳಿದವರ ಪಟ್ಟಿಯಲ್ಲಿ ಸೇರಲು ಹಾತೊರೆಯುತ್ತಿದ್ದಾರೆ.

ಸಮಾನತೆಯ ಪರಿಕಲ್ಪನೆಯನ್ನೇ ಲೇಖಕರು ಲೇವಡಿ ಮಾಡಿದ್ದಾರೆ. ಸಮಾನತೆಯ ತತ್ವ ಹೊಂದಿದ ಸರಕಾರಗಳು ಸೋತಿವೆ. ಆದರೆ ಸಮಾನತೆಯನ್ನು ನಿರಾಕರಿಸುವುದು 'ಹೇಸಿತನ' ಎನಿಸುತ್ತದೆ. ಆದರ್ಶಗಳತ್ತ ಹೆಜ್ಜೆ ಹಾಕುವುದು ಮನುಷ್ಯರಾದವರ ಲಕ್ಷಣ.

ವಚನಗಳನ್ನು ಉದಾಹರಿಸುತ್ತ ಪಂಚಾಚಾರ್ಯರ ಮೆರವಣಿಗೆಯು ಅಧ್ಯಾತ್ಮದ ಶಕ್ತಿ ಸಂಚಯದ ಮೆರವಣಿಗೆ ಎಂದಿದ್ದಾರೆ, ಹಾಗೂ ಪಲ್ಲಕ್ಕಿ ಏರಿದವರ ತೊಂದರೆ ಹೇಳಿದ್ದಾರೆ. ಕನ್ನಡ ವಿದ್ವಾಂಸರಾದ ಸವದತ್ತಿಮಠ ಅವರಿಗೆ ಗೊತ್ತಿದೆ: ಇತಿಹಾಸವನ್ನು ಎಷ್ಟೋ ಮಠಗಳು ತಿರುಚಿ ದಾಖಲಿಸಿಕೊಂಡಿವೆ ಎಂಬುದು. ಅಲ್ಲದೆ ವಚನಗಳು ಧಾರ್ಮಿಕ ಚಿಂತನೆಗಿಂತ ಸಾಮಾಜಿಕ ಚಿಂತನೆಯನ್ನು ಹೆಚ್ಚು ಒಳಗೊಂಡಿವೆ. ಇಂದು ವಚನಗಳನ್ನು ಮೆಚ್ಚುವವರು ಅವು ಹೊಂದಿದ ಸಿದ್ಧಾಂತಗಳಿಗಾಗಿ ಅಲ್ಲ, ಅವು ಒಳಗೊಂಡ ಸಾಮಾಜಿಕ ನಿಲುವಿಗಾಗಿ ಎಂಬುದನ್ನು ಮರೆಯುವಂತಿಲ್ಲ. 'ಮಲ' ಹೊರುವ ಪದ್ಧತಿಯನ್ನು ನಿಷೇಧಿಸಿದಂತೆ, ಅಡ್ಡಪಲ್ಲಕ್ಕಿಯಲ್ಲಿ ಸ್ವಾಮಿಗಳ ಮೆರವಣಿಗೆಯನ್ನು ನಿಷೇಧಿಸಬೇಕೆಂಬ ವಾದವನ್ನು ಓದಿದ ನೆನಪು. ಈಗಾಗಲೆ ವಿರಕ್ತ ಸ್ವಾಮಿಗಳು ಅಡ್ಡಪಲ್ಲಕ್ಕಿಯಲ್ಲಿ ವಚನಗಳ ಕಟ್ಟುಗಳನ್ನು ಮೆರವಣಿಗೆ ಮಾಡುತ್ತಾರೆ. ಆದರೆ ಪಂಚಾಚಾರ್ಯರು ಹಣ ನೀಡಿ ಮೆರವಣಿಗೆ ಮಾಡಿಸಿಕೊಳ್ಳುತ್ತಾರೆ ಎಂದು ಕೇಳಿದ್ದೇನೆ. ನೀಡುವವರು ಇರುವವರೆಗೆ ಬೇಡುವವರು ಇರುತ್ತಾರೆ. ಅದರಂತೆ ಹೊರುವವರು ಇರುವವರೆಗೆ ಹೆಗಲೇರುವವರು ಇರುತ್ತಾರೆ. ಗುಲಾಮಗಿರಿ ಸತ್ತೆ ಬಗ್ಗೆ ಸವದತ್ತಿಮಠರು ಆಲೋಚಿಸಲಿ ಎಂದು ಹಾರೈಸುವೆ.

ಹುನಗುಂದ, ಬಾಗಲಕೋಟೆ ***ಮಹೇಶ ತಿಪ್ಪಶೆಟ್ಟಿ***

ಪ್ರೊ|| ಸವದತ್ತಿಮಠ ಅವರು ಬೇರೆಲ್ಲವನ್ನೂ ಬಿಟ್ಟು ಪಲ್ಲಕ್ಕಿಯಲ್ಲಿ ಸ್ವಾಮಿಗಳನ್ನು ಹೊರುವ ಅಸಹ್ಯ ಪದ್ಧತಿಯ ಬಗ್ಗೆ ಸಂಶೋಧನೆ ನಡೆಸಿರುವುದು ನಿರರ್ಥಕ. ಹಿಂದೆಲ್ಲಾ ಹೇಗಿತ್ತೆಂದು ತಿಳಿಸಿ ಅದಕ್ಕೆ ಎಷ್ಟೇ ಸಮರ್ಥನೆ ನೀಡಿದರೂ ವರ್ತಮಾನ ಮತ್ತು ಭವಿಷ್ಯದಲ್ಲಿ ಅದರ ಪ್ರಸ್ತುತತೆ ಸೊನ್ನೆಯೇ ಆಗಿರುತ್ತದೆ. ಅಸ್ಪೃಶ್ಯತೆಯು ಎಷ್ಟು ಆಳವಾಗಿ ಬೇರೂರಿತ್ತೆಂದು ನೂರು ನಿದರ್ಶನಗಳನ್ನು ನೀಡಿದರೆ ಅದು ಇಂದಿಗೆ ಸರಿಯೆಂದು ತೀರ್ಮಾನವಾಗುವುದಿಲ್ಲ. ಕೆಲವರು ಜೀವಂತ ಶವಗಳು. ಬೌದ್ಧಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅವರ ಮನಸ್ಸು ಸತ್ತಿದೆ. ಜನರನ್ನು ನೋಡಲು ಅವಕ್ಕೆ ಕಣ್ಣಿಲ್ಲ. ಆದ್ದರಿಂದ ಅವನ್ನು ಪಲ್ಲಕ್ಕಿಯಲ್ಲಿ ಹೊರುವ ಅಭ್ಯಾಸವಿದ್ದಿರ ಬಹುದು. ಇಂದು ಅವರ ಕಣ್ಣು ತೆರೆಸಿ ಮಾನವರಂತೆ ವರ್ತಿಸುವುದನ್ನು ಕಲಿಸಬೇಕು. ರಾಷ್ಟ್ರಪತಿ, ಅಧಿಕಾರಿ, ಕಾರಕೂನ ಇತ್ಯಾದಿ ಉದಾಹರಣೆಗಳು ಪ್ರಯೋಜನವಿಲ್ಲ. ಏಕೆಂದರೆ, ಅವರನ್ನು ಯಾರೂ ಹೊತ್ತು ಪುನೀತರಾದೆವೆಂದು ಭ್ರಮಿಸುವುದಿಲ್ಲ. ಮಾನ್ಯ ಸವದತ್ತಿಮಠ ಅವರು ಇಂತಹ ಸಂಶೋಧನೆಗಳನ್ನು ಮಾಡಿ ಪಲ್ಲಕ್ಕಿಯ ಹೆಣಭಾರವನ್ನು ಅವರ ಹೆಗಲ ಮೇಲೆ ಹೇರಿಕೊಳ್ಳುವುದು ಬೇಡ. ಸಮಾಜಮುಖಿ ವಿಷಯಗಳತ್ತ ಗಮನಹರಿಸಿದರೆ ಅವರ ಬೌದ್ಧಿಕ ಆರೋಗ್ಯಕ್ಕೆ ಹಿತವಾಗಬಹುದು.

ನಾಗಮಂಗಲ **ಎಸ್. ವಿ. ವೀರಭದ್ರಯ್ಯ**

**ಅನಂತಮೂರ್ತಿ ಅವರ ಪ್ರತಿಕ್ರಿಯೆ ಬಗ್ಗೆ...**

ಡಾ|| ಯು. ಆರ್. ಅನಂತಮೂರ್ತಿ ಅವರ ಪ್ರತಿಕ್ರಿಯೆ ಯಲ್ಲಿ ಆತ್ಮನಿವೇದನೆ, ಆತ್ಮನಿರೀಕ್ಷಣೆ, ವಿಷಾದ, ವಿನಯ ಎಲ್ಲವೂ ಇವೆ. ಆದರೆ ನಾನು ಎತ್ತಿದ ಪ್ರಶ್ನೆಯ ಬಗ್ಗೆ ಅವರು ನನ್ನ ಜೊತೆ ಮಾತನಾಡುತ್ತಿಲ್ಲ. 'ಸಾಮಾನ್ಯ ಶಾಲಾ ಪದ್ಧತಿ' ಬಗೆಗಿನ ಚಿಂತನೆ ಅನಂತಮೂರ್ತಿಯವರ ಸೃಷ್ಟಿಯಲ್ಲ; ಅದಕ್ಕೊಂದು ಶೈಕ್ಷಣಿಕ ಇತಿಹಾಸವಿದೆ. ಅದರ ಬಗೆಗೆ ರಾಷ್ಟ್ರಮಟ್ಟದಲ್ಲಿ ಇಪ್ಪತ್ತು ಮೂವತ್ತು ವರ್ಷಗಳ ಹಿಂದೆಯೇ ವ್ಯಾಪಕ ಚರ್ಚೆ ನಡೆದಿದೆ. ಸಾಮಾನ್ಯ ಶಾಲಾ ಪದ್ಧತಿಯ ಅನುಷ್ಠಾನ ಆಗಿನ ಸಾಮಾಜಿಕ ಆರ್ಥಿಕ ಸಂದರ್ಭದಲ್ಲೇ ಕೈಮೀರಿದ ಸಂಗತಿ ಆಗಿತ್ತು ಎಂಬುದನ್ನು ಅನಂತಮೂರ್ತಿ ಯವರು ಗಮನಿಸಿದಂತಿಲ್ಲ ಎಂಬುದು ನನ್ನ ಆತಂಕ.

ಸಾಮಾನ್ಯ ಶಾಲಾ ಪದ್ಧತಿ ಒಂದು ವಿಚಾರವಾಗಿ ಸುಂದರ ವಾಗಿದೆ. ಎಲ್ಲರೂ ತಲೆದೂಗಬೇಕಾದ ವಿಚಾರವೇ ನಿಜ. ಆದರೆ ಅದನ್ನು ಕೇವಲ ವಿಚಾರದ ನೆಲೆಯಲ್ಲಿ ಗ್ರಹಿಸಿ ಚರ್ಚಿಸಿ 'ಆತ್ಮ ಮೋಕ್ಷ' ಎನ್ನುವುದು ನನ್ನಂಥವನಿಗೆ ಸಾಧ್ಯವಿಲ್ಲ. ಈ ವಿಚಾರ ವಾಸ್ತವದಲ್ಲಿ ಹೇಗೆ ಅರಳುತ್ತದೆ ? ಅನುಷ್ಠಾನಯೋಗ್ಯವೆ ? ಅನುಷ್ಠಾನಗೊಳಿಸಲು ಸಾಧ್ಯವಾಗುವ ಸ್ಥಿತಿ ಇದೆಯೆ ? ಬಾಧಕಗಳೇನು ? ಎಂಬಂಥ ಪ್ರಶ್ನೆಗಳನ್ನು ಕೇಳಿಕೊಳ್ಳದೆ, ಕಠೋರ ವಾಸ್ತವವನ್ನು ಪರಿಶೀಲಿಸದೆ ಇರಲು ಸಾಧ್ಯವಿಲ್ಲ.

ಶೈಕ್ಷಣಿಕ ಆದರ್ಶಗಳ ಬಗ್ಗೆ ಯೋಚಿಸುವಾಗಲೆಲ್ಲ ನಾನು ವಾಸ್ತವವನ್ನು ಗಮನಿಸುತ್ತೇನೆ; ವಾಸ್ತವವನ್ನು ಕುರಿತು ಚಿಂತಿಸು ವಾಗ ಪ್ರಯೋಗಸಾಧ್ಯ ಆದರ್ಶಗಳನ್ನು ಹಂಬಲಿಸುತ್ತೇನೆ. ಕೇವಲ ವಿಚಾರದ ನೆಲೆಯ ಆದರ್ಶಗಳ ಬಗ್ಗೆ ನನಗೆ ಅಷ್ಟೊಂದು ಆಸಕ್ತಿಯಿಲ್ಲ. ಲೇಖನದಲ್ಲಿ ವೈಯಕ್ತಿಕ ವಿವರಗಳ ಪ್ರಸ್ತಾಪದಿಂದ ನಾನು ಗೌರವಿಸುವ ಹಿರಿಯಜೀವ ಅನಂತ ಮೂರ್ತಿ ಅವರಿಗೆ ನೋವಾಗಿದ್ದರೆ ವಿಷಾದಿಸುತ್ತೇನೆ.

ಉಡುಪಿ **ಮಹಾಬಲೇಶ್ವರ ರಾವ್**

ಕನ್ನಡದ ಒಳ್ಳೆಯ ಬರಹಗಾರರಲ್ಲೊಬ್ಬರಾದ ಅನಂತ ಮೂರ್ತಿಯವರಿಗೆ ಪ್ರತಿಕ್ರಿಯೆಯ ಪರಿಧಿಯನ್ನು ಹೇಳಿ ಕೊಡಬೇಕಾದ ಅಗತ್ಯವಿಲ್ಲ. ಯಾವುದೇ ವಿಚಾರದ ಕುರಿತು ಯಾರೂ ಪ್ರತಿಕ್ರಿಯಿಸಬಹುದು/ಬಲ್ಲರು. ವಿವಾದಾಂಶಾ ಧಾರಿತ ಚರ್ಚೆ ಸ್ವಾಗತಾರ್ಹ. ಆದರೆ ತನ್ನ ನಡವಳಿಕೆ ಲೋಕದ ಕಣ್ಣಿಗೆ ಕಂಡದ್ದು ಸರಿಯಿಲ್ಲವೆಂದು ವಾದಿಸುವುದು ಸಮರ್ಥನೀಯವಲ್ಲ. ಶಾಸನಾತ್ಮಕವಾದ ಇಲ್ಲವೇ ಪ್ರಭು ಸಂಹಿತೆಯಂತಹ ಆರೋಪಗಳಿಗಷ್ಟೇ ಪ್ರಜೆ ಉತ್ತರಿಸಬೇಕು. ಇದು ಕಡ್ಡಾಯ. ಉಳಿದದ್ದೆಲ್ಲ ಐಚ್ಛಿಕ.

ಮಹಾಬಲೇಶ್ವರ ರಾವ್ ಅನುದ್ದೇಶಿತವಾಗಿಯೆಂಬಂತೆ ಅನಂತಮೂರ್ತಿಯವರನ್ನು ಗುರಿಯಿಟ್ಟರು. ಸಾಮಾನ್ಯ ಶಾಲಾ ವ್ಯವಸ್ಥೆ/ಪದ್ಧತಿಯ ಬಗ್ಗೆ ಅನಂತಮೂರ್ತಿ ಮಾತ ನಾಡಿದ್ದರ ಕುರಿತು ಮೌಲಿಕವಾಗಿ ತನ್ನ ಭಿನ್ನಾಭಿಪ್ರಾಯ ವೇನೆಂದು ರಾಯರು ಸ್ಪಷ್ಟಪಡಿಸುವುದಿಲ್ಲ. ಆದರೆ ರಾಯರ ಲೇಖನವನ್ನು ಗಮನಿಸಿದರೆ ಅವರು ಅನಂತಮೂರ್ತಿಯವರ ವಿಚಾರದ ಪರ-ವಿರೋಧಕ್ಕಿಂತ ಅವರ ಅಧಿಕಾರ ವ್ಯಾಪ್ತಿಯ ಮತ್ತು ಅವರು ಹೇಳಿದ್ದರ ಮತ್ತು ಹೇಳಬೇಕಾಗಿತ್ತೆಂದು ರಾಯರು ಭಾವಿಸುವ ಅಂಶಗಳ ಕುರಿತು ಹೇಳಿದಂತೆ ಕಾಣಿಸುತ್ತದೆ. ಮಾಮೂಲಾಗಿ ನಮ್ಮ ಎಲ್ಲ ವಿಮರ್ಶಕರು ಮಾಡುವ ತಪ್ಪನ್ನೇ ರಾಯರೂ ಮಾಡುತ್ತಾರೆ; ''ಸಾಮಾನ್ಯ ಶಾಲಾ ಪದ್ಧತಿ ಬಗ್ಗೆ ಮಾತನಾಡುವಾಗ ಅನಂತಮೂರ್ತಿ ಯವರು ಅದರ ಇತಿಹಾಸದ ಬಗ್ಗೆ ಏನನ್ನೂ ಹೇಳುವುದಿಲ್ಲ'' ಎಂಬಾಗ ಲೇಖಕರು ಏನು ಹೇಳಿದ್ದಾರೆಂಬುದು ಮುಖ್ಯವೇ ಹೊರತು ಏನನ್ನು ಹೇಳಿಲ್ಲ ಎಂಬುದಲ್ಲ ಎಂಬ ಅಂಶವನ್ನು ಮರೆಯುತ್ತಾರೆ. ಅವರು ಹೇಳದಿದ್ದರೆ ಹೋಗಲಿ, ನಾವು ಹೇಳೋಣ, ಅವರೇ ಹೇಳಬೇಕೆಂಬ ಹಠ ಯಾಕೆ ?

ಹೀಗೆ ಹಾದಿತಪ್ಪಿದ ಚರ್ಚೆಗೆ ಅನಂತಮೂರ್ತಿಯವರು ಉತ್ತರಿಸಲು ಮತ್ತು ಸಮರ್ಥಿಸಿಕೊಳ್ಳಲು ಯತ್ನಿಸಿ ಮತ್ತಷ್ಟು ದಿಕ್ಕುಗೆಡಿಸಿದಂತಾಗಿದೆ. ಅನಂತಮೂರ್ತಿಯವರು ದಯನೀಯ ವಾಗಿ ತನ್ನ ಬಗ್ಗೆ ಹೇಳುತ್ತಾರೆ. ವರ್ತಮಾನದ ಬಗ್ಗೆ ಎಲ್ಲ ಚಿಂತಕರಿಗೂ ಕಾಳಜಿ ಬೇಕು. ಆದರೆ ಭವಿಷ್ಯದ ಬಗ್ಗೆ ಅದಕ್ಕೂ ಹೆಚ್ಚಿನ ಕಾಳಜಿ ಬೇಕು. ವರ್ತಮಾನ-ಭವಿಷ್ಯಗಳ ನಡುವೆ ಆಯ್ಕೆ ಬಂದಾಗ ಚಿಂತಕ/ಬುದ್ಧಿಜೀವಿ ಭವಿಷ್ಯವನ್ನು ಆಯ್ದುಕೊಳ್ಳಬೇಕು. ತನ್ನ ಕಾಲದ ಅಥವಾ ತನ್ನ ಸುತ್ತಲಿನ ಜನರನ್ನು ಪ್ರೀತಿಸಬೇಕು, ನಿಜ. ಆದರೆ ಅವರೇ ತನ್ನ ಪ್ರಭಾವಳಿಗೆ ಕಾರಣರೆಂಬಂತೆ ಬಿಂಬಿಸಬಾರದು. ಪ್ರತಿಯೊಬ್ಬನ ಸಾಧನೆಗೆ ವಿಶಿಷ್ಟವಾದ ಮಾನದಂಡವಿರುತ್ತದೆ. ಅದರ ಹಂಗು ಆತನಿಗಿರಬಾರದು. ಅನಂತಮೂರ್ತಿಯವರ ಸಮರ್ಥನೆಗಳು ವಿದ್ಯಾರ್ಥಿಯೊಬ್ಬ ತನ್ನ ಪ್ರೌಢ ಪ್ರಬಂಧವನ್ನು ಒಪ್ಪಿಗೆಗಾಗಿ ಮಾರ್ಗದರ್ಶಿಗಳಿಗೆ ಒಪ್ಪಿಸಿದಂತಾಗಿದೆ. ಅಧ್ಯಾಪಕನ ಮಗ ಅಧ್ಯಾಪಕನಾಗಬೇಕೆಂಬ, ವಕೀಲನ ಮಗ ವಕೀಲನಾಗ ಬೇಕೆಂಬ, ವೈದ್ಯನ ಮಗ ವೈದ್ಯನಾಗಬೇಕೆಂಬ ತರ್ಕಗಳಿವೆ. ಒಂದು ತಲೆಮಾರು ಇನ್ನೊಂದು ತಲೆಮಾರಿನ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಈ ಪ್ರಜ್ಞೆಗೆ ಏನೆನ್ನಬೇಕು ? ಇದೇ ಹಾದಿಯ ಸಮಸ್ಯೆ ಶಿಕ್ಷಣ ಮಾಧ್ಯಮದ್ದು : ಕನ್ನಡದ ಕುರಿತು ಮಾತನಾಡ ಬೇಕಾದರೆ ಮಕ್ಕಳು ಕನ್ನಡ ಮಾಧ್ಯಮದಲ್ಲೇ ಓದಿರಬೇಕು ಎಂಬ ತರ್ಕ.

ಇಷ್ಟಾಗಿಯೂ ಅನಂತಮೂರ್ತಿಯವರ ಸಮರ್ಥನೆಗೆ ತ್ರಾಣ ಬರುವುದಾದರೆ ಅದು ಅವರು ಹೇಳುವ ''ಅದಕ್ಕಾಗಿ ಚಳುವಳಿಯೊಂದನ್ನು ನಾನು ನಡೆಸುವಷ್ಟು ಹಕ್ಕು ತಿಳಿದಂತೆ ಎಲ್ಲ ವಿಷಯಗಳಲ್ಲೂ ಬಾಳಲಾರದೇ ಹೋದ ನನ್ನಂತಹ ಅನೇಕರಿಗೆ ಇಲ್ಲವೆಂಬುದು ನನಗೂ ವಿಷಾದದ ಸಂಗತಿಯೇ'' ಎಂಬ ಅಂತಿಮ ಸತ್ಯದಿಂದ. (ಇಲ್ಲೂ ''ನನ್ನಂತಹ ಅನೇಕರಿಗೆ'' ಎಂಬಲ್ಲಿ ಸಮೂಹ ಪ್ರಜ್ಞೆ ಮತ್ತು ತನ್ನ ಸಮಾನ ಶೀಲನೊಬ್ಬನನ್ನು ಹುಡುಕುವ ಜಾಣತನವಿದೆ !)

ಮಡಿಕೇರಿ **ಬಾಲಸುಬ್ರಹ್ಮಣ್ಯ ಕಂಜರ್ಪಣೆ**

**ಪ್ರಶ್ನೆಯಲ್ಲ, ಪ್ರಶಂಸೆ !**

ಈರಪ್ಪ ಎಂ. ಕಂಬಳಿಯವರು ತಮ್ಮ 'ರಾಮನ ಕಟ್ಟೆ ಭೀಮನ ಕಟ್ಟೆ' ಲೇಖನದಲ್ಲಿ, ನೇಮಿಚಂದ್ರನ ''ಕಟ್ಟುಗೆ, ಕಟ್ಟದಿರ್ಕೆ...'' ಎಂಬ ಪದ್ಯದ ಕಡೆಯ ಪಾದವನ್ನು ತುಸು ತಪ್ಪಾಗಿ ಅರ್ಥಮಾಡಿಕೊಂಡಿದ್ದಾರೆ. ಅದರಲ್ಲಿರುವುದು ''ಅದೇನು ಹಿರಿಮೆಯೇ ?'' ಎಂಬ ಪ್ರಶ್ನಾರ್ಥಕ ವ್ಯಂಗ್ಯವಲ್ಲ; ''ಕವೀಂದ್ರರ ಶಕ್ತಿ ಅದೆಷ್ಟು ಹಿರಿದೋ !'' ಎಂಬ ಆಶ್ಚರ್ಯಾತ್ಮಕ ಪ್ರಶಂಸೆ.

ಮೈಸೂರು **ಸಿ.ಪಿ.ಕೆ.**

ಸ್ವಾತಂತ್ರ್ಯ ಹೋರಾಟದ ಸಂದರ್ಭದ ''ದಾವಣಗೆರೆ ಜಿಲ್ಲೆಯ ಸ್ವದೇಶಿ ಚಳುವಳಿ''ಯು ಕರ್ನಾಟಕ ನಮ್ಮ ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಹೇಗೆ ದನಿಗೂಡಿಸಿತೆಂಬ ಪರಿಚಯ ಮಾಡಿಸಿತು. ಕೈಗಾರಿಕಾ ಬಂಡವಾಳದ ಸ್ವಾಮ್ಯದ ಶಕ್ತಿಯನ್ನು ಅದರಲ್ಲೂ ಬ್ರಿಟಿಷರ ಏಕಸ್ವಾಮ್ಯವನ್ನು ಬಗ್ಗು ಬಡಿಯುವಲ್ಲಿ ಈ ತರಹದ ಚಳುವಳಿಗಳ ಅವಶ್ಯಕತೆಯನ್ನೂ ಸಹ ಪ್ರತಿಬಿಂಬಿಸಿ ಓದುಗರಿಗೆ ಚರಿತ್ರೆ ತಿಳಿಸಿದೆ.

ಇತ್ತೀಚಿನ ದಶಕದಲ್ಲಿ ಜಾಗತೀಕರಣವೆಂಬ ಹೊಸ ಆಯಾಮವೂ ಇದೇ ರೀತಿಯಲ್ಲಿ ನಮ್ಮ ದೇಶದ ಆರ್ಥಿಕ ಸ್ವಾತಂತ್ರ್ಯಕ್ಕೆ ಕುಂದು ತರುತ್ತಿದೆ. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಬಿಂಬಿಸುವಂತಹ ದಿಶೆಯಲ್ಲಿ ಇಂದಿಗೂ ಇವುಗಳ ಅಗತ್ಯತೆಯ ಅರಿವು ಮೂಡಿಸಿದೆ.

ವಿಜಯನಗರ, ಬೆಂಗಳೂರು **ನೆ. ಲ. ರಾಮಮೂರ್ತಿ**

**ಗೋಮಾತೆ**

ಏನೂ ಅರಿಯದ ಮುಗ್ಧ ಜನರನ್ನು ಪವಿತ್ರತೆಯ ಸೋಗಿನಲ್ಲಿ ಜನಪರ ಇದ್ದವರನ್ನು ದನಪರವಾಗಿ ತಯಾರು ಮಾಡುತ್ತಿರುವುದು ಪುರೋಹಿತಶಾಹಿಯ ಒಂದು ಷಡ್ಯಂತ್ರ ವಾಗಿದೆ. ಎಲ್ಲ ಸಂಸ್ಕೃತದಲ್ಲಿರುವ ಮಂತ್ರಗಳನ್ನು ಜನರಾಡುವ ಭಾಷೆಯಲ್ಲಿ ಏಕೆ ಭಾಷಾಂತರಿಸಿಲ್ಲ ಎಂಬ ಲೇಖಕರ ಮಾತು ಇವರ ತಂತ್ರವನ್ನೇ ಬಯಲಿಗೆ ಹಾಕಿದೆ. ಮುಸ್ಲಿಮರಿಗೆ ಕಟುಕರ ಪಟ್ಟ ಮತ್ತು ಕ್ರಿಶ್ಚಿಯನ್‌ರಿಗೆ ಮತಾಂತರಿಗಳ ಪಟ್ಟ ಕಟ್ಟಿ ಮುಗ್ಧ ಜನರ ಭಾವನೆಗಳಿಗೆ ಬೆಂಕಿ ಹಚ್ಚುತ್ತಿದ್ದಾರೆ. ಇವರಿಗೆ ಗೋವು ಮಾತ್ರ ಪವಿತ್ರ ಯಾಕೆ ? ಇನ್ನುಳಿದ ಹಯನನ್ನು ಕೊಡುವ ಎಮ್ಮೆ, ಆಡು ಇಂತಹ ಪ್ರಾಣಿಗಳು ಪವಿತ್ರವಲ್ಲವೇ ? ಹಿಂದೆ ಯಜ್ಞದ ನೆವದಿಂದ ಮಾಂಸ ತಿನ್ನುತ್ತಿದ್ದ ಇವರು ದಲಿತರಿಗಿಂತಲೂ ತಾವು ಹೆಚ್ಚು ಎಂದು ತೋರಿಸಿಕೊಳ್ಳಲು ಮಾಂಸಾಹಾರ ತ್ಯಜಿಸಿದ್ದಾರೆ ಎಂಬ ಡಾ|| ಅಂಬೇಡಕರ ಅವರ ಮಾತು ಸತ್ಯವಾದದ್ದು.

ಜನತೆ ಎಲ್ಲಿಯವರೆಗೆ ಕುತಂತ್ರಗಳನ್ನು ತಿಳಿದುಕೊಂಡು ನಡೆಯುವುದಿಲ್ಲವೋ ಅಲ್ಲಿಯವರೆಗೆ ಇವರ ಇಂತಹ ಗೋಚಳುವಳಿಗಳು, ಯಜ್ಞ ಯಾಗಗಳು ನಿರಂತರವಾಗಿ ನಡೆಯುತ್ತಲೇ ಇರುತ್ತವೆ.

ಕಲಬುರ್ಗಿ — *ಶಿವಣ್ಣ ಇಜೇರಿ*

### ಮಾರ್ಚ್ ಸಂಚಿಕೆ

'ಸ್ವಾತಂತ್ರ್ಯ ಹೋರಾಟಗಾರ ಕಿಟ್ಟಪ್ಪಗೌಡರು' ಲೇಖನ ಸಕಾಲಿಕ. ೧೯೪೨ರ 'ಭಾರತ ಬಿಟ್ಟು ತೊಲಗಿ' ಆಂದೋಳನದಲ್ಲಿ ಅವರ ಸಕ್ರಿಯ ಹೋರಾಟಗಾಥೆ ಮೈನವಿರೇಳಿಸುವಂತಹದು. ಅದರ ವಿವರಗಳು ಲೇಖನದಲ್ಲಿ ಸವಿವರವಾಗಿ ಮೂಡಿಬಂದಿವೆ. ಹೆಂಡದಂಗಡಿಗಳ ಮುಂದೆ ಅವರು ಜರುಗಿಸುತ್ತಿದ್ದ ಪಿಕೆಟಿಂಗ್‌ಗಳಲ್ಲಿ ಆಗ ಪ್ರಾಥಮಿಕ ಶಾಲಾ ವಿದ್ಯಾರ್ಥಿಯಾಗಿದ್ದ ನಾನು ಧಿಕ್ಕಾರ ಹಾಕುತ್ತಿದ್ದುದರ ನೆನಪಿದೆ. ಅವರ ಚಟುವಟಿಕೆಗಳನ್ನು ಹತ್ತಿಕ್ಕಲು 'ಕಂಡಲ್ಲಿ ಗುಂಡು' ಆದೇಶ, ಮೇಗರವಳ್ಳಿಯ ಹತ್ತಿರದ ಚೇಪು ಗುಡ್ಡಗಾಡಿನಲ್ಲಿ ಪೊಲೀಸರು ಅವರನ್ನು ಅಟ್ಟಾಡಿಸುತ್ತಿದ್ದುದು ನಮ್ಮಲ್ಲಿ ಭಯ-ಭೀತಿಗಳನ್ನುಂಟು ಮಾಡುತ್ತಿತ್ತು. ಅಣುವಳ್ಳಿ ಮೋರಿಯನ್ನು ಕೆಡವಿದ್ದ ಕುರಿತು ಅವರು ರಚಿಸಿದ್ದ ಲಾವಣಿ ''ಅಣುವಳ್ಳಿಯ ಮೋರಿಯನ್ನು ಯಾರೋ ಕಡಿದರಂತಲ್ಲಾ, ನಿರಪರಾಧಿಯೊಬ್ಬನಿಗೆ ಶಿಕ್ಷೆಯಂತಲ್ಲಾ...!'' ಇನ್ನೂ ಅನುರಣಿಸುವಂತಿದೆ! ಇಂದು ತಮ್ಮ ಇಳಿ ವಯಸ್ಸಿನಲ್ಲೂ ನಿಸ್ವಾರ್ಥ, ಆದರ್ಶ ಜೀವನ ನಡೆಸುತ್ತಿರುವ ಅವರು ನೂರ್ಕಾಲ ಬಾಳಲಿ.

ಶಿವಮೊಗ್ಗ — *ಡಾ|| ಎಚ್. ಡಿ. ಚಂದ್ರಪ್ಪಗೌಡ*

ಮಾರ್ಚ್ ೨೦೦೮ರ ಸಂಚಿಕೆಯಿಂದ ನಾನೂ ಖಾಯಂ 'ಹೊಸತು' ಓದುಗನಾಗಿದ್ದೇನೆ. ಅದು ಒಳಗೊಂಡಿರುವ ವಸ್ತು, ವಿಷಯ, ವೈವಿಧ್ಯಗಳು ಅಗಾಧವಾಗಿವೆ.

ಈ ಬಾರಿಯ ಸಂಪಾದಕೀಯ ಬಾಲಕಾರ್ಮಿಕರ ಶಿಕ್ಷಣದ ಕುರಿತು ವಿಸ್ತೃತವಾಗಿ ಅವಲೋಕಿಸಿದೆ. ಅಷ್ಟಕ್ಕೂ ಈ ಬಾಲಕಾರ್ಮಿಕತೆ ಹೇಗೆ ಉಂಟಾಗುತ್ತಿದೆ? ಹೆತ್ತವರ ದುಡಿಮೆ ಮನೆಮಂದಿಯ ಹೊಟ್ಟೆಗೆ ಸಾಲದೇ ಬಂದಾಗ ತಾನೆ! ಹಾಗಾದರೆ ಆ ಹೆತ್ತವರ ಆಯವ್ಯಯದ ಬಗ್ಗೆ ಸೂಕ್ತವಾದ ಒಂದು ರೂಪುರೇಷೆಯನ್ನು ಕಂಡುಕೊಳ್ಳಬೇಕಲ್ಲ? ಬಾಲಕಾರ್ಮಿಕರ ಸಮೀಕ್ಷೆ ಮಾಡುವಾಗಲೇ ಅವರು ಬಾಲಕಾರ್ಮಿಕರಾಗಬೇಕಾಗಿ ಬರುವ ಅನಿವಾರ್ಯತೆಗಳ ಬಗ್ಗೆ ಕೂಡ ಕೂಲಂಕಷ ಅಧ್ಯಯನ ಮಾಡಿ ಪೋಷಕರ ಸಮಸ್ಯೆಗಳನ್ನು ದಾಖಲಿಸಿಕೊಂಡು ಸೂಕ್ತ ಪರಿಹಾರೋಪಾಯಗಳನ್ನು ಕಂಡುಕೊಳ್ಳಬಹುದಲ್ಲವೆ? ಅಂದರೆ ಕೇವಲ ಸಮಸ್ಯೆಯ ಒಂದು ಮುಖದ ಅಧ್ಯಯನ-ಪರಿಹಾರ ಮಾತ್ರ ಪರಿಗಣಿಸದೆ ಒಟ್ಟು ಸಮಸ್ಯೆಯ ಸಮಗ್ರ ಅಧ್ಯಯನ-ಪರಿಹಾರದ ಅಗತ್ಯ ಜರೂರಾಗಿದೆ. ಅಂದರೆ, ಅಂತಹ ಕುಟುಂಬಗಳ ಇತಿಮಿತಿಗಳೇನು, ಅವುಗಳ ಸಮತೋಲನೆ, ಹತೋಟಿ ಹೇಗೆ ಸಾಧ್ಯ ಮುಂತಾದ ಬಗ್ಗೆಯೂ ಸಮಗ್ರ ಗುರಿ ಇಟ್ಟುಕೊಂಡಾಗ ಮಾತ್ರ ಸಮಸ್ಯೆಯ ಪರಿಹಾರ ಸುಲಭ ಸಾಧ್ಯವಾದೀತು.

ಚಿತ್ರದುರ್ಗ — *ಚನ್ನಬಸವ ಪುತ್ತೂರ್ಕರ*

ಒಬ್ಬ ವ್ಯಕ್ತಿಯ ಚಿಂತನೆಗಳನ್ನು ಒಪ್ಪಿಕೊಳ್ಳಲಾಗವೆ, ಕೇವಲ ಅವರನ್ನು ನಿಂದಿಸಲು ಬರೆದ ಲೇಖನ 'ಸಾಮಾನ್ಯ ಶಾಲಾ ವ್ಯವಸ್ಥೆ ಎಂಬ ಹಗಲುಗನಸು'. ಡಾ|| ಮಹಾಬಲೇಶ್ವರ ರಾವ್ ಅವರು ಯಾವುದೇ ಸ್ವಂತ ವಿಚಾರಗಳಿಲ್ಲದೆ, ಗೊತ್ತಿದ್ದನ್ನೇ ಮತ್ತೆ ಹೇಳುತ್ತ ವಿನಾ ಕಾರಣ ಅನಂತಮೂರ್ತಿಯವರನ್ನು ಟೀಕಿಸುತ್ತ ಓದುಗರ ದಾರಿ ತಪ್ಪಿಸುತ್ತಿದ್ದಾರೆ. ಸರ್ವ ಶಿಕ್ಷಣ ಅಭಿಯಾನ ೨೦೧೦ ರವರೆಗೆ ಮುಂದೂಡಿದ್ದು ನಿಜ. ಆದರೆ, ಇದರಿಂದಾದ ಲಾಭಗಳು ಬಹಳಷ್ಟು. ರಾವ್ ಅವರು ಹೇಳಿದಂತೆ ಎಲ್ಲ ಮಕ್ಕಳು ಶಾಲೆಯಿಂದ ಹೊರಗುಳಿದಿಲ್ಲ. ಬಹಳಷ್ಟು ಬೀದಿ ಮಕ್ಕಳು, ಕೊಳಗೇರಿ ಮಕ್ಕಳು, ಶಾಲೆ ಬಿಟ್ಟ ಮಕ್ಕಳು ಅಭಿಯಾನದ ಮೂಲಕ ಶಾಲೆಗಳಿಗೆ ಬರುತ್ತಿದ್ದಾರೆ. ಮೊದಲಿಗಿಂತ ಶಾಲೆಗಳ ಸ್ಥಿತಿ ಉತ್ತಮಗೊಂಡಿದೆ. ಹಾಜರಾತಿಯೂ ಕೂಡ ಉತ್ತಮಗೊಂಡಿದೆ. ಕಾಲೇಜುಗಳಲ್ಲಿ ಕಲಿಸುತ್ತ, ಪ್ರಾಥಮಿಕ ಶಾಲೆಗಳ ಬಗ್ಗೆ ಮಾತನಾಡುವವರಿಗೆ ಇದೆಲ್ಲ ಹೇಗೆ ತಾನೆ ಗೊತ್ತಾಗಬೇಕು ?!!

ಚನ್ನಮ್ಮನ ಕಿತ್ತೂರು — *ಖುರ್ಷಿದ್ ಆಲಂ ಮೋಮಿನ*

### ಬೆರಸುವ ಭೇದ

ವಚನಕಾರರಲ್ಲಿ ಆದ್ಯ ವಚನಕಾರನೆಂದು ಗುರುತಿಸಲ್ಪಡುವ ಜೇಡರ ದಾಸಿಮಯ್ಯನ ವಚನಗಳು, ಬೇರೆ ವಚನಕಾರರ ವಚನಗಳಿಗೆ ಹೋಲಿಸಿದಲ್ಲಿ ಗಾತ್ರದಲ್ಲಿ ಚಿಕ್ಕವುಗಳಾಗಿದ್ದರೂ ಸಾಮಾಜಿಕ ಮೌಲ್ಯಗಳ ಹಾಗೂ ಸಾಹಿತ್ಯಿಕ ಗುಣಗಳಿಂದ ಕೂಡಿವೆ. ಸರಳ ನಿರೂಪಣೆಯಲ್ಲಿ ಎಂತಹವರಿಗೂ ಮನಮುಟ್ಟುವಂತಿವೆ. ಅಲ್ಲಮನ ಬೆಡಗಿನ ಸೊಗಡಿನ ಛಾಯೆ, ಬಸವಣ್ಣನ ಸಾಹಿತ್ಯಿಕ ಗುಣ ಈ ವಚನಕಾರನಲ್ಲಿ ಕಾಣಬಹುದಾಗಿದೆ. ಉದಾಹರಣೆಗೆ,

*ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ*
*ನೊರೆವಾಲೊಳಗೆ ತುಪ್ಪದ ಕಂಪಿಲ್ಲದಂತಿರಿಸಿದೆ*
*ಶರೀರದೊಳಗಾತ್ಮವನಾರು ಕಾಣದಂತಿರಿಸಿದೆ*
*ನೀ ಬೆರಸುವ-ಭೇದಕ್ಕೆ ಬೆರಗಾದೆನಯ್ಯಾ*
ರಾಮನಾಥಾ.

ಮರದೊಳಗಿನ ಮಂದಾಗ್ನಿ, ನೊರೆವಾಲೊಳಗಿನ ಕಂಪಿಲ್ಲದ ತುಪ್ಪ ಇವು ನಮ್ಮ ದೈನಂದಿನ ಚಟುವಟಿಕೆಗಳಲ್ಲಿ ನಿತ್ಯ ಕಾಣುವಂತಹವು. ಇವುಗಳ ಕಥೆಯೇ ಯಾರಿಗೂ ಕಾಣದಂತಿರುವ ಶರೀರದೊಳಗಿನ 'ಆತ್ಮ'. ಈ 'ಬೆರಸುವ-ಭೇದ'ಕ್ಕೆ ವಚನಕಾರ ಬೆರಗಾಗಿರುವ.

ಈ ವಚನದಲ್ಲಿ ಮರ-ಅಗ್ನಿ, ಹಾಲು-ತುಪ್ಪ, ಶರೀರ-ಆತ್ಮ ಬರುವ ಜೋಡು ಪದಗಳು ವಿರುದ್ಧ ದಿಕ್ಕಿನ ತತ್ವಗಳಾಗಿವೆ. ಅವು ಯಾವತ್ತೂ ಒಂದಾಗಲಾರವು. ಮರದಿಂದ ಪ್ರಕಟವಾದ ಅಗ್ನಿ ಮತ್ತೆ ಮರದಲ್ಲಿ; ಹಾಲಿನಿಂದ ಹೊರಬಂದ ತುಪ್ಪ ಮತ್ತೆ ಹಾಲಿನಲ್ಲಿ, ಶರೀರದಿಂದ ಬೇರೆಯಾದ ಆತ್ಮ ಮತ್ತೆ ಶರೀರದಲ್ಲಿ ಎಂದಿಗೂ ಕೂಡಲಾರದ ಚೋದ್ಯವೇ 'ಭೇದ'ವಾಗಿದೆ. ಈ ರೀತಿ ಬೆರಸುವ-ಭೇದ ಶಿವನಿಂದಲ್ಲದೆ ಇನ್ನಾರಿಗುಂಟು? ಎಂದೆಂದಿಗೂ ಒಂದಾಗದೆ ಇರುವ ಗುಣಗಳು ಶಿವನಿಂದಾಗಿ ಮಾತ್ರ ಕೂಡಿಕೊಂಡು ಪ್ರಕಟವಾಗಿರಲು ಶಿವ ಬೆರಸುವ ಭೇದಕ್ಕೆ ಎಂತಹವರು ಬೆರಗಾಗಲೇಬೇಕು, ಅಲ್ಲವೆ?

ಬೀದರ — *ಶಿವಕುಮಾರ ನಾಗವಾರ*

### ಇದು ಸಂಸ್ಕೃತಿ!

ಜನರ ಕಲ್ಯಾಣಕ್ಕಾಗಿ ಕೇಂದ್ರ ರಾಜ್ಯ ಸರ್ಕಾರಗಳು ತೆಗೆದಿಡುವ ದೊಡ್ಡ ಮೊತ್ತದ ಹಣದಲ್ಲಿ ನಾಲ್ಕನೇ ಒಂದು ಪಾಲು ಮಾತ್ರ ಖರ್ಚಾಗುತ್ತದೆಯಲ್ಲದೆ, ಉಳಿದ ಹಣದ ಫಲಾನುಭವಿಗಳು ಯಾರು? ನೀವೇ ಊಹಿಸಿಕೊಳ್ಳಿ. ಭ್ರಷ್ಟಾಚಾರ, ದೊಡ್ಡ ಮನುಷ್ಯರ ದುಷ್ಟ ಬುದ್ಧಿ – ಇಂದು ದೊಡ್ಡ ಸಂಗತಿಯೇ ಅಲ್ಲ. ಇಂದಿರಾ ಗಾಂಧಿಯವರೇ ಭ್ರಷ್ಟಾಚಾರವೆಂಬುದು ನಮ್ಮಲ್ಲಿ ಮಾತ್ರವಲ್ಲ, ವಿಶ್ವವ್ಯಾಪಿ ಪಿಡುಗು ಅದು ಎಂದು ಸಮಾಧಾನದ ಮುದ್ರೆ ಒತ್ತಿಬಿಟ್ಟಿದ್ದಾರೆ.

ಐದು ವರ್ಷಗಳ ಹಿಂದೆ ಅರಣ್ಯ ಇಲಾಖೆಯವರು ನಮ್ಮ ತೋಟದಿಂದ ಅರ್ಧ ಲಾರಿ ಶ್ರೀಗಂಧವನ್ನು ಕೊಂಡುಹೋದರು. ಬರಬೇಕಾದ ದುಡ್ಡಿಗಾಗಿ ಬಹಳಷ್ಟು ಹೋರಾಡಿದ ಮೇಲೆ ೧೮೫೦ರೂ. ಕೊಟ್ಟರು. ಕಟ್ಟಿಗೆಯ ಬೆಲೆಯನ್ನಾದರೂ ಕೊಟ್ಟಿದ್ದರೆ ಅದಕ್ಕಿಂತ ಜಾಸ್ತಿ ಬರುತ್ತಿತ್ತು. ಭ್ರಷ್ಟರು ನುಂಗುವ ಹಣವನ್ನು ಹೇಗೆ ಜೀರ್ಣಿಸಿಕೊಳ್ಳುತ್ತಾರೆಂಬುದೇ ಆಶ್ಚರ್ಯದ ಸಂಗತಿ!

ನಗರದ ಸುತ್ತಮುತ್ತಲಿನ ಹಳ್ಳಿಗಳನ್ನು ನುಂಗಿ, ಕೆರೆಗಳ ನೀರನ್ನೇ ಬತ್ತಿಸಿ, ಸೈಟು ಮಾಡಿ ಮಾರುವ ಭೂಪತಿಗಳ ಮೇಲೆ, ರೋಡಿಗೆ ಹಾಕಲು ತಂದ ಡಾಂಬರನ್ನು ರೋಡಿನ ಮೇಲೆ ಸ್ವಲ್ಪ ಚಿಮುಕಿಸಿ, ಉಳಿದುದನ್ನು ಹೊಟ್ಟೆಗೆ ಸುರಿಸಿಕೊಂಡು ಓಡಾಡುವ ಗುತ್ತಿಗೆದಾರರ ಮೇಲೆ, ಪಡಿತರ ಅಂಗಡಿಗಳಿಗೆ ಬರುವ ಪಡಿತರ ಪದಾರ್ಥಗಳ ಚೀಲಗಳನ್ನೇ ಖಾಸಗಿಯವರ ಅಂಗಡಿಗಳಿಗೆ ದಾಟಿಸುವ ಬಕಾಸುರರ ಮೇಲೆ, ತಾನು ತನ್ನ ಹೆಂಡತಿ, ಮಕ್ಕಳು, ಮರಿಮಕ್ಕಳು ಸಂಬಂಧಿಕರು – ಎಲ್ಲರ ಹೆಸರಿನಲ್ಲೂ ಕೋಟಿ ಕೋಟಿ ಹಣ, ಆಸ್ತಿ ಮಾಡಿಕೊಂಡು ಬಡವರ ಉದ್ಧಾರಕ್ಕಾಗಿ ಅವತಾರ ಎತ್ತಿ ಬಂದವರಂತೆ ಭಾಷಣ ಬಿಗಿಯುವ ರಾಜಕೀಯ ನೇತಾರರ ಮೇಲೆ, ಮದುವೆಯ ಆಮಂತ್ರಣಕ್ಕೇ ಒಂದೆರಡು ಲಕ್ಷ ಖರ್ಚು ಮಾಡಿ, ಆಮಂತ್ರಣ ಪತ್ರಗಳನ್ನು ಬೆಳ್ಳಿಯ ತಟ್ಟೆಯಲ್ಲಿಟ್ಟು ಹಂಚುವ ಕುಬೇರರ ಮೇಲೆ, ಭಕ್ತನಿಗೇ ಧನಕನಕಾದಿಗಳನ್ನು ಅನುಗ್ರಹಿಸಬೇಕಾದ ದೇವರಿಗೇ ಚಿನ್ನಾಭರಣಗಳನ್ನು, ವಜ್ರದ ಕಿರೀಟಗಳನ್ನು, ಬೆಳ್ಳಿಯ ಪಲ್ಲಕ್ಕಿಗಳನ್ನು ಕೊಟ್ಟು ಆತನನ್ನು ಕೆಡಿಸುತ್ತಿರುವ ದೈವಾಂಶ ಸಂಭೂತರ ಮೇಲೆ, ಕೊಲೆ, ಸುಲಿಗೆ, ಅತ್ಯಾಚಾರ, ಬಲಾತ್ಕಾರ, ವಂಚನೆ, ಆದಾಯಕ್ಕಿಂತ ಹೆಚ್ಚಿನ ಆದಾಯ ಮೊದಲಾದ ಕ್ರಿಮಿನಲ್ ಕೇಸುಗಳಲ್ಲಿ ಪಾಲುಗೊಂಡು ನ್ಯಾಯಾಲಯಗಳಲ್ಲಿ ಮುಕದ್ದಮೆಗಳನ್ನು ಎದುರಿಸುತ್ತಿದ್ದರೂ ಏನೂ ಆಗದವರಂತೆ ಅಧಿಕಾರದಲ್ಲಿದ್ದುಕೊಂಡು ಇನ್ನೂ ದೇಶವನ್ನು ಮೇಯುತ್ತಾ ಮೆರೆಯುತ್ತಿರುವ ಪಾಖಂಡಿಗಳ ಮೇಲೆ, ತಿಂಗಳಿಗೆ ಸಂಬಳ ಬರೇ ೧೨ ಸಾವಿರವಾದರೂ ದಿನದ ಭತ್ತೆ, ಪ್ರಯಾಣ ಭತ್ತೆ, ಕ್ಷೇತ್ರನಿಧಿ ಇತ್ಯಾದಿಗಳ ಮೂಲಕ ಅಪಾರ ಸಂಪತ್ತು ಗಳಿಸುತ್ತಿದ್ದರೂ ಮತ್ತೂ ಸಾಲದೆಂದು ಲಕ್ಷ ಲಕ್ಷ ಹಣ ಗಿಟ್ಟಿಸಿಕೊಂಡು ವಿದೇಶಗಳಿಗೆ ಹೆಣ್ಣುಮಕ್ಕಳನ್ನು ಕದ್ದು ದಾಟಿಸುವ ಸಂಸದರ ಮೇಲೆ, ನಗರಗಳ ಬೀದಿ ಬೀದಿ ಕೋಟಿ ಖರ್ಚುಮಾಡಿ ಮಹಾ ನಾಯಕರ ಮೂರ್ತಿ ಸ್ಥಾಪಿಸಿ, ಆಮೇಲೆ ಹಕ್ಕಿಪಿಕ್ಕಿಗಳ ಹಿಕ್ಕೆಯಿಂದ ಮೂರ್ತಿಗಳ ಮಸ್ತಕಾಭಿಷೇಕ ಮಾಡಿಸುತ್ತಿರುವ ನಗರ ಪಿತೃಗಳ, ನಾಯಕಮಣಿಗಳ ಮೇಲೆ, ದಿನ ಬೆಳಗಾದರೆ ಉಜ್ವಲ ಭವಿಷ್ಯಕ್ಕಾಗಿ ಜೋಯಿಸರ, ವಾಸ್ತುಶಾಸ್ತ್ರಿಗಳ, ಮಂತ್ರವಾದಿಗಳ, ಗುಡಿ ದೇವಾಲಯಗಳ, ಮಠಾಧಿಪತಿಗಳ, ಖಾಸಗಿ ಭೇಟಿ ಎಂದು ಹೇಳುತ್ತಾ, ಸರ್ಕಾರಿ ವಾಹನಗಳಲ್ಲಿ ಸುತ್ತು ಬರುತ್ತಿರುವ ಮಂತ್ರಿಗಳ ಮೇಲೆ, ದೊಡ್ಡ ಮನುಷ್ಯರು, ಮಂತ್ರಿಗಳು, ಅಧಿಕಾರಿಗಳು ತಮ್ಮ ಮಕ್ಕಳಿಗೆ ಕೋಟಿ ಕೋಟಿ ಹಣ ಖರ್ಚು ಮಾಡಿ, ಮದುವೆ ಮಾಡಿಸಿ ಭೂರಿಭೋಜನ ಏರ್ಪಡಿಸಿ ಹೊಗಳಿಸಿಕೊಳ್ಳುವ ಧನಾಢ್ಯರ ಮೇಲೂ ನಮ್ಮ ವಕ್ರದೃಷ್ಟಿ ಬೀರುವುದಿಲ್ಲ. ಇಂತಹ ಸಮಾರಂಭಗಳಲ್ಲಿ ಅತಿಥಿಗಳು ಉಂಡುತಿಂದು ಉಳಿದ, ತಿಪ್ಪೆಗೆಸೆದ ಎಂಜಲನ್ನಗಳನ್ನು ಬೀದಿನಾಯಿಗಳೊಂದಿಗೆ ಇಂದೂ ತಿನ್ನುತ್ತಿರುವ ಬಡಜನರ, ಬತ್ತಲೆಯ ಮಕ್ಕಳ ಮೇಲೆ ನಮ್ಮ ದಯಾದೃಷ್ಟಿಯೂ ಬೀರುವುದಿಲ್ಲ.

ಚಿಕ್ಕಬಾಣಾವರ, ಬೆಂಗಳೂರು — *ಎಂ. ವಿ. ಭಟ್*

ಈ ತಿಂಗಳು (೩ನೇ ಪುಟದಿಂದ)

ಇಡೀ ವಿದ್ಯಾರ್ಥಿ ಸಮುದಾಯದ ಅರ್ಹತಾ ಮಟ್ಟವನ್ನು ಹೆಚ್ಚಿಸಬೇಕೆಂಬುದು ಹೊಸ ವಿಷಯವಲ್ಲ, ಅದಕ್ಕಾಗಿ ಹೋರಾಟ ನಡೆಸಬೇಕು ಅಷ್ಟೆ. ಉನ್ನತ ಹಂತಗಳಲ್ಲಿ ಮೀಸಲಾತಿಯನ್ನು ತೊಡೆದುಹಾಕುವ ಮೊದಲು ಆಮೂಲಾಗ್ರವಾಗಿ ನಡೆಯಬೇಕಾದ ಪ್ರಕ್ರಿಯೆ ಇದು. ಇದ್ದುದರಲ್ಲಿ ಸ್ವಲ್ಪ ಶ್ರೀಮಂತಿಕೆ ಪಡೆದಿರುವ ಕುಟುಂಬಗಳಿಗೆ ಮೀಸಲಾತಿ ಅನಗತ್ಯವೆಂಬುದರಲ್ಲಿ ಅರ್ಥವಿದೆ. ಏಕೆಂದರೆ, ಪಡೆದವರೇ ಇನ್ನೂ ಪಡೆಯುತ್ತಿರಬೇಕೆಂಬುದು ಸರಿಯಲ್ಲ ಮತ್ತು ಅದರಿಂದಾಗಿ ಹೊಸ ಕುಟುಂಬಗಳಿಗೆ ಅನ್ಯಾಯವಾಗುತ್ತದೆ. ಈಗ ನ್ಯಾಯಾಲಯವು ಸೂಚಿಸಿರುವ ಷರತ್ತುಗಳನ್ನು ಅನ್ವಯಿಸಿದರೆ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯಲು ಹಿಂದುಳಿದ ವರ್ಗದವರು ಯಾರಾದರೂ ಉಳಿದಿರುತ್ತಾರೆಯೇ ಎಂಬುದು ಪ್ರಶ್ನೆ. ಕೆನೆ ಪದರದ ವಿಷಯ ಪ್ರಸ್ತಾಪಿಸುವಾಗ ಇದನ್ನು ಮರೆಯಲೇಕೂಡದು.

*　　*　　*

ಪೆಲೋಸಿ ಎಂಬ ಪಡಪೋಶಿ ಹೆಂಗಸು ಇತ್ತೀಚೆಗೆ ವಾಷಿಂಗ್‌ಟನ್ನಿನಿಂದ ನಮ್ಮ ದೇಶಕ್ಕೆ ಬಂದಿದ್ದಳು. ಡೆಮೊಕ್ರಾಟ್ ಪಕ್ಷದ ಈಕೆ ಅಲ್ಲಿಯ ಪ್ರಜಾಪ್ರತಿನಿಧಿ ಸಭೆಯ ಅಧ್ಯಕ್ಷೆ. ಎಲ್ಲ ಅಮೆರಿಕಾದ ರಾಜಕಾರಣಿಗಳಂತೆ ಅತಿ ಶ್ರೀಮಂತಳು ಸಹ. ನಮ್ಮ ಕೆಲವು ಪತ್ರಿಕೆಗಳಿಗೆ ಆಕೆಯ ಬಗ್ಗೆ ಎಲ್ಲಿಲ್ಲದ ವ್ಯಾಮೋಹವಿರುವುದರಿಂದ ಆಕೆಯನ್ನು 'ಪುರೋಗಾಮಿ' ಎಂದು ಅವು ಬಣ್ಣಿಸಿವೆ. ಇರಾಕಿನಲ್ಲಿ ಅಮೆರಿಕಾ ಗೈದಿರುವ ಕೊಲೆಗಳನ್ನು ಆಕೆ ವಿರೋಧಿಸಿದ್ದು ಎಂದೂ ಇಲ್ಲ. ಆಕೆಯ ಅಧ್ಯಾತ್ಮ ಪ್ರವೃತ್ತಿಯು ಆಕೆಯನ್ನು ದಲೈಲಾಮಾ ರಾಜಭೋಗದಿಂದ ಜೀವಿಸುವ ಧರ್ಮಶಾಲೆಗೆ ಕರೆದೊಯ್ಯಿತು. ಧರ್ಮಶಾಲಾ-ಮೆಕ್ಲೌಡ್‌ಗಂಜ್‌ಗಳಲ್ಲಿ ತಂಗಿರುವ ಲಕ್ಷಗಟ್ಟಲೆ ಟಿಬೆಟ್ಟಿನ ಧರ್ಮಾರ್ತರನ್ನು ಕೂಡಲೆ ಸ್ವದೇಶಕ್ಕೆ ತೆರಳಿ ಹೋರಾಟ ನಡೆಸಬೇಕೆಂದು ಈಕೆ ಕರೆಕೊಡುತ್ತಾಳೆಂಬ ನಿರೀಕ್ಷೆ ಹುಸಿಯಾಯಿತು. ''ನಾನು ನಿಮ್ಮೊಟ್ಟಿಗೆ ಇದ್ದೇನೆ, ಹೋರಾಟ ಮುಂದುವರಿಸಿ'' ಎಂದು ದಲೈಲಾಮಾಗೆ ಆಕೆ ಹೇಳಿದ್ದು ವರದಿಯಾಗಿದೆ. ಸರ್ಕಾರದ ಪ್ರತಿನಿಧಿಯೊಬ್ಬರು ನಮ್ಮ ದೇಶಕ್ಕೆ ಬಂದು ಹೀಗೆ ಮಾಡಿರುವುದು ಅನುಚಿತ. ಆದರೆ ಅದನ್ನು ಕ್ಷೀಣ ಸ್ವರದಲ್ಲಿ ಸಹ ಪ್ರಣವ ಮುಖರ್ಜಿ ಹೇಳಲಾರರು. ಅವರ ಅಮೆರಿಕಾ ನಿಷ್ಠೆ ಅಷ್ಟು ಗಾಢವಾದ್ದು.

*　　*　　*

ಪ್ರೊಫೆಸರ್ ಆರ್. ಎಸ್. ಶರ್ಮಾ ಈಗ ಪಾಟ್ನಾದಲ್ಲಿ ನೆಲೆಸಿದ್ದಾರೆ. ಅವರು ನಮ್ಮ ದೇಶದ ಪ್ರಖ್ಯಾತ ಇತಿಹಾಸಕಾರರು, ಅಂತರರಾಷ್ಟ್ರೀಯ ಮನ್ನಣೆ ಪಡೆದಿರುವ ವಿದ್ವಾಂಸರು. ಅವರನ್ನು ಕಂಡರೆ ಆರೆಸ್ಸೆಸ್-ಬಿಜೆಪಿ ಬುದ್ಧಿವಂತರಿಗೆ ಯಾವಾಗಲೂ ಅಸಮಾಧಾನ ಮತ್ತು ಮುನಿಸು. ಅವರಷ್ಟು ಪಾಂಡಿತ್ಯವಿರುವ ಯಾವ ಇತಿಹಾಸಕಾರನೂ ತಮ್ಮ ಪಕ್ಷದಲ್ಲಿ ಇಲ್ಲದಿರುವುದು ಅದಕ್ಕೊಂದು ಕಾರಣ. ಆದ್ದರಿಂದಲೇ ಶರ್ಮಾ ಅವರ ಇತಿಹಾಸ ಗ್ರಂಥಗಳನ್ನು ಸುಡುವುದು ಆರೆಸ್ಸೆಸ್-ಬಿಜೆಪಿ ಸಂಸ್ಕೃತಿಯ ಅವಿಭಾಜ್ಯ ಅಂಗ.

ಬಿಹಾರದ ಒಂದು ವಿಶ್ವವಿದ್ಯಾನಿಲಯದ ಕುಲಪತಿಯನ್ನು ಆಯ್ಕೆ ಮಾಡುವ ಸಮಿತಿಗೆ ಶರ್ಮಾ ಅವರನ್ನು ಅಧ್ಯಕ್ಷರನ್ನಾಗಿ ಬಿಹಾರ ಸರ್ಕಾರವು ನೇಮಿಸಿದೆ. ನಿತೀಶ್ ಕುಮಾರ್ ಸರ್ಕಾರವನ್ನು ಕಾಡಿ-ಬೇಡಿ ಶರ್ಮಾ ಆ ಸ್ಥಾನವನ್ನು ಪಡೆದುಕೊಳ್ಳಲಿಲ್ಲ. ಅಂತಹ ಸಂಪ್ರದಾಯಕ್ಕೆ ಹೊರತಾದವರು ಶರ್ಮಾ ಎಂಬುದನ್ನು ಅವರ ವಿರೋಧಿಗಳೂ ಒಪ್ಪುತ್ತಾರೆ. ಆದರೆ ಈ ಸಮಿತಿಯಲ್ಲಿ ಅವರಿರಕೂಡದೆಂದು ಆರೆಸ್ಸೆಸ್-ಬಿಜೆಪಿ ವೃಂದ ಪಾಟ್ನಾದಲ್ಲಿ ದಾಂಧಲೆ ನಡೆಸಿದೆ. ಇದು ಖಂಡನೀಯ. ಆದರೆ ಗಲಭೆ ಮಾಡಿದವರ ಬಗ್ಗೆ ಬಿಹಾರ ಸರ್ಕಾರ ಯಾವ ಕ್ರಮವನ್ನೂ ಕೈಗೊಂಡಿಲ್ಲ. ಇವರಿಗೆ ಕಾನೂನು ಅನ್ವಯವಾಗುವುದಿಲ್ಲ: ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿದ್ದಂತೆ! ದಾಂಧಲೆ ಮಾಡುವುದು ಒಂದು ಹಕ್ಕಾಗಿ ಪರಿಣಮಿಸಿರುವುದು ಸರ್ಕಾರದ ನಿಷ್ಕ್ರಿಯತೆಯಿಂದ ಎಂಬುದು ಸ್ಪಷ್ಟವಾಗಿದೆ. ಬಿಹಾರದಲ್ಲಿ ತಮ್ಮ ಸಮರ್ಥಕನೊಬ್ಬನನ್ನು ಕುಲಪತಿಯನ್ನಾಗಿ ಮಾಡುವ ಬಿಜೆಪಿ ಯೋಜನೆಗೆ ಶರ್ಮಾ ಅವರು ಅಡ್ಡಿಯಾಗಬಹುದೆಂಬುದು ಅವರನ್ನು ವಿರೋಧಿಸುವುದಕ್ಕೆ ಇರುವ ಏಕೈಕ ಕಾರಣವೆಂಬುದು ನಿತೀಶ್ ಕುಮಾರ್ ಅವರಿಗೆ ತಿಳಿದಿದೆಯೆಂದು ಭಾವಿಸಬಹುದಾಗಿದೆ.

*　　*　　*

ನಿರುದ್ಯೋಗ, ಬೆಲೆ ಏರಿಕೆ, ಆರ್ಥಿಕ ಅಸಮಾನತೆ, ಮುಂತಾದ ವಿಷಯಗಳನ್ನು ಗಮನಿಸುವಾಗ ಭೂಮಿಯ ಒಡೆತನ ಮತ್ತು ಬಳಕೆಗೆ ಆದ್ಯತೆ ನೀಡುವುದು ಅಗತ್ಯ. ಸಣ್ಣ ರೈತರ ಭೂಮಿಯನ್ನು ಬೇರೆ ಬೇರೆ ಕಾರಣಗಳನ್ನು ಕೊಟ್ಟು ಕಿತ್ತುಕೊಂಡರೆ ಅವರಿಗೆ ಯಾವ ಮೀಸಲಾತಿಯೂ ಎಳ್ಳಷ್ಟೂ ಪ್ರಯೋಜನವಾಗುವುದಿಲ್ಲ. ಬೆಂಗಳೂರಿನ ಸುತ್ತಮುತ್ತ ಇದ್ದ ರೈತರ ಭೂಮಿಯೆಲ್ಲಾ ಅವರಿಂದ ಕಸಿದುಕೊಳ್ಳಲಾಗಿದೆ. ಅದನ್ನು 'ಅಭಿವೃದ್ಧಿ' ಎಂದು ಕರೆಯುವ ದುರಂತವೂ ಇದೆ. ಈಗ 'ಕೆಂಪೇಗೌಡ ಲೇಔಟ್' ರಚಿಸಲು ಮತ್ತೆ ೪೦೦೦ ಎಕರೆ ಭೂಮಿ ಕಿತ್ತುಕೊಳ್ಳುತ್ತಾರಂತೆ. ಅಂದರೆ, ಇನ್ನೂ ೧೦-೧೫ ಸಾವಿರ ಜನರನ್ನು ಬೀದಿಗೆ ನೂಕುವುದೆಂದರ್ಥ. ಈ ಲೇಔಟ್‌ಗಳಲ್ಲಿ ಸೈಟುಗಳನ್ನು ಪಡೆಯುವವರು ಬಹುತೇಕ ಯಾರು? ಮೊದಲೇ ಒಂದೆರಡು ಸೈಟುಗಳನ್ನು ಹೊಂದಿದ್ದು ಮತ್ತೊಂದು ಸೈಟಿಗಾಗಿ ಬಂಡವಾಳ ತೊಡಗಿಸುವ ಸುಸಂಸ್ಕೃತ ಜನ! ಅಂಥವರಲ್ಲದೆ ಬೇರೆ ಯಾರು ಅಷ್ಟು ಹಣ ತೊಡಗಿಸಲು ಸಾಧ್ಯವಿದೆ? ಭೂಮಿಯನ್ನು ಹೀಗೆ ಅಪಾಮಾರ್ಗದಲ್ಲಿ ಹಾಳು ಮಾಡಿಕೊಳ್ಳುವುದು ನಾಡಿಗೆ ಶ್ರೇಯಸ್ಕರವಲ್ಲ. ಕೃಷಿ ಉತ್ಪಾದನೆಯನ್ನು ಕಡಿಮೆಗೊಳಿಸುತ್ತಾ ದೇಶವನ್ನು ಪರಾವಲಂಬಿತನಕ್ಕೆ ದೂಡುವುದು ಈ ಅಕ್ರಮದ ಫಲ. ಚುನಾವಣೆಯ ಸಂದರ್ಭದಲ್ಲಿ ದೊಡ್ಡ ರಾಜಕೀಯ ಪಕ್ಷಗಳಾದ ಬಿಜೆಪಿ, ಕಾಂಗ್ರೆಸ್ ಮತ್ತು ದೇವೇಗೌಡರ ಪಕ್ಷ ಈ ಪ್ರಶ್ನೆಗಳನ್ನೆತ್ತುವುದಿಲ್ಲ. ಏಕೆಂದರೆ ಭೂಕಬಳಿಕೆಯ ಭೂಪರ ಸಾಂದ್ರತೆ ಇರುವುದೇ ಈ ಪಕ್ಷಗಳಲ್ಲಿ.

*　　*　　*

ಅನಗತ್ಯ ಅತಿಶಯೋಕ್ತಿಗಳ ಆಗರವಾದ ಕ್ರಿಕೆಟ್ ಆಟದಲ್ಲಿ ದಕ್ಷಿಣ ಆಫ್ರಿಕದ ಹನ್ನೊಂದು ಆಟಗಾರರ ವಿರುದ್ಧ ಭಾರತದ ಅಷ್ಟೇ ಮಂದಿ ಒಂದು ಪಂದ್ಯದಲ್ಲಿ ಗೆದ್ದದ್ದು ಚಂದ್ರಲೋಕಕ್ಕೆ ಹೋಗಿ ಯಶಸ್ವಿಯಾಗಿ ಹಿಂದುರುಗಿಬಂದಷ್ಟು ಸಂಭ್ರಮವನ್ನು ಹುಟ್ಟಿಹಾಕಿದೆ. ದೇಶದ ಅಧ್ಯಕ್ಷರಿಂದ ಹಿಡಿದು ಎಲ್ಲರೂ ಅಭಿನಂದನೆಗಳನ್ನು ಹೇಳಿ ಆಟಗಾರರಿಗೆ ಹಣ ಕೊಡಲು ಮುಂದಾಗುವವರೇ. ಹೀಗಿರುವಾಗ ಸ್ವತಃ ಕೆಲವು ಆಟಗಾರರು ಸಹ ಹಣ ಹಂಚುವ ಕೆಲಸದಲ್ಲಿ ಹಿಂದೆ ಬೀಳುವುದುಂಟೆ? ಧೋನಿ ಎಂಬ ಆಟಗಾರ ಆಟದ ಪಿಚ್ ತಯಾರಿಸಿದ ಭೂಪನಿಗೆ ೧೦,೦೦೦ ರೂಪಾಯಿಗಳನ್ನು ಕರುಣಿಸಿದ್ದಾನೆಂದು ವರದಿಯಾಗಿದೆ. ಇದೊಂದು ವಿಶಿಷ್ಟ ಮಾದರಿಯ ಲಂಚ, ಬೇರೆ ಊರುಗಳ ಪಿಚ್ ತಯಾರಿಕರಿಗೆ ಸೂಚನೆ. ಗುಟ್ಟಾಗಿ ಕೆಲವು ಅಂಪೈರುಗಳಿಗೂ ಒಂದಷ್ಟು ಹಣವನ್ನು ಹಂಚಲಾಗಿದೆಯೇ ಎಂಬುದನ್ನು ಪತ್ರಕರ್ತರು ಹೊರಗೆಡಹಬೇಕು. ಆಟದ ಮಿತಿಗಳನ್ನು, ಆಶಯಗಳನ್ನು ಮೀರಿ ಬೆಳೆದಾಗ ಕ್ರಿಕೆಟ್ ಒಂದು ಪಿಡುಗಾಗಬಹುದೆಂಬ ಸೂಚನೆ ಧೋನಿ ದಾನದ ಸೂಚನೆಯಾಗಿದೆ.

*　　*　　*

ಕಾಬಾ ಇರುವುದು ಮೆಕ್ಕಾದಲ್ಲಿ ಅಲ್ಲವೆ? ಹಿಂದಿನ ಕಾಲದಲ್ಲಿ ಅದಕ್ಕೆ ಬೀಗ ಜಡಿದು ಬೀಗದ ಕೈಯನ್ನು ಯಾರೋ ಒಬ್ಬ ಇರಿಸಿಕೊಳ್ಳುತ್ತಿದ್ದನಂತೆ. ಹಲವು ಶತಮಾನಗಳ ಹಿಂದಿನ ಅಂತಹ ಒಂದು ಕೀಲಿ ಇತ್ತೀಚೆಗೆ ಲಂಡನ್ನಿನಲ್ಲಿ ಹರಾಜಿಗೆ ಬಂದಿತ್ತು. ಎಂದೋ ಒಂದು ದಿನ ಬೀಗ ಮತ್ತು ಕಾಬಾಗಳನ್ನೂ ಹರಾಜಿಗಿಡುವಂತಹ ಹರಾಜು ಸಂಸ್ಥೆಗಳಿವೆ. ಅದಿರಲಿ, ಕೀಲಿಗೆ ಬಂದು ಹಣ ೯೦ ಲಕ್ಷ ಪೌಂಡುಗಳು, ಅಂದರೆ ಸುಮಾರು ೬೩ ಕೋಟಿ ರೂಪಾಯಿಗಳು. ಅಷ್ಟು ಹಣ ಇದ್ದವನು ಈ ಕೀಲಿಯಿಂದ ಸ್ವರ್ಗದ ಬೀಗವನ್ನು ತೆಗೆದು ಒಳಹೋಗಬಹುದೆಂದು ಭ್ರಮಿಸಿರುವಂತೆ ತೋರುತ್ತದೆ. ಕೀಲಿಯೇ ಇಲ್ಲದೆಯೂ ಅವನಿಗೆ ನರಕದಲ್ಲಿ ಮುಕ್ತ ಪ್ರವೇಶವಿದೆ.

*　　*　　*

ಶರದ್ ಪವಾರ್‌ಗೆ ಕ್ರಿಕೆಟ್ಟಿನ ದುಡ್ಡಿನ ಆಕರ್ಷಣೆ ಜಾಸ್ತಿ. ಆದ್ದರಿಂದ ದೇಶದ ಕೃಷಿಯು ಕೃಶವಾಗುತ್ತಿರುವುದು ಕಾಣುವುದಿಲ್ಲ. ಅಂತೆಯೇ ಅವರ ಪಕ್ಷದ ನೀತಿಗಳನ್ನು ಗಮನಿಸಲು ವ್ಯವಧಾನವಿಲ್ಲ. ಕೇಂದ್ರ ಸರ್ಕಾರದಲ್ಲಿ ಅವರ ಪಕ್ಷ ಭಾಗಿಯಾಗಿದೆ. ಈಶಾನ್ಯ ಭಾರತದ ಕೆಲವು ರಾಜ್ಯಗಳಲ್ಲಿ ಅದು ಭಾರತೀಯ ಜನತಾ ಪಕ್ಷದೊಡನೆ ಸರಕಾರವನ್ನೂ ರಚಿಸಿದೆ. ಹಾಗೆ ಮಾಡಕೂಡದೆಂದು ಕಾಂಗ್ರೆಸ್ ಹೇಳುವುದಿಲ್ಲ ಮತ್ತು ಹಾಗೆ ಮಾಡಬಾರದೆಂದು ಬಿಜೆಪಿ ಭಾವಿಸುವುದಿಲ್ಲ. ಇದೊಂದು ವಿಚಿತ್ರ ರಾಜಕೀಯ ಹೊಂದಾಣಿಕೆ. ಎಡಪಕ್ಷಗಳು ಕೂಡ ಇದರ ಬಗ್ಗೆ ಚಕಾರವೆತ್ತಿಲ್ಲದಿರುವುದು ಸ್ವಾರಸ್ಯವಾಗಿದೆ. ಒಟ್ಟಿನಲ್ಲಿ, ಯಾರು ಯಾವಾಗ ಯಾರ ಜೊತೆಯಲ್ಲಿ ಬೇಕಾದರೂ ಬೆರೆಯಬಹುದು, ಅದಕ್ಕೆ ಯಾವ ಸಿದ್ಧಾಂತವೂ ಅಡ್ಡಿಬರುವುದಿಲ್ಲ. ಸೈದ್ಧಾಂತಿಕ ಸಾಮರಸ್ಯಕ್ಕೆ ಇದೊಂದು ನಾಚಿಕೆಯಿಲ್ಲದ ಉಗ್ರ ನಿದರ್ಶನ.

*　　*　　*

ನೇಪಾಳದಲ್ಲಿ ಮಾವೋವಾದಿ ಕಮ್ಯುನಿಸ್ಟ್ ಪಕ್ಷವು ಅಧಿಕಾರಕ್ಕೆ ಬಂದಿದೆ. ಚುನಾವಣೆಯಲ್ಲಿ ಆ ಪಕ್ಷಕ್ಕೆ ಮತದಾರರು 'ಪ್ರಚಂಡ' ಬೆಂಬಲ ನೀಡಿದ್ದಾರೆ. ಕೆಲವು ಅಯೋಗ್ಯ ವಿಮರ್ಶಕರು ಆ ವಿಜಯವನ್ನು ಅಂಗೀಕರಿಸಲು ಹೇಸಿ 'ಬೆದರಿಕೆಗಳಿಗೆ ಮಣಿದು' ಆ ಪಕ್ಷಕ್ಕೆ ಮತ ನೀಡಲಾಗಿದೆಯೆಂದು 'ವಿದ್ವತ್ಪೂರ್ಣ' ವಿಶ್ಲೇಷಣೆಗಳನ್ನು ನಮ್ಮ ದೇಶದ ಮಾಧ್ಯಮಗಳಲ್ಲಿ ನೀಡುತ್ತಿದ್ದಾರೆ. ನಿಜವಾಗಿ ಪ್ರಜೆಗಳ ಪ್ರಭುತ್ವವನ್ನು ವಿರೋಧಿಸುವವರೆಂದರೆ ಇವರೇ. ''ಬೆದರಿಕೆಗೆ ಮಣಿದು'' ಎಂಬುದು ನಿಜವಾದರೆ, ೨೨೪ ಸ್ಥಾನಗಳನ್ನೂ ಪ್ರಚಂಡರ ಪಕ್ಷವೇ ಏಕೆ ಪಡೆಯಲಿಲ್ಲ? ಸ್ವತಃ ನೇಪಾಳದ ರಾಜನಿಗೇ ಇಲ್ಲದ ಭಯ ನಮ್ಮ ಈ ರಾಜಕೀಯ ವಿಶ್ಲೇಷಕರಿಗೆ ಇರುವಂತಿದೆ. ಅಮೆರಿಕಾ ಜೊತೆ ಕೈಜೋಡಿಸಿ ನೇಪಾಳದ ಸರ್ಕಾರವನ್ನು ಉರುಳಿಸಲು ನಮ್ಮ ದೇಶದ ಸರ್ಕಾರವು ಯತ್ನಿಸಬೇಕೆಂದು ಸಹ ಇವರು ಹೇಳಿಯಾರು! ನೇಪಾಳದ ಜನರನ್ನು ಗೌರವಿಸುವುದೆಂದರೆ ಅವರು ಸ್ವ-ಇಚ್ಛೆಯಿಂದ ಆಯ್ಕೆಮಾಡಿಕೊಂಡಿರುವ ಸರ್ಕಾರಕ್ಕೆ ಮನ್ನಣೆ ನೀಡುವುದೇ ಆಗಿರುತ್ತದೆ. ನಿಜಕ್ಕೂ ನೋಡಿದರೆ ಚುನಾವಣೆ ಸಂದರ್ಭದಲ್ಲಿ ಬೇರೆ ಕೆಲವು ಪಕ್ಷಗಳು ''ಮಾವೋವಾದಿಗಳಿಗೆ ಬೆಂಬಲ ನೀಡಿದರೆ ದೇಶವು ನಿರ್ನಾಮವಾಗುತ್ತದೆ'' ಎಂದು ಮಾಡಿದ ಪ್ರಚಾರವು ಬೆದರಿಕೆಯಲ್ಲವೆ? ಇವೆಲ್ಲಾ ನಮಗೆ ಅಪ್ರಸ್ತುತ. ನಮ್ಮ ದೇಶವು ಮುಜುಗರ ಪಡಬೇಕಾದ್ದೇನೂ ಇಲ್ಲ. ಪ್ರಜಾಪ್ರಭುತ್ವದ ಬಗ್ಗೆ ಪಾಠ ಹೇಳಲು ನೇಪಾಳಕ್ಕೆ ಹೋಗಿದ್ದ ಭಾರತದ ಕೆಲವು ಕಮ್ಯುನಿಸ್ಟ್ ನಾಯಕರು ಸಹ ಕಸಿವಿಸಿಪಡಬೇಕಾದ ಸಂದರ್ಭವೇನೂ ಉಂಟಾಗಿಲ್ಲ.

ಸಾಮಾಜಿಕ ಜೀವನ, ರಾಜಕೀಯ ವ್ಯವಸ್ಥೆ ಕಲುಷಿತಗೊಂಡು ಅಧೋಗತಿಗೆ ಇಳಿದಿರುವ ಇಂದಿನ ಪರಿಸ್ಥಿತಿಯನ್ನು ಬದಲಿಸಬೇಕು. ಬದಲಿಸಬಹುದು. ಅದಕ್ಕೆ ಸಂಘಟಿತ ಹೋರಾಟ ಅಗತ್ಯ. ಇಂದು ದೇಶದಲ್ಲಿ ಎಲ್ಲ ವಿಭಾಗದ ಜನರಲ್ಲೂ ಅತೃಪ್ತಿ ಇದೆ. ಅವರನ್ನು ಸಂಘಟಿಸುವುದಕ್ಕೆ ಅವರ ನಡುವೆ ಕೆಲಸಮಾಡುವುದಕ್ಕೆ ನಾಯಕತ್ವದ ಕೊರತೆ ಇದೆ. ಸಣ್ಣ ಪ್ರಮಾಣದಲ್ಲಿಯಾದರೂ ಜನರಲ್ಲಿ ಜಾಗೃತಿ ಉಂಟುಮಾಡಲು ನಾವು ಕಾರ್ಯಪ್ರವೃತ್ತರಾದರೆ ಖಂಡಿತ ಫಲದಾಯಕವಾಗುತ್ತದೆ. ಈ ದೃಢವಿಶ್ವಾಸದಿಂದ ನಿರಂತರವಾಗಿ ಶ್ರಮಿಸುತ್ತಿರುವ, ಎಲ್ಲ ಜನಪರ ಚಳುವಳಿಗಳಲ್ಲೂ ತಪ್ಪದೆ ಭಾಗಿಯಾಗುತ್ತಿರುವ ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಪತ್ರಕರ್ತ, ಗಾಂಧಿವಾದಿ ಹಾರೋಹಳ್ಳಿ ಶ್ರೀನಿವಾಸ ಐಯ್ಯರ್ ದೊರೆಸ್ವಾಮಿ ಈಗ ತೊಂಬತ್ತು ತುಂಬಿ ತೊಂಬತ್ತೊಂದಕ್ಕೆ (ಜನನ ಏಪ್ರಿಲ್ ೧೦, ೧೯೧೮)ಅಡಿಯಿರಿಸಿದ್ದಾರೆ. ಅವರಿಗೆ 'ಹೊಸತು'ವಿನ ಶುಭಕಾಮನೆಗಳು. ದೀರ್ಘಕಾಲ ಬಾಳಿಗೆ ಹಾರೈಕೆ. ಈ ಶುಭ್ರ ಖಾದಿಧಾರಿ, ಸರ್ವೋದಯ ಕಾರ್ಯಕರ್ತ ಈ ವಯಸ್ಸಿನಲ್ಲೂ ಉತ್ಸಾಹದ ಚಿಲುಮೆ. ಅವರ ಜೀವನಾಸಕ್ತಿ, ಕ್ರಿಯಾಶೀಲತೆ, ಲವಲವಿಕೆ ಸ್ಫೂರ್ತಿದಾಯಕ. ಬೆಂಗಳೂರಿನ ರಸ್ತೆಗಳಲ್ಲಿ ಕಾಲ್ನಡಿಗೆಯಲ್ಲೋ, ಸಾರ್ವಜನಿಕ ಸಾರಿಗೆಯಲ್ಲೋ ಸಂಚರಿಸುವ ಈ ವ್ಯಕ್ತಿಯೊಂದಿಗೆ ಮಾತನಾಡುವುದೇ ಒಂದು ಅನುಭವ. 'ಹೊಸತು' ಪ್ರಾರಂಭದ ಸಂಚಿಕೆಯನ್ನು ಬಿಡುಗಡೆಮಾಡಿದವರು ಈ ಹಿರಿಯರು. ಅಂದಿನಿಂದ ದೊರೆಸ್ವಾಮಿಯವರು 'ಹೊಸತು' ಬಳಗದಲ್ಲಿ ಒಬ್ಬರಾಗಿ ಗುರ್ತಿಸಿಕೊಂಡಿದ್ದಾರೆ. ಈ ಹಿರಿಯ ಚೇತನವನ್ನು 'ಹೊಸತು' ಸಂದರ್ಶಿಸಿತು. ಅದರಲ್ಲಿ 'ಹೊಸತು' ಸಂಪಾದಕ ಮಂಡಳಿಯ ಡಾ|| ಜಿ. ರಾಮಕೃಷ್ಣ ಸಿ. ಆರ್. ಕೃಷ್ಣರಾವ್, ಕೆ. ಪಿ. ಸ್ವಾಮಿ, ಎಸ್. ಸುರೇಂದ್ರ ಇವರುಗಳು ಪಾಲ್ಗೊಂಡಿದ್ದರು. ಸಂದರ್ಶನದ ಆಯ್ದ ಭಾಗಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ. ಸಂದರ್ಶನ ಲೇಖನ ಸಿದ್ಧಗೊಳಿಸಿದವರು : ಸಿ. ಆರ್. ಕೃಷ್ಣರಾವ್; ಚಿತ್ರಗಳು : ಕೆ. ಪಿ. ಸ್ವಾಮಿ

ಸಂದರ್ಶನ ಲೇಖನ ಸಿದ್ಧಗೊಳಿಸಿದವರು
**ಸಿ. ಆರ್. ಕೃಷ್ಣರಾವ್**

# "ಜಾಗತೀಕರಣವು ದೇಶವನ್ನು ವಿನಾಶದ ಅಂಚಿಗೆ ತಳ್ಳುತ್ತಿದೆ"

**– ಎಚ್. ಎಸ್. ದೊರೆಸ್ವಾಮಿ**

**ಹೊಸತು :** ನಿಮ್ಮ ಬಾಲ್ಯ, ಸ್ವಾತಂತ್ರ್ಯ ಚಳವಳಿಯಲ್ಲಿ ತೊಡಗಲು ಪ್ರೇರಣೆ ಕುರಿತು ತಿಳಿಸಿ.

**ಎಚ್. ಎಸ್. ದೊರೆಸ್ವಾಮಿ :** ನಮ್ಮೂರು ಕನಕಪುರ ತಾಲ್ಲೂಕಿನ ಹಾರೋಹಳ್ಳಿ. ದೊಡ್ಡ ಕುಟುಂಬ. ನಮ್ಮ ತಂದೆ, ತಾತ, ಚಿಕ್ಕತಾತ ಎಲ್ಲ ಒಟ್ಟಾಗೇ ಇದ್ದೆವು. ಶ್ಯಾನುಭೋಗರ ಮನೆ. ನಮ್ಮ ತಂದೆ ಶ್ರೀನಿವಾಸ ಐಯ್ಯರ್. ಕನ್ನಡ ಲೋಯರ್ ಸೆಕೆಂಡರಿ ಮಾಡಿಕೊಂಡಿದ್ದರು. ನಮ್ಮೂರಿಗೆ ಇಂಗ್ಲಿಷ್ ಮೇಷ್ಟರೊಬ್ಬರು ಬಂದಿದ್ದರಿಂದ ನಮ್ಮ ತಂದೆ ನಮಗೆ ಇಂಗ್ಲಿಷ್ ಕಲಿಸಲು ಏರ್ಪಾಟುಮಾಡಿದ್ದರು. ನನ್ನ ಶಾಲಾ ವಿದ್ಯಾಭ್ಯಾಸವೆಲ್ಲ ಹಳ್ಳಿಯಲ್ಲೇ ಆಯಿತು. ಮಿಡಲ್‌ಸ್ಕೂಲ್ ಒಂದು ವರ್ಷ ಮುಗಿಸಿದಾಗ ಬೆಂಗಳೂರಿಗೆ ಬಂದು ನೆಲೆಸಿದೆವು. ನಮ್ಮ ತಂದೆಗೆ ನಮ್ಮ ತಾತ ಸರಕಾರಿ ಕೆಲಸ ಮಾಡಿಸಿಕೊಟ್ಟರು. ಆರು ರೂಪಾಯಿ ಸಂಬಳ. ಸಿದ್ದಿಕಟ್ಟೆಯಲ್ಲಿ ಮನೆ. ಕಾಲ ಚೆನ್ನಾಗಿತ್ತು. ಒಂದು ರೂಪಾಯಿಗೆ 20 ಸೇರು ರಾಗಿ, ನಾಲ್ಕಾಣೆಗೆ ಐದು ಸೇರು ಅಕ್ಕಿ, ಮೂರು ಕಾಸಿಗೆ ಇಪ್ಪತ್ತು ಬಾಳೆಹಣ್ಣು. ಬರುತ್ತಿದ್ದ ಸಂಬಳದಲ್ಲೇ ಒಂದು ರೂಪಾಯಿ ಉಳಿಸುತ್ತಿದ್ದರಂತೆ ನಮ್ಮ ತಂದೆ. ಸುಭಿಕ್ಷ ಕಾಲ ಅನ್ನುವುದಕ್ಕಿಂತ ಜನರ ಹತ್ತಿರ ಹಣ ಇರಲಿಲ್ಲ ಎನ್ನಬಹುದು. ನನ್ನ ಮುಂದಿನ ಓದೆಲ್ಲ ಕೋಟೆ ಹೈಸ್ಕೂಲು, ಇಂಟರ್‌ಮೀಡಿಯೆಟ್ ಕಾಲೇಜು, ಸೆಂಟ್ರಲ್ ಕಾಲೇಜು ಮುಂತಾದ ಕಡೆ ನಡೆಯಿತು. ನಾನು ಚಿಕ್ಕವನಾಗಿದ್ದಾಗಲೇ ನಮ್ಮ ತಂದೆ ತೀರಿಕೊಂಡರು. ಚಿಕ್ಕ ತಾತನ ಆಶ್ರಯದಲ್ಲಿ ನಾವು ಬೆಳೆದೆವು. ಅವರು ಚಿಕ್ಕಮಾವಳ್ಳಿಯಲ್ಲಿ ಮನೆ ಮಾಡಿದ್ದರು. ನನ್ನ ಅಣ್ಣ ಸೀತಾರಾಮ್ ಎಸ್.ಎಸ್.ಎಲ್.ಸಿ. ಮುಗಿಸಿ ಕೋಟೆಯಲ್ಲಿದ್ದ ಖಾದಿ ವಸ್ತ್ರಾಲಯದಲ್ಲಿ ಕೆಲಸ ಮಾಡತೊಡಗಿದ. ಅದು ರಾಜಾಜಿ ಅವರು ಪ್ರಾರಂಭಿಸಿದ್ದ ಮಳಿಗೆ.

ನಾನು ಇಂಟರ್‌ಮೀಡಿಯೆಟ್ ಓದುತ್ತಿದ್ದಾಗ ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕಿದೆ. ಆಗ ಸಂಭವಿಸಿದ ಒಂದು ಘಟನೆ ಅದಕ್ಕೆ ಕಾರಣವಾಯಿತು. ನಾರಿಮನ್ ಗಲಾಟೆಯೆಂದೇ ಹೆಸರಾಗಿರುವ ಸ್ವಾತಂತ್ರ್ಯ ಚಳವಳಿಯ ಒಂದು ಘಟನೆ ಅದು. ಮಹಾರಾಷ್ಟ್ರದ ಕಾಂಗ್ರೆಸ್ ನಾಯಕರಾದ ನಾರಿಮನ್ ಬೆಂಗಳೂರಿಗೆ ಬಂದಿದ್ದರು. ಬನಪ್ಪ ಪಾರ್ಕ್‌ನಲ್ಲಿ ಅವರು ಸಾರ್ವಜನಿಕ ಸಭೆಯೊಂದನ್ನು ಉದ್ದೇಶಿಸಿ ಭಾಷಣ



ಮಾಡಬೇಕಾಗಿತ್ತು. ಸುಮಾರು ಮೂವತ್ತು ನಲವತ್ತು ಸಾವಿರ ಜನ ಸೇರಿದ್ದರು. ವೇದಿಕೆಗೆ ಆಗಮಿಸಿದ ನಾರಿಮನ್‌ರನ್ನು ಪೊಲೀಸರು ಬಂಧಿಸಿದರು. ಉದ್ರಿಕ್ತರಾದ ಜನ ಪೊಲೀಸರ ವರ್ತನೆಯ ವಿರುದ್ಧ ಪ್ರತಿಭಟಿಸಿದರು. ಕಲ್ಲು ತೂರಾಟ, ಲಾಠಿ ಚಾರ್ಜ್ ಎಲ್ಲ ಆಯಿತು. ಒಂದು ರೀತಿಯಲ್ಲಿ ಕಾಳಗವೇ ನಡೆದುಹೋಯಿತು ಪೊಲೀಸರೊಂದಿಗೆ.

ಮರುದಿನ ನಾವು ವಿದ್ಯಾರ್ಥಿಗಳು ಪೊಲೀಸರ ದೌರ್ಜನ್ಯದ ವಿರುದ್ಧ ಪ್ರತಿಭಟಿಸಲು ಮುಷ್ಕರ ನಡೆಸುವುದಕ್ಕೆ ತೀರ್ಮಾನಿಸಿದೆವು. ಆಗ ಕಾಲೇಜಿನಲ್ಲಿ ಡಿ. ಆರ್. ಕೃಷ್ಣ ಮೂರ್ತಿ, ಬಾಬು ಸಿದ್ಧರಾಮಣ್ಣ, ಸುಬ್ರಮಣ್ಯ ರಾಜೆ ಅರಸ್ ಮೊದಲಾದವರಿದ್ದರು. ಇವರೆಲ್ಲ ಒಳ್ಳೆಯ ಸಂಘಟಕರು, ಕಾರ್ಯಕರ್ತರು. ಬೆಂಗಳೂರಿನಲ್ಲಿ ಜನಜಾಗೃತಿ ಸಂಘ ಎನ್ನುವ ಸಂಸ್ಥೆ ಒಂದು ಆಗ ಪ್ರಾರಂಭವಾಗಿತ್ತು. ಎನ್. ಡಿ. ಶಂಕರ್, ಸವಾಯಿ ಅಶ್ವತ್ಥನಾರಾಯಣರಾವ್, ಬಿ. ಎಂ. ಸೀನಪ್ಪ, ಸಿ. ಟಿ. ಪೊನ್ನಯ್ಯ, ಶ್ರೀಕಾಂತ್ ಮತ್ತಿತರರು ಆ ಸಂಘದ ಸದಸ್ಯರಾಗಿದ್ದರು. ಜನಸಂಪರ್ಕ ಬೆಳೆಸಿ ಚಟುವಟಿಕೆಗಳನ್ನು ನಡೆಸುತ್ತಿದ್ದರು. ನಾವು ಅವರ ಸಂಪರ್ಕವನ್ನು ಹೊಂದಿದ್ದೆವು. ಮುಷ್ಕರನಿರತರಾಗಿ ಕಾಲೇಜು ಆವರಣದಲ್ಲಿದ್ದ ವಿದ್ಯಾರ್ಥಿಗಳ ಮೇಲೆ ಪೊಲೀಸರು ಹರಿಹಾಯ್ದರು. ನಮಗೆಲ್ಲ ಲಾಠಿ ಏಟುಗಳು ಬಿದ್ದವು. ಅಧ್ಯಾಪಕ ವಿ.ಸೀತಾರಾಮಯ್ಯನವರಿಗೂ ಕಾಲಿಗೆ ಲಾಠಿ ಪೆಟ್ಟು ಬಿದ್ದು ಅವರು ಎರಡು ದಿನ ಸುಧಾರಿಸಿಕೊಳ್ಳಬೇಕಾಯಿತು. ವಿದ್ಯಾರ್ಥಿಗಳೂ ಸುಮ್ಮನಿರಲಿಲ್ಲ. ಪೊಲೀಸರನ್ನು ಇಟ್ಟಾಡಿಸಿದರು. ಕಲ್ಲು ತೂರಾಟ ನಡೆಸಿದರು.

ಈ ಘಟನೆ ನನ್ನ ಮೇಲೆ ತುಂಬಾ ಪರಿಣಾಮ ಬೀರಿತು. ದೇಶದ ಸ್ವಾತಂತ್ರ್ಯಕ್ಕಾಗಿ ಏನಾದರೂ ಮಾಡಬೇಕು ಎನ್ನುವ ಪ್ರೇರಣೆ ಬಂತು. ನಮ್ಮಣ್ಣ ಖಾದಿ ವಸ್ತ್ರಾಲಯದಲ್ಲಿ ಇದ್ದುದರಿಂದ ಖಾದಿ ತೊಡಲು ತೊಡಗಿದೆ. 'ಹರಿಜನ' ಪತ್ರಿಕೆ ತರಿಸುತ್ತಿದ್ದುದರಿಂದ ಯಾವಾಗ ಚಳವಳಿ ಪ್ರಾರಂಭವಾಗುತ್ತೆ ಎಂಬ ಕಾತುರ ನಮಗೆಲ್ಲ. ನಾನು ಹೈಸ್ಕೂಲಿನಲ್ಲಿದ್ದಾಗ ಗಾಂಧೀಜಿಯವರ 'ಮೈ ಅರ್ಲಿ ಲೈಫ್' ಎನ್ನುವ ಪುಸ್ತಕ ಓದಿದ್ದೆ. ಸಾರ್ವಜನಿಕ ಕಾರ್ಯಕರ್ತರು ಆಡಂಬರದ ಜೀವನ ನಡೆಸದೆ ಬಡತನದ ಜೀವನ ನಡೆಸಬೇಕು ಎನ್ನುವ ಮಾತು ಅದರಲ್ಲಿತ್ತು. ಅದು ನನಗೆ ತುಂಬಾ ಹಿಡಿಸಿತು. ಜನರ ಮಧ್ಯೆ ಕೆಲಸ ಮಾಡುವವರು ಅವರಂತೆಯೇ ಜೀವಿಸಬೇಕು ಎನ್ನುವುದು ನನ್ನ ಮನಸ್ಸಿನಲ್ಲಿ ನಾಟಿತು. ನಾನು ಸ್ವತಂತ್ರವಾಗಿ ನನ್ನ ಕಾಲ ಮೇಲೆ ನಿಲ್ಲಲು ಇದು ಪ್ರೇರಣೆ ನೀಡಿತು. ಹಾಗಾಗಿ ನಾನು ಸಾಹಿತ್ಯ ಮಂದಿರ ಎಂಬ ಪ್ರಕಾಶನ ಸಂಸ್ಥೆ ಪ್ರಾರಂಭಿಸಿದೆ. ಈ ಮಧ್ಯೆ 1938ರಲ್ಲಿ ಶಿವಪುರ ಕಾಂಗ್ರೆಸ್ ಸಮ್ಮೇಳನ ನಡೆದು ಮೈಸೂರು ಕಾಂಗ್ರೆಸ್ ಸಮಿತಿ ಪ್ರಾರಂಭವಾಯಿತು. ಚಳವಳಿ ಪ್ರಾರಂಭವಾಗುವುದನ್ನು ನಿರೀಕ್ಷಿಸುತ್ತಿದ್ದ ಕಾಲ ಅದು. ಆಗ ಕಾಂಗ್ರೆಸ್ಸಿನಲ್ಲಿ ಒಂದು ಪ್ರಲೋಭನೆ ಇತ್ತು. ಸರಕಾರದ ಸ್ಥಾಪನೆಯಲ್ಲಿ ಪಾಲ್ಗೊಳ್ಳುವ ಆಸೆ ಕೆಲ ನಾಯಕರಲ್ಲಿ ಇತ್ತು. ಅದಕ್ಕಾಗಿ ಚಳವಳಿ ತಡಮಾಡಲು ನೋಡುತ್ತಿದ್ದರು. ಆಗ ಕಾಂಗ್ರೆಸ್ ಕಾರ್ಯಕರ್ತರಾಗಿದ್ದ ನಾವು ಕೆಲವರು ಚಳವಳಿ ಪ್ರಾರಂಭಿಸಲು ಒತ್ತಾಯ ತರುವುದಕ್ಕೆ 'ಜಿಂಜರ್ ಗ್ರೂಪ್' ಒಂದನ್ನು ರಚಿಸಿಕೊಂಡಿದ್ದೆವು. ನಾನು ಆಗ ಮೈಸೂರು ಕಾಂಗ್ರೆಸ್ ಸಮಿತಿಯ ಸದಸ್ಯನಾಗಿದ್ದೆ. ಹೀಗೆ ನಾನು ಕಾಂಗ್ರೆಸ್ ಸದಸ್ಯನಾಗಿ ಸ್ವಾತಂತ್ರ್ಯ ಚಳವಳಿಯಲ್ಲಿ ತೊಡಗಿಕೊಂಡೆ.

**ಹೊ :** ನೀವು ಪತ್ರಿಕೋದ್ಯಮದಲ್ಲಿ ತೊಡಗಿಕೊಂಡದ್ದು ಹೇಗೆ? 'ಪೌರವಾಣಿ' ಪತ್ರಿಕೆ ಪ್ರಾರಂಭವಾದ್ದು ಯಾವಾಗ?

**ದೊರೆಸ್ವಾಮಿ :** ಕಾಂಗ್ರೆಸ್‌ನಲ್ಲಿ ಕ್ರಿಯಾಶೀಲ ಕಾರ್ಯಕರ್ತರಾಗಿದ್ದ 'ಜಿಂಜರ್ ಗ್ರೂಪ್'ನಲ್ಲಿದ್ದ ನಾವು ಆಗಾಗ ಸಭೆ ಸೇರಿ ಚರ್ಚೆ ನಡೆಸುತ್ತಿದ್ದೆವು. ಒಂದು ಪತ್ರಿಕೆ ಇದ್ದರೆ ಒಳ್ಳೆಯದು ಎಂದೆನಿಸಿತು ಎಲ್ಲರಿಗೂ. ಒಡನೆಯೇ ಕಾರ್ಯಪ್ರವೃತ್ತರಾದೆವು. 1941ರಲ್ಲಿ 'ಪೌರವಾಣಿ' ಪತ್ರಿಕೆ ಪ್ರಾರಂಭವಾಯಿತು. ಭದ್ರಣ್ಣ ಅಂತ ತುಂಬಾ ನಿಷ್ಠಾವಂತ ಪ್ರಾಮಾಣಿಕ ವ್ಯಕ್ತಿ ಅದರ ಸಂಪಾದಕರಾದರು. ಅದು ವಾರಪತ್ರಿಕೆ. ಚೆನ್ನಾಗಿ ನಡೆಯುತ್ತಿತ್ತು. 1942ರ ಕ್ವಿಟ್ ಇಂಡಿಯಾ ಚಳವಳಿ ಮುಗಿದ ಮೇಲೆ ನಾನು ಮೈಸೂರಿಗೆ ಹೋದೆ. ಅಲ್ಲಿ ಪುಸ್ತಕದ ಅಂಗಡಿ ಒಂದನ್ನು ತೆರೆದು, ಪ್ರಕಾಶನದ ಕೆಲಸವನ್ನೂ ಮಾಡತೊಡಗಿದೆ. ಮೈಸೂರಿನಲ್ಲಿ ಕಾಂಗ್ರೆಸ್ ಕಾರ್ಯಕರ್ತನಾಗಿದ್ದು ಸಂಘಟನೆಯಲ್ಲಿ ತೊಡಗಿಕೊಂಡಿದ್ದೆ. 'ಪೌರವಾಣಿ' ಪತ್ರಿಕೆಯ ಎಲ್ಲ ಹೊಣೆಯನ್ನು ಹೊತ್ತಿದ್ದ ಭದ್ರಣ್ಣ ಒಳ್ಳೆ ಬರಹಗಾರ, ಅವಿಶ್ರಾಂತ ದುಡಿಮೆಗಾರ. ಆದರೆ



*ಎಚ್. ಎಸ್. ದೊರೆಸ್ವಾಮಿ, ಎಸ್. ಸುರೇಂದ್ರ, ಆರ್. ಎಸ್. ರಾಜಾರಾಮ್, ಡಾ|| ಜಿ. ರಾಮಕೃಷ್ಣ ಮತ್ತು ಸಿ. ಆರ್. ಕೃಷ್ಣರಾವ್*

ದುರದೃಷ್ಟವಶಾತ್ ಒಂದು ದಿನ ಭದ್ರಣ್ಣನವರನ್ನು ಹುಚ್ಚು ನಾಯಿಯೊಂದು ಕಡಿದುಬಿಟ್ಟಿತು. ಆಸ್ಪತ್ರೆಗೆ ಸೇರಿಸಿದ ಮೇಲೆ ಅವನ ಸ್ಥಿತಿಗಂಭೀರವಾಯಿತು. ಹೈಡ್ರೋಫೋಬಿಯ ಕೆಟ್ಟ ಕಾಯಿಲೆ ಆತನಿಗೆ ಬಂದಿತ್ತು. ಜಿಂಜರು ಗ್ರೂಪಿನಲ್ಲಿದ್ದ ಎಲ್ಲ ಮಿತ್ರರಿಗೂ ಕರೆಬಂತು. ನಾವೆಲ್ಲ ಆಸ್ಪತ್ರೆಗೆ ಬಂದೆವು. ಅವನ ಕೊನೆಯ ಕೋರಿಕೆ ಒಂದೇ ಆಗಿತ್ತು. ಅದು 'ಪೌರವಾಣಿ' ಪತ್ರಿಕೆಯನ್ನು ಮುಂದುವರಿಸಿಕೊಂಡು ಹೋಗಬೇಕು ಎನ್ನುವುದು ಅಷ್ಟೆ. ಆತ ತೀರಿಕೊಂಡ ಮೇಲೆ ಆಫೀಸಿನಲ್ಲಿ ಕುಳಿತು ಎಲ್ಲರೂ ಪತ್ರಿಕೆಯ ಮುಂದಿನ ಹೊರೆ ಯಾರು ಹೊತ್ತುಕೊಳ್ಳಬೇಕು ಎಂಬ ಚರ್ಚೆ ನಡೆಸಿದೆವು. ನಾನು ಆಗ ಮೈಸೂರಿನಲ್ಲಿದ್ದೆ. ನಾನು ಪ್ರತಿ ತಿಂಗಳೂ ಸ್ವಲ್ಪ ಹಣ ಕಳಿಸುವುದಾಗಿ ಹೇಳಿದೆ. ಆದರೆ ಯಾರೂ ಮುಂದೆ ಬರಲಿಲ್ಲ. ಇದೇನಿದು ನಮಗಿಷ್ಟೂ ಆಗುವುದಿಲ್ಲವೆ ಎನಿಸಿತು ನನಗೆ. ಕಡೆಗೆ ನಾನು ಮೈಸೂರಿನಿಂದ ಬಂದು ವಹಿಸಿಕೊಳ್ಳಲೆ ಎಂದು ಕೇಳಿದೆ. ಕೂಡಲೇ ಎಲ್ಲರೂ ಸರಿ ಎಂದರು. ಮೈಸೂರಿಗೆ ಹೋಗಿ ಅಂಗಡಿ ಮುಚ್ಚಿ ಸಾಮಾನೆಲ್ಲವನ್ನು ಕಾಂಗ್ರೆಸ್ ನಾಯಕರಾಗಿದ್ದ ಎಂ.ಎಸ್. ಜೋಯಿಸರ ಮನೆಯಲ್ಲಿ ಹಾಕಿ ಬೆಂಗಳೂರಿಗೆ ಬಂದೆ. ಪತ್ರಿಕೆಗೆ ಬೇಕಾಗಿದ್ದ ಪೂರ್ವಸಿದ್ಧತೆಗಳಿಗೆಲ್ಲ ಎರಡು ಮೂರು ದಿನ ಹಿಡಿಯಿತು. ಮನೆಗೆ ಹೋದೆ. ನಮ್ಮಣ್ಣ ನನಗೆ ಪುಸ್ತಕದ ಅಂಗಡಿಗೆ 2000 ರೂಪಾಯಿಗಳನ್ನು ಕೊಟ್ಟಿದ್ದ. ಏನಿದು ಹೀಗೆ ಮಾಡಿಬಿಟ್ಟೆಯಲ್ಲ ಎಂದು ಕೂಗಾಡಿದ. ಇನ್ನು ಮನೆಯಲ್ಲಿದ್ದರೆ ನಿತ್ಯ ಜಗಳವಾದೀತು ಈ ವಿಷಯದಲ್ಲಿ ಎಂದು ತಿಳಿದುಕೊಂಡು ಆಫೀಸಿನಲ್ಲೆ ಉಳಿಯಲು ನಿರ್ಧರಿಸಿದೆ. ಮಾರ್ಕೆಟ್ಟಿನ ಹಿಂಭಾಗದಲ್ಲೇ 'ಪೌರವಾಣಿ' ಕಚೇರಿ, ಪ್ರೆಸ್ಸು ಇತ್ತು. ಮಾರ್ಕೆಟ್ಟಿನಲ್ಲಿ ಸೀತಾರಾಮಯ್ಯ ಎನ್ನುವವರು ವೀಳ್ಯದೆಲೆ ವ್ಯಾಪಾರ ಮಾಡಿಕೊಂಡಿದ್ದರು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದವರು. ನಮ್ಮ ತಂಡದಲ್ಲಿದ್ದರು. ಹಾಗಾಗಿ ಅವರ ಮನೆಯಲ್ಲಿ ಊಟದ ವ್ಯವಸ್ಥೆಯಾಯಿತು. ಹೀಗೆ ಸಂದರ್ಭಕ್ಕೆ ಕಟ್ಟುಬಿದ್ದು ನಾನು ಪತ್ರಕರ್ತನಾದೆ, 'ಪೌರವಾಣಿ' ಪತ್ರಿಕೆ ಸಂಪಾದಕನಾದೆ.

ನಾನು ಬಂದ ಮೇಲೆ ಪತ್ರಿಕೆಯನ್ನು ದಿನಪತ್ರಿಕೆಯಾಗಿ ಮಾಡಿದೆ. ತುಳಸಿತೋಟದ ಹಿಂದಕ್ಕೆ ಕಚೇರಿ ಬದಲಾಯಿಸಿದೆ. 1947 ಹತ್ತಿರ ಬರುತ್ತಿದ್ದುದರಿಂದ ದಿನಪತ್ರಿಕೆ ನಡೆಸುವುದು ಅಗತ್ಯವಾಗಿತ್ತು. ಮೂರುಕಾಸಿಗೊಂದು ಪತ್ರಿಕೆ, ದಿನಕ್ಕೆ ಮೂರು ನಾಲ್ಕು ಸಾವಿರ ಪತ್ರಿಕೆಗಳು ಹೋಗುತ್ತಿದ್ದುವು. ಕೆಲವೊಮ್ಮೆ ಹತ್ತು ಸಾವಿರದವರೆಗೆ ಹೋಗುತ್ತಿತ್ತು. ಮಾರಾಟಮಾಡುತ್ತಿದ್ದ ಹುಡುಗರು ಬಂದು ಕೇಳಿದಾಗ ಅಚ್ಚು ಹಾಕಿ ಪತ್ರಿಕೆ ಒದಗಿಸುತ್ತಿದ್ದೆವು. ನಲವತ್ತೇಳರ ಮೈಸೂರು ಚಲೋ ಚಳವಳಿ ಪ್ರಾರಂಭವಾಗಲಿತ್ತು. ಆಗ 'ವಿಶ್ವಕರ್ನಾಟಕ' ಪತ್ರಿಕೆ ನಿಂತುಹೋಗಿತ್ತು. ತಿ.ತಾ.ಶರ್ಮರನ್ನು ಚಳವಳಿ ಬಗ್ಗೆ ಲೇಖನಗಳನ್ನು ಬರೆದುಕೊಡಬೇಕೆಂದು ಕೇಳಿಕೊಂಡೆ. ಅವರು ಹತ್ತು ಲೇಖನಗಳನ್ನು ಬರೆದುಕೊಟ್ಟರು. ದಿನಕ್ಕೊಂದರಂತೆ ಲೇಖನ ಪ್ರಕಟಿಸುತ್ತಿದ್ದೆ. [illegible] ದಿನ ಸರಕಾರದಿಂದ ಆದೇಶವೊಂದು ಬಂತು. ಮುಂದೆ ಲೇಖನಗಳನ್ನು ಪ್ರಕಟಿಸುವುದಕ್ಕೆ ಮುನ್ನ ಸರಕಾರದ ಪರವಾನಗಿ ಪಡೆದುಕೊಳ್ಳಬೇಕು ಎನ್ನುವುದು ಅದರ ಸಾರಾಂಶ. ಇನ್ನೇನು ಚಳವಳಿ ಪ್ರಾರಂಭವಾಗಲಿತ್ತು. ಸರಕಾರದ ಆದೇಶ



ತಿಳಿಸಿದೆ. ಅವರು ಹಾಗೇ ಮಾಡಿ, ಆದರೆ ನಮ್ಮೂರಿನ ವಿಚಾರ ಏನೂ ಪತ್ರಿಕೆಯಲ್ಲಿ ಬರಬಾರದು ಎಂದರು. ನಾನು 'ಪೌರವಾಣಿ', 'ಪೌರ ಮಿತ್ರ', 'ಪೌರವೀರ', 'ಪೌರ ಮಾರ್ತಾಂಡ', 'ಪೌರಭಾಸ್ಕರ' ಹೀಗೆ ನಾಲ್ಕೈದು ಹೆಸರಿನಲ್ಲಿ ಸಂಪಾದಕ, ಪ್ರಕಾಶಕ ಎಂದು ಡಿಕ್ಲೇರ್ ಮಾಡಿಕೊಂಡೆ. ಒಂದು ಪತ್ರಿಕೆ ನಿಷೇಧಿಸಿದರೆ ಇನ್ನೊಂದು ಹೆಸರು ಇರಲಿ ಎಂದು ಹಾಗೆ ಮಾಡಿದೆ. ನಮ್ಮ ಬಳಿ ಏಜೆಂಟರ ವಿಳಾಸಗಳು ಕೂಡ ಇರಲಿಲ್ಲ, ನೆನಪಿದ್ದ ಗೆಳೆಯರಿಗೆಲ್ಲ ಬರೆದೆವು. ಸರಿ ಏಜಂಟರು ಗಳಿಂದ ನೂರು ಇನ್ನೂರು ಸಾವಿರ ಪತ್ರಿಕೆಗಳಿಗೆ ಆರ್ಡರ್ ಬಂದವು. ಮುಂಗಡ ಹಣವೂ ಬಂತು. 'ಇಂಡಿಯನ್ ಎಕ್ಸ್‌ಪ್ರೆಸ್' ಮತ್ತು 'ಹಿಂದೂ' ಪತ್ರಿಕೆಗಳವರನ್ನು ಪೇಪರ್ ಕಳಿಸಬೇಕೆಂದು ಕೋರಿದೆವು. ಅವರಿಂದ ಎರಡು ಲಾರಿ ಪೇಪರ್ ಬಂತು. ಹೀಗೆ ಹಿಂದೂಪುರ ದಿಂದ ಪತ್ರಿಕೆ ಬರಿಗೈಯಿಂದಲೇ ಪ್ರಾರಂಭವಾಯಿತು. ಹತ್ತು ಸಾವಿರದ ವರೆಗೆ ಪತ್ರಿಕೆಗಳು ಮಾರಾಟವಾಗಿಹೋಗುತ್ತಿದ್ದವು. ಚಳವಳಿಯ ಮೇಲೆ ಪತ್ರಿಕೆಯು ಸಾಕಷ್ಟು ಪ್ರಭಾವ ಬೀರಿತು. ಪತ್ರಿಕೆ ಟ್ರಡಲ್‌ನಲ್ಲಿ ಪ್ರಿಂಟು ಆಗುತ್ತಿತ್ತು. ಪ್ರಿಂಟರ್‌ಗಳಿಗೇನೋ ಉತ್ಸಾಹ. ಟ್ರಡಲ್ ತುಳಿಯುವಾಗ 'ಆರ್ಕಾಟನ್ನು ತೊಕ್ಕು' ಎನ್ನುತಿದ್ದ. ಆಗಿನ ಮೈಸೂರಿನ ದಿವಾನರಾಗಿದ್ದ ಆರ್ಕಾಟ್ ರಾಮಸ್ವಾಮಿ ಮೊದಲಿಯಾರನ್ನು ತುಳಿಯುತ್ತಿದ್ದೇನೆ ಎನ್ನುವುದು ಅರ್ಥ. ಕಷ್ಟಪಟ್ಟು ಸಾವಿರಾರು ಪ್ರತಿಗಳನ್ನು ಅಚ್ಚುಮಾಡುತ್ತಿದ್ದ. ಎರಡು ಮಸಾಲೆದೋಸೆ ತಿಂದು ಬೆವರು ಒರೆಸಿಕೊಂಡು ಪತ್ರಿಕೆ ಪ್ರಿಂಟ್ ಮಾಡುತ್ತಿದ್ದ.

ಪಾಲಿಸುವ ಹಾಗಿಲ್ಲ. ಆದ್ದರಿಂದ ಉಳಿದೆರಡು ಲೇಖನಗಳನ್ನು ಪ್ರಕಟಿಸಿ, ಸರಕಾರದ ಆದೇಶವನ್ನು ವಿವರಿಸಿ ಪ್ರತಿಭಟನಾರ್ಥವಾಗಿ ಇನ್ನು ಮುಂದೆ ಪತ್ರಿಕೆ ಪ್ರಕಟಣೆ ನಿಲ್ಲಿಸಲಾಗಿದೆ ಎಂದು ಘೋಷಿಸಿದೆ.

ಇದಾದ ಮೇಲೆ ಬೆಂಗಳೂರಿನಲ್ಲಿದ್ದರೆ ಸರಕಾರಿ ಆಜ್ಞೆ ಉಲ್ಲಂಘನೆ ಮಾಡಿರುವು ದರಿಂದ ದಸ್ತಗಿರಿಯಾಗುವುದು ಖಚಿತವಾಗಿತ್ತು. ಚಳವಳಿಗೆ ಸಹಾಯಕವಾಗುವಂತೆ ಪತ್ರಿಕೆಯನ್ನು ಹೊರಗಿನಿಂದ ತರಬೇಕೆಂದು ಆಲೋಚಿಸಿದೆವು. ನನ್ನ ಜೊತೆಯಲ್ಲಿ ಶ್ರೀಧರಮೂರ್ತಿ ಎನ್ನುವವರಿದ್ದರು. ಹಿಂದೂಪುರದಲ್ಲಿ ಲಿಂಗಣ್ಣ ಅಂತ ಒಬ್ಬರು ಕಂಬಳಿ ವ್ಯಾಪಾರ ಮಾಡಿಕೊಂಡಿದ್ದರು. ಅವರ ಪರಿಚಯ ಇರಲಿಲ್ಲ. ಅವರೂ ಚಳವಳಿಗೆ ಏನಾದರೂ ಸಹಾಯ ಮಾಡಬೇಕು ಎಂದು ಅಪೇಕ್ಷೆ ಇದ್ದವರು. ನಾನು ಶ್ರೀಧರ ಮೂರ್ತಿ ನೇರವಾಗಿ ಹಿಂದೂಪುರಕ್ಕೆ ಹೋದೆವು ಬರಿಗೈಯಲ್ಲಿ. ಲಿಂಗಣ್ಣನವರನ್ನು ಭೇಟಿಯಾಗಿ ವಿಷಯ ತಿಳಿಸಿದೆವು. ನಾವು ಬಟ್ಟೆ ಬರೆ ಏನನ್ನೂ ತೆಗೆದುಕೊಂಡು ಹೋಗಿರಲಿಲ್ಲ. ಅವರು ನಮ್ಮನ್ನು ಖಾದಿ ಭಂಡಾರಕ್ಕೆ ಕರೆದೊಯ್ದು ಬಟ್ಟೆ ತೆಗೆದು ಕೊಟ್ಟರು. ಪತ್ರಿಕೆ ಅಚ್ಚು ಹಾಕಿಸಲು ಪ್ರೆಸ್ಸು ಹುಡುಕಿಕೊಂಡು ಹೊರಟೆವು. ಅಲ್ಲೆಲ್ಲ ತೆಲುಗು ಟೈಪುಗಳು ಮಾತ್ರ ಇದ್ದುವು. ಸುತ್ತಾಡುತ್ತಿರುವಾಗ ಒಂದು ಪ್ರೆಸ್ಸಿನಲ್ಲಿ ಕನ್ನಡ ಫಾಂಟ್ ಇದ್ದುದನ್ನು ನೋಡಿದೆ. ಅವರು ಅದನ್ನು ಲಗ್ನಪತ್ರಿಕೆ ಅಚ್ಚು ಮಾಡಲು ತರಿಸಿ ಕೊಂಡಿದ್ದರು. ಕಂಪಾಸಿಟರ್ ಇರಲಿಲ್ಲ. ಕಂಪಾಸಿಟರ್ ಕರೆಸಿದರೆ ಪತ್ರಿಕೆ ಮಾಡಲು ಅಡ್ಡಿ ಇಲ್ಲ ಎಂದರು ಅವರು. ಇನ್ನು ಬಾಕಿ ಇದ್ದುದು ಪತ್ರಿಕೆ ಪ್ರಾರಂಭಿಸಲು ಅಗತ್ಯವಾಗಿ ಬೇಕಿದ್ದ ಡಿಕ್ಲರೇಷನ್. ಕಲೆಕ್ಟರ್ ಕಚೇರಿಗೆ ಹೋಗಿ ಕಲೆಕ್ಟರನ್ನು ಕಂಡದ್ದಾಯಿತು. ಅವರು ಈ ವಿಷಯ ನನಗೇನೂ ತಿಳಿಯದು, ಡೆಪ್ಯೂಟಿ ಕಲೆಕ್ಟರನ್ನು ನೋಡಿ ಎಂದರು. ಆತ ಮೇಲಿನವರು ಇರುವಾಗ ನಾನೇನೂ ಮಾಡುವಂತಿಲ್ಲ ಎಂದ. ಕೊನೆಗೆ ಕಲೆಕ್ಟರ್ ಸಾಹೇಬರಿಗೆ ನಮ್ಮಲ್ಲಿ ಪತ್ರಿಕೆ ಆರಂಭಿಸಲು ಅನುಸರಿಸುತ್ತಿದ್ದ ಕ್ರಮ

**ಹೊ :** ಸ್ವಾತಂತ್ರ್ಯಪೂರ್ವದ ಮತ್ತು ಸ್ವಾತಂತ್ರ್ಯೋತ್ತರದ ಈಗಿನ ಪತ್ರಿಕೋದ್ಯಮದ ಬಗ್ಗೆ ನಿಮ್ಮ ಅನಿಸಿಕೆಗಳೇನು ?

**ದೊರೆಸ್ವಾಮಿ :** ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಪತ್ರಿಕೆ ಪ್ರಾರಂಭಿಸಿದವರೆಲ್ಲ ಬರಿಗೈನವರೆ. ಮೈಸೂರಿನಲ್ಲಿ ವೆಂಕಟಕೃಷ್ಣಯ್ಯನವರು ಮಾತ್ರ ತಮ್ಮಲ್ಲಿದ್ದ ಹಣಹಾಕಿ ಪತ್ರಿಕೆ ನಡೆಸಿದರು. ದಿವಾನ್ ಶೇಷಾದ್ರಿ ಐಯ್ಯರ್ ಮನೆ ಎದುರಿಗಿದ್ದ ತಮ್ಮ ಮನೆಯನ್ನು ಪತ್ರಿಕೆಗಾಗಿ ಮಾರಾಟಮಾಡಿದರು. ಅವರು ದಿವಾನ್ ಶೇಷಾದ್ರಿ ಐಯ್ಯರ್ ಕಡು ವಿರೋಧಿಯಾಗಿದ್ದರು. 'ಮೈಸೂರ್ ಫಾರ್ ಮೈಸೂರಿಯನ್ಸ್' ಘೋಷಣೆ ಮಾಡಿದ ಮೊದಲಿಗರು. ಹೊರಗಿನವರು ಇಲ್ಲಿ ಬಂದು ಆಡಳಿತ ನಡೆಸುವುದನ್ನು ಅವರು ವಿರೋಧಿಸುತ್ತಿದ್ದರು. ಶೇಷಾದ್ರಿ ಐಯ್ಯರ್ ವೆಂಕಟಕೃಷ್ಣಯ್ಯ ಪತ್ರಿಕೆಯಲ್ಲಿ ಏನೇ ಬರೆದರೂ ಕ್ರಮ ತೆಗೆದುಕೊಳ್ಳಲು ಅವಕಾಶ ನೀಡಲಿಲ್ಲ. ತಮ್ಮ ಮನೆಗೆ ಬಂದವರಿಗೆ 'ನನ್ನ ಶತ್ರು ಎದುರು ಮನೆಯಲ್ಲಿದ್ದಾನೆ ಬೇಕಾದರೆ ನೋಡಿಕೊಂಡು ಹೋಗಿ' ಎಂದು ಅನ್ನುತ್ತಿದ್ದರು ಕಟುವಾಗಿ.

ಅಂದಿನ ಇತರ ಪತ್ರಿಕೆಗಳು ಬಹಳ ಕಷ್ಟದಿಂದ ನಡೆಯುತ್ತಿದ್ದವು. ಪಿ.ಆರ್. ರಾಮಯ್ಯನವರು ಮೈಸೂರಿನಲ್ಲಿ 'ತಾಯಿನಾಡು' ಪ್ರಾರಂಭಿಸಿದ್ದರು. ಆಗ ಒಂದು ಕಾಸಿನ ಪತ್ರಿಕೆ ಅದು. ಆಮೇಲೆ ಅವರು ಬೆಂಗಳೂರಿಗೆ ಬಂದದ್ದು. ಪತ್ರಿಕೆಯನ್ನು ಲೆಕ್ಕಾಚಾರವಾಗಿ ನಡೆಸಿದವರು ಅವರು. ಟಿ. ಟಿ. ಶರ್ಮರು 'ವಿಶ್ವಕರ್ನಾಟಕ' ನಡೆಸಿದರು. ಅವರೂ ಎಲ್ಲ ಕಳೆದುಕೊಂಡು ಪತ್ರಿಕೆ ನಿಲ್ಲಿಸುವ ಪರಿಸ್ಥಿತಿ ಬಂದಿತು. ಆಗ

## ಸ್ವಾತಂತ್ರ್ಯ ಹೋರಾಟ ಕಾಲದ ಒಂದು ಸ್ವಾರಸ್ಯಕರ ಪ್ರಸಂಗ

ಶ್ರೀನಿವಾಸಯ್ಯ ಅಂತ ನಂಜನಗೂಡಿನ ಪದವೀಧರ ಒಬ್ಬರಿದ್ದರು. ೧೯೪೨ರ ಕ್ವಿಟ್ ಇಂಡಿಯಾ ಚಳವಳಿಯ ಕಾಲ. ಆತ ನೇರ ಸೆಷನ್ಸ್ ಕೋರ್ಟಿಗೆ ಬಂದ. ವಕೀಲರು, ಕಕ್ಷಿಗಾರರು ತುಂಬಿದ್ದರು. ಅವನು ನ್ಯಾಯಾಧೀಶರ ಕುರ್ಚಿ ಮೇಲೆ ಕುಳಿತು, ಬ್ರಿಟಿಷರ ಆಡಳಿತದಲ್ಲಿರುವ ಈ ನ್ಯಾಯಾಲಯವನ್ನು ನಾನು ಡಿಸ್‌ಮಿಸ್ ಮಾಡಿದ್ದೇನೆ ಎಂದು ಹೇಳಿ ಭಾಷಣ ಮಾಡಿದ. ಒಡನೆಯೇ ಪೊಲೀಸರು ಅವನನ್ನು ಬಂಧಿಸಿದರು. ಮೊಕದ್ದಮೆ ದಾಖಲಿಸಿದರು.

ವಿಚಿತ್ರವೆಂದರೆ ಅವನು ಕೋರ್ಟಿಗೆ ಬರಬೇಕಾದ ದಿನ ಮಲಗಿಬಿಡುತ್ತಿದ್ದ. ಪೊಲೀಸರು ಅವನನ್ನು ಹೊತ್ತು ತರಬೇಕಾಗಿತ್ತು. ನ್ಯಾಯಾಲಯದಲ್ಲಿ ಅವನನ್ನು ಇಬ್ಬರು ಪೇದೆಗಳು ಹಿಡಿದು ನಿಲ್ಲಿಸಿಕೊಂಡಿರಬೇಕಾಗಿತ್ತು. ನ್ಯಾಯಾಧೀಶರ ಪ್ರಶ್ನೆಗಳಿಗೆ ಆತ "ನಾನು ಈ ನ್ಯಾಯಾಲಯವನ್ನು ಮಾನ್ಯ ಮಾಡುವುದಿಲ್ಲ" ಎಂದು ಒಂದೇ ಉತ್ತರ ಕೊಡುತ್ತಿದ್ದ. ಅವನನ್ನು ಹೊತ್ತುತರುತ್ತಿದ್ದ ಪೊಲೀಸರು ಒಮ್ಮೆ ಬೇಜಾರಾಗಿ ಅವನನ್ನು ಕಟ್ಟಿರುವೆ ಇರುವ ಜಾಗದಲ್ಲಿ ಮಲಗಿಸಿದರು. ನಾಲ್ಕು ಗಂಟೆಗಳ ಕಾಲ ಇರುವೆ ಕಡಿತವಿದ್ದರೂ ಅವನು ಮಿಸುಕಾಡದೆ ಇದ್ದ. ಇದೊಂದು ಬಗೆಯ ಪ್ರತಿಭಟನೆ. ಅವನು ಆಮೇಲೆ ಎಲ್ಲಿಗೆ ಹೋದ ತಿಳಿಯದು. ಈ ಪ್ರಸಂಗ ಈಗಲೂ ನೆನಪಿಗೆ ಬರುತ್ತದೆ.

- ಎಚ್. ಎಸ್. ದೊರೆಸ್ವಾಮಿ

ಪತ್ರಿಕೆ ಮಾರಾಟಗಾರರು, ಏಜಂಟರು ಹಣ ವಸೂಲಿಮಾಡಿ ತಂದುಕೊಟ್ಟು ಪತ್ರಿಕೆ ಉಳಿಸಲು ನೆರವಾಗುತ್ತಿದ್ದುದುಂಟು. 'ತಾಯಿನಾಡು' ಪತ್ರಿಕೆಯಲ್ಲಿ ಆ ಕಾಲದಲ್ಲಿ ಪತ್ರಿಕಾ ಸ್ವಾತಂತ್ರ್ಯ ಬರುವವರೆಗೆ ಸಂಪಾದಕೀಯ ಇಲ್ಲ ಎಂದು ಪ್ರಕಟಿಸುತ್ತಿದ್ದರು. ಪತ್ರಿಕೆಗಳನ್ನು ನಡೆಸುತ್ತಿದ್ದವರಲ್ಲಿ ಹಣ ಇರಲಿಲ್ಲ, ಬದ್ಧತೆ ಇತ್ತು. ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲವಾಗಿರುವ ಅಪೇಕ್ಷೆ ಇತ್ತು. ರಾಷ್ಟ್ರನಿರ್ಮಾಣಕ್ಕೆ ನೆರವಾಗುವ ಗುರಿ ಹೊಂದಿದ್ದವು. ಬರಹಗಳು ಚೆನ್ನಾಗಿರುತ್ತಿತ್ತು. ಬಂಡವಾಳ ಹೂಡಿ ಪತ್ರಿಕೆಗಳು ವ್ಯಾಪಾರಿ ಮನೋಭಾವದಿಂದ ಪ್ರಾರಂಭವಾದ್ದು ಸ್ವಾತಂತ್ರ್ಯೋತ್ತರ ಕಾಲದಲ್ಲಿ, ಅದಕ್ಕೂ ಸ್ವಲ್ಪ ಮುಂಚೆ.

ಈಗಿನ ಪತ್ರಿಕೆಗಳು ಒಂದು ಗುರಿ ಇರಿಸಿಕೊಂಡು ಕೆಲಸ ಮಾಡುತ್ತಿಲ್ಲ. ಉದ್ರೇಕಕಾರಿ ಸುದ್ದಿಗಳಿಗೆ ಪ್ರಾಧಾನ್ಯತೆ ನೀಡುತ್ತಿವೆ. ಪರಿಸ್ಥಿತಿಯಲ್ಲಿ ಬದಲಾವಣೆ ತರಬೇಕು ಎನ್ನುವ ಕಳಕಳಿ ಇಲ್ಲ. ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸುವ ಪ್ರವೃತ್ತಿ ಇಲ್ಲ. ಬದ್ಧತೆ ಇಲ್ಲ. ಜಾಹೀರಾತು ನೀಡುವವರ ಹಿಡಿತದಲ್ಲಿ ಪತ್ರಿಕೆಗಳಲ್ಲಿ ಈಗೀಗ ಜಾಹೀರಾತುಗಳು ಕೂಡ ಸುದ್ದಿ ರೂಪದಲ್ಲಿ ಪ್ರಕಟವಾಗುತ್ತಿವೆ. ಜನರನ್ನು ಮೋಸಗೊಳಿಸಲು ಅವನ್ನು ಲೇಖನ ರೂಪದಲ್ಲಿ ಪ್ರಕಟಿಸುತ್ತಾರೆ. ಹಾಗಾಗಿ ಇಂದು ಮೌಲ್ಯಗಳೇ ಇಲ್ಲವಾಗುತ್ತಿವೆ.

**ಹೊ:** ಮೌಲ್ಯಗಳ ಪ್ರಸ್ತಾಪ ಮಾಡಿದ್ದೀರಿ. ಗಾಂಧಿವಾದಿಗಳೆಂದು ಕರೆದುಕೊಳ್ಳುವವರೇ ಇಂದು ಮತೀಯತೆಗೆ ಪ್ರಚೋದನೆ ನೀಡುತ್ತಿದ್ದಾರಲ್ಲ ?

**ದೊರೆಸ್ವಾಮಿ :** ನೀವು ಹೇಳುತ್ತಿರುವುದು ನಿಜ. ಅಲ್ಪಸಂಖ್ಯಾತ ಪ್ರತಿನಿಧಿ ಗಾಂಧಿವಾದಿ ಪಟ್ಟಾಭಿರಾಮನ್ ಪ್ರಕರಣ ನಿಮಗೆ ಗೊತ್ತಿರಬೇಕು. ಹನುಮಂತಯ್ಯ ಮೊದಲ ಸಾರ್ವತ್ರಿಕ ಚುನಾವಣೆ ಕಾಲದಲ್ಲಿ ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. ಚುನಾವಣೆಗೆ ಟಿಕೇಟುಗಳ ಹಂಚಿಕೆಯಾಯಿತು. ಆಗ ಪಟ್ಟಾಭಿರಾಮನ್‌ಗೂ ಒಂದು ಟಿಕೇಟು ಕೊಟ್ಟರು, ಮೀಸಲು ಕ್ಷೇತ್ರದಲ್ಲಿ. ಆಗ ಪಟ್ಟಾಭಿರಾಮನ್ ಹನುಮಂತಯ್ಯನವರಿಗೆ ಪತ್ರವೊಂದು ಬರೆದು ಜಾತಿವಾರು ಸೀಟು ಹಂಚಿಕೆಯನ್ನು ವಿರೋಧಿಸಿದರು. ಯುವ ನಾಯಕರಾಗಿದ್ದ ಹನುಮಂತಯ್ಯ ಕೂಡ ಜಾತಿವಾರು ಟಿಕೆಟ್ ವಿಲೇವಾರಿ ಮಾಡಿದ್ದರಿಂದ ಅವರು ಬೇಸರಗೊಂಡಿದ್ದರು. ಬದಲಾವಣೆ ನಿರೀಕ್ಷಿಸಿದ್ದ ಪಟ್ಟಾಭಿರಾಮನ್ ಟಿಕೇಟು ತಿರಸ್ಕರಿಸಿ, ತಮ್ಮ ಹಳೆಯ ಕ್ಷೇತ್ರದಿಂದಲೇ ಸ್ಪರ್ಧಿಸಿ ಗೆದ್ದರು. ಅಂದರೆ ಆಗಲೇ ಈ ರೀತಿಯ ಅವಾಂತರ ಪ್ರಾರಂಭವಾಗಿತ್ತು. ಗೋಪಾಲ ಗೌಡರೂ ಕೂಡ ಆಗ ಅಸೆಂಬ್ಲಿಗೆ ಆಯ್ಕೆಯಾಗಿದ್ದರು. ಇಬ್ಬರೂ ಒಳ್ಳೆಯ ಪ್ರಭಾವಿ ಶಾಸಕರಾಗಿದ್ದರು. ಅವರ ಭಾಷಣಗಳನ್ನು ಮುಖ್ಯಮಂತ್ರಿ ಹನುಮಂತಯ್ಯ ಖುದ್ದಾಗಿ ಹಾಜರಿದ್ದು ಕೇಳುತ್ತಿದ್ದರು.

ಕಾಂಗ್ರೆಸ್ಸಿನಲ್ಲಿ ಹಿಂದಿನಿಂದಲೂ ಜಾತಿವಾದ ಇತ್ತು, ಅದು ಹಾಗೇ ಉಳಿದುಕೊಂಡು ಬಂದಿದೆ. ಇಂದು ಅದು ವಿಪರೀತಮಟ್ಟಕ್ಕೆ ಹೋಗಿದೆ. 1947ರಲ್ಲಿ ಜವಾಬ್ದಾರಿ ಸರಕಾರಕ್ಕೆ ಹೋರಾಟ ನಡೆಸಿದಾಗಲೂ ಅದು ಇತ್ತು.

**ಹೊ :** ಇದರ ವಿರುದ್ಧವಾಗಿ ಗಾಂಧಿಭವನ, ಗಾಂಧಿವಾದಿಗಳು, ಗಾಂಧಿವಿಚಾರವಾದಿಗಳು ಇವತ್ತು ಯಾವ ನಿಲುವು ತಳೆದು ಕೆಲಸಮಾಡುತ್ತಿದ್ದಾರೆ ?

**ದೊರೆಸ್ವಾಮಿ :** ಅಂಥದ್ದೇನೂ ಕಾಣಲಿಲ್ಲ, ಏನೂ ಮಾಡುತ್ತಿಲ್ಲ.

**ಹೊ :** ಗಾಂಧಿಭವನಕ್ಕೆ ಈಗ ಸರಕಾರದಿಂದ ಬೇಕಾದಷ್ಟು ಗ್ರ್ಯಾಂಟ್ ಬರುತ್ತಿದೆ. ಧನಸಹಾಯ ಬಂದಿದೆ. ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು ?

**ದೊರೆಸ್ವಾಮಿ :** ಏನೂ ಪರಿಣಾಮವಾಗುವುದಿಲ್ಲ. ನಮ್ಮ ಗುರಿ, ವಿಚಾರಗಳು ಖಚಿತವಾಗಿರುವವರೆಗೆ ಅದರಿಂದೇನೂ ಪ್ರಭಾವ ಆಗುವುದಿಲ್ಲ. ಈ ಹಣ ನಮ್ಮನ್ನು ಭ್ರಷ್ಟಗೊಳಿಸುವುದಿಲ್ಲ. ಆದರೆ ನಿಜವಾಗಿ ಗಾಂಧಿವಾದಿ ಕೆಲಸ ಆಗಬೇಕಾಗಿದೆ. ಕಟ್ಟಡದ ವಿಸ್ತರಣೆಯಷ್ಟೆ ಪ್ರಯೋಜನವಿಲ್ಲ. ಜನರ ಮನಸ್ಸನ್ನು ಪರಿವರ್ತಿಸಲು ಮತ್ತೊಂದು ಚಳವಳಿ ಕಟ್ಟಬೇಕಾಗಿದೆ. ಗಾಂಧೀಜಿ ಇರಿಸಿಕೊಂಡಿದ್ದ ಗುರಿ, ಕಾಂಗ್ರೆಸ್ಸಿನ ಆಕಾಂಕ್ಷೆಗಳನ್ನು ಜಾರಿಗೆ ತರಲು ನಾವೇನಾದರೂ ಕೆಲಸ ಮಾಡಬೇಕು. ಬೇಕಾದಷ್ಟು ಕೆಲಸವಿದೆ. ಇದುವರೆಗೆ ನಾವು ಐನೂರು ಕ್ಯಾಂಪ್‌ಗಳನ್ನು ಮಾಡಿದ್ದೇವೆ. ಕೆಲಸ ಮಾಡದೆ ಇದ್ದರೆ ಏನೂ ಪ್ರಯೋಜನವಾಗುವುದಿಲ್ಲ. ರಾಜಕೀಯ ಕ್ಷೇತ್ರದಲ್ಲಿ ಇವತ್ತು ಪ್ರಭಾವ ಬೀರಲಾಗಿಲ್ಲ.

ಹಿಂದೆ ಕಾಂಗ್ರೆಸ್ಸಿನಲ್ಲಿ ಬದಲಾವಣೆ ತರಲು ನಾವು ಕೆಲವರು ಪ್ರಯತ್ನಿಸಿದ್ದೆವು. ಮೂರು ತಿಂಗಳಿಗೊಮ್ಮೆ ಕಾರ್ಯಕರ್ತರ ಸಭೆ ನಡೆಸಬೇಕೆಂದು ಕಾಂಗ್ರೆಸ್ಸು ನಿಯಮಾವಳಿಯಲ್ಲಿದೆ. ನಾನು ಆಗ ಸಮಿತಿಗೆ ಸಭೆ ಕರೆಯಬೇಕೆಂದು ಸಹಿ ಸಂಗ್ರಹಿಸಿ ಪತ್ರ ಬರೆದೆ. ಎಂಟು ದಿನದಲ್ಲಿ ಸಭೆ ಕರೆಯದಿದ್ದರೆ ನಾವೇ ಕರೆಯಲು ನಿಯಮದಲ್ಲಿ ಅವಕಾಶವಿತ್ತು. ನಾನು ಮೈಸೂರಿನಲ್ಲಿ ಸಭೆ ಕರೆದೆ. ಐದು ನೂರು ಜನ ಬಂದಿದ್ದರು. ಪಟ್ಟಾಭಿರಾಮನ್ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು. ಆಗ ಕಾಂಗ್ರೆಸ್ ನಾಯಕರು ಎಚ್ಚೆತ್ತುಕೊಂಡರು. ಈಗ ಅದೆಲ್ಲ ಹೋಗಿದೆ. ನಾನು ಎ.ಐ.ಸಿ.ಸಿ. ಸದಸ್ಯನಾಗಿದ್ದಾಗ ವರ್ಕಿಂಗ್ ಕಮಿಟಿಗೆ ಒಂದು ನಿರ್ಣಯ ಕಳಿಸಿದ್ದೆ. ಸರಕಾರಕ್ಕೂ ಜನತೆಗೂ ಕೊಂಡಿಯಾಗಿ ಕೆಲಸಮಾಡಲು ಸಮಿತಿಯೊಂದನ್ನು ಸ್ಥಾಪಿಸಬೇಕು, ಎಂದು. ಈ ಸಮಿತಿ ಸರಕಾರ ಮಾಡಿರುವ ಒಳ್ಳೆಯ ಕೆಲಸವನ್ನು ಜನತೆಗೆ ತಿಳಿಸಲು, ತಪ್ಪು ಮಾಡಿದಾಗ ಸರಕಾರದ ಗಮನಕ್ಕೆ ತರಲು ಕೆಲಸ ಮಾಡಬೇಕು ಅನ್ನುವುದು ಅದರ ಸಾರಾಂಶ. ಈ ನಿರ್ಣಯ ಅಂಗೀಕಾರವಾಗಲಿಲ್ಲ. ಇಂದು ಯಾರೂ ಪ್ರಶ್ನಿಸುವವರೇ ಇಲ್ಲವಾಗಿದೆ.

**ಹೊ :** ಕಾಂಗ್ರೆಸ್ಸಿನಲ್ಲಿ ಭ್ರಷ್ಟಾಚಾರ ಬೇರೂರುತ್ತಿದೆ ಅಲ್ಲವೆ ?

**ದೊರೆಸ್ವಾಮಿ :** ಇದು ಮೊದಲನೇ ಚುನಾವಣೆಯಲ್ಲೇ ಪ್ರಾರಂಭವಾಯಿತು. ಹಿಂದೆ ನಾವೆಲ್ಲ ಒಂದು ಕಾಫಿಯನ್ನೂ ತೆಗೆದುಕೊಳ್ಳದೆ ನಮ್ಮ ಕೆಲಸ ಮಾಡುತ್ತಿದ್ದೆವು. ಕಾಂಗ್ರೆಸ್ಸಿನ ಪರವಾಗಿ ಎಲ್. ಎಸ್. ವೆಂಕೋಜಿರಾಯರು ಬಸವನಗುಡಿ ಕ್ಷೇತ್ರದಲ್ಲಿ ಚುನಾವಣೆಗೆ ಸ್ಪರ್ಧಿಸಿದ್ದರು. ಅವರು ಐವತ್ತು ಜನ ಕಾರ್ಯಕರ್ತರನ್ನು ಪ್ರಚಾರಕ್ಕೆ ಒದಗಿಸಬೇಕೆಂದೂ, ಅವರಿಗೆ ಪ್ರತಿಯೊಬ್ಬರಿಗೂ ದಿನಕ್ಕೆ 15 ರೂಪಾಯಿ ಭತ್ಯೆ ನೀಡುವುದಾಗಿಯೂ ತಿಳಿಸಿ ನಮ್ಮನ್ನು ಕೇಳಿದರು. ನಾವು ನಿರಾಕರಿಸಿದೆವು. ಅವರು ಬೇರೆಯವರನ್ನು ನೇಮಿಸಿಕೊಂಡು ಚುನಾವಣೆಯಲ್ಲಿ ಜಯಗಳಿಸಿದರು. ಈಗ ಚಾಕುಚೂರಿ ಸಂಸ್ಕೃತಿ ಬೆಳೆದು ಹೆಂಡ ಹಣದ ಹೊಳೆಯೇ ಹರಿಯುತ್ತಿದೆ. ಗೂಂಡಾಗಳ ಪಡೆಯೇ ಅಭ್ಯರ್ಥಿಗಳ ನೆರವಿಗೆ ನಿಲ್ಲುತ್ತದೆ. ಅದು ಹೋಗಿ ಈಗ ಗೂಂಡಾಗಳೇ ಚುನಾವಣೆಗೆ ನಿಂತು ಗೆಲ್ಲುತ್ತಿದ್ದಾರೆ. ಹೀಗೆ ರಾಜಕೀಯದ ಕ್ರಿಮಿನಲೈಸೇಶನ್ ಆಗಿಬಿಟ್ಟಿದೆ. ಇವತ್ತು ಅವರದೇ ರಾಜ್ಯವಾಗಿಬಿಟ್ಟಿದೆ. ಜನರಿಗೆ ಚುನಾವಣೆಗಳಲ್ಲಿ ವಿಶ್ವಾಸವೇ ಹೋಗುತ್ತಿದೆ. ಅರ್ಹರು ಯಾರೂ ಆರಿಸಿಬರುತ್ತಿಲ್ಲ.

**ಹೊ :** ಇವತ್ತಿನ ಪರಿಸ್ಥಿತಿಯಲ್ಲಿ ಗಾಂಧಿವಾದ ಎಷ್ಟರಮಟ್ಟಿಗೆ ಸುಧಾರಣೆ ತರಲು ಸಹಾಯಕವಾದೀತು ?

**ದೊರೆಸ್ವಾಮಿ :** ನನ್ನ ದೃಷ್ಟಿಯಿಂದ ಹೇಳುವುದಾದರೆ ಹಿಂದಿನ ಕಾಂಗ್ರೆಸ್ ಇವತ್ತು ಇಲ್ಲ. ಹೆಸರಿಗೆ ಮಾತ್ರ ಅದು ಇದೆ. ಅದಕ್ಕೆ ಯಾವ ಬದ್ಧತೆಯೂ ಇಲ್ಲ. ಯಾವ ಗುರಿಯೂ ಇಲ್ಲ. ಅಧಿಕಾರಗ್ರಹಣವೊಂದೇ ಮಂತ್ರವಾಗಿದೆ. ಈ ವಾತಾವರಣದಲ್ಲಿ ನಾವು ವಿಶಾಲವಾದ ಚಳುವಳಿ ನಡೆಸಬೇಕಾಗಿದೆ. ಇದಕ್ಕೆ ಗಾಂಧಿವಾದಿಗಳು ಮಾತ್ರವೇ ಈ ಕೆಲಸಮಾಡಬೇಕು ಎಂದೇನಲ್ಲ. ಇಂದು ಎಲ್ಲ ವಿಭಾಗದ ಜನರಲ್ಲೂ ಅತೃಪ್ತಿ ಇದೆ. ಜನರಲ್ಲಿ ಇಂದು ನಾವು ತಿಳಿವಳಿಕೆ ಮೂಡಿಸಬೇಕು. ಹಿಂದೆ ನಾವು ಕಾಂಗ್ರೆಸ್ ಚಳುವಳಿ ಸಂಘಟಿಸಿದಾಗ ಜನರ ನಡುವೆ ಕೆಲಸ ಮಾಡುತ್ತಿದ್ದೆವು. ಪಂಚತಾರಾ ಹೋಟಲುಗಳ ಸಂಸ್ಕೃತಿ ಆಗ ಇರಲಿಲ್ಲ. ಇವತ್ತು ಸಾವಿರಾರು ಎನ್.ಜಿ.ಓ. ಸಂಸ್ಥೆಗಳಿವೆ. ಅವು ಯಾವ ಸಮಸ್ಯೆಯನ್ನೂ ತೆಗೆದುಕೊಂಡು ಕೆಲಸ ಮಾಡುತ್ತಿಲ್ಲ. ಈಗ ನಾವು ಮೂಲ ಸಮಸ್ಯೆಗಳನ್ನು ಕುರಿತು ಕೆಲಸ ಪ್ರಾರಂಭಿಸಬೇಕಾಗಿದೆ. ಸಣ್ಣ ಪ್ರಮಾಣದಲ್ಲಾದರೂ ಪ್ರಾರಂಭ ಮಾಡಿದರೆ ಬದಲಾವಣೆ ಸಾಧ್ಯವಾದೀತು.

**ಹೊ :** ಕಾಂಗ್ರೆಸ್ಸಿನಲ್ಲಿ ಸುಧಾರಣೆ ತಂದು ಮೊದಲಿನ ಸ್ವರೂಪ ತರಲು ಸಾಧ್ಯವೆ ?



**ದೊರೆಸ್ವಾಮಿ :** ಖಂಡಿತ ಸಾಧ್ಯ. ಕಾಂಗ್ರೆಸ್ ಜನಬೆಂಬಲ ಕಳೆದುಕೊಂಡಿದೆ. ಜನರ ಮನಸ್ಸಿನಲ್ಲಿ ಯಾವುದೇ 'ಇಸಂ'ಗಳು ಕೂತಿಲ್ಲ. ಅವರು ಕಾಂಗ್ರೆಸ್ಸಿಗೆ ಅಥವಾ ಬೇರೆ ಪಕ್ಷಗಳಿಗೆ ತಮ್ಮನ್ನೇನೂ ಮಾರಿ ಕೊಂಡಿಲ್ಲ. ಯಾವುದು ಜನಪ್ರಿಯ ಎಂದು ಕಾಣುತ್ತದೋ ಅದನ್ನು ಬೆಂಬಲಿಸುತ್ತಾರೆ. ನಾವು ವಿಶಾಲವಾದ ತಳಹದಿಯ ಮೇಲೆ ಜನಪರ ಕೆಲಸಗಳಲ್ಲಿ ತೊಡಗಬೇಕು. ಅದು ಪಕ್ಷಾತೀತವಾದ ವೇದಿಕೆ ಆಗಬೇಕು. ಹಾಗಾದಾಗ ಮಾತ್ರ ಅದು ಸಾಧ್ಯ. ಗಾಂಧಿಭವನದಿಂದ ಮಾತ್ರವೇ ಈ ಕೆಲಸ ಸಾಧ್ಯವಿಲ್ಲ, ಎಲ್ಲರೂ ಕಲೆತು ಮಾಡಬೇಕು.

**ಹೊ :** ಇತರ ರಾಜಕೀಯ ಪಕ್ಷಗಳವರಿಂದ ನೀವು ಏನು ನಿರೀಕ್ಷಿಸುತ್ತೀರಿ ?

**ದೊರೆಸ್ವಾಮಿ :** ಈಗ ಅಧಿಕಾರ ಗ್ರಹಣವೊಂದೇ ಗುರಿಯಾಗಿ ಬಿಟ್ಟಿದೆ ರಾಜಕೀಯ ಪಕ್ಷಗಳಿಗೆ. ಅವರು ದೇಶದ ಬಗ್ಗೆ ಸರಿಯಾದ ತಿಳುವಳಿಕೆ ಹೊಂದಿಲ್ಲ. ಅಭಿವೃದ್ಧಿ ಕಾರ್ಯಗಳನ್ನು ಅವರು ದುಡ್ಡಿನಿಂದ ಅಳೆಯುತ್ತಾರೆ. ಅವರಲ್ಲಿ ಸರಿಯಾದ ತಿಳುವಳಿಕೆ ಉಂಟು ಮಾಡಬೇಕು. ಜನಪರ ಕಾರ್ಯಗಳಲ್ಲಿ ತೊಡಗುವಂತೆ ಮಾಡಬೇಕು. ಇದು ಸಾಧ್ಯವಾಗುವುದಾರೆ ಏನಾದರೂ ಆದೀತು.

**ಹೊ :** ಕಾಂಗ್ರೆಸ್ಸಿಗೂ ಭಾಜಪಕ್ಕೂ ವ್ಯತ್ಯಾಸ ಇಲ್ಲ ಎನ್ನುವ ಅಭಿಪ್ರಾಯ ಇದೆ. ಇದಕ್ಕೆ ನೀವೇನೆನ್ನುತ್ತೀರಿ ?

**ದೊರೆಸ್ವಾಮಿ :** ಅಂಥ ವ್ಯತ್ಯಾಸವೇನಿಲ್ಲ. ಅಧಿಕಾರವೊಂದೇ ಗುರಿ. ಅದಕ್ಕೆ ಯಾವ ಮಾರ್ಗವೂ ಸರಿ. ಯಾರಿಗೂ ಒಂದು ಸಿದ್ಧಾಂತ ವಿಲ್ಲದೇ ಇರುವುದರಿಂದ ಈ ಪರಿಸ್ಥಿತಿ ಬಂದಿದೆ. ಕಾಂಗ್ರೆಸ್ ಹೈಕಮಾಂಡ್‌ನವರಿಗೇ ಏನು ಮಾಡಬೇಕು ಎನ್ನುವ ಸ್ಪಷ್ಟ ಗುರಿಯಿಲ್ಲ. ಸಿದ್ಧಾಂತವನ್ನು ರೂಪಿಸಿಕೊಳ್ಳಬೇಕು ಎನ್ನುವ ವಿಚಾರ ಇರಬೇಕು. ಅದಾವುದೂ ಇಲ್ಲ. ಹಾಗಾಗಿ ಎರಡರ ನಡುವೆ ವ್ಯತ್ಯಾಸವೇನಿಲ್ಲ. ಅಭಿವೃದ್ಧಿ ಎಂದರೆ ಹಣ ಖರ್ಚುಮಾಡುವುದು ಎಂದು ತಿಳಿದಿದ್ದಾರೆ. ಇದರಿಂದ ಜನರಿಗೆ ಏನೂ ಪ್ರಯೋಜನವಾಗಿಲ್ಲ. ಖರ್ಚು ಮಾಡುವುದಕ್ಕಿಂತ ನುಂಗುವುದೇ ಜಾಸ್ತಿ.

**ಹೊ :** ನಮ್ಮ ರಾಜ್ಯದ ಪರಿಸ್ಥಿತಿಗೆ ಬರೋಣ. ಚುನಾವಣೆ ಬರುತ್ತಿದೆ. ಏನಾಗುತ್ತದೋ ಅದು ಬೇರೆ ವಿಷಯ. ಇವತ್ತು ಬೇಕಾದಷ್ಟು ಚಳವಳಿಗಳು ನಡೆಯುತ್ತಿವೆ. ಮುಖ್ಯವಾಗಿ ಕನ್ನಡಪರ ಹೋರಾಟಗಳು ನಡೆಯುತ್ತಿವೆ. ನೀವೂ ಅವುಗಳಲ್ಲಿ ಭಾಗವಹಿಸುತ್ತಿದ್ದೀರಿ. ಇದು ಎಲ್ಲಿಗೆ ಕೊಂಡೊಯ್ಯುತ್ತದೆ ?

**ದೊರೆಸ್ವಾಮಿ :** ಸಮಸ್ಯೆಗಳಂತೂ ಇವೆ. ಗಡಿ ವಿಚಾರವನ್ನು ತೆಗೆದುಕೊಂಡರೆ ಮಹಾರಾಷ್ಟ್ರ ಗಡಿ ಪ್ರದೇಶಗಳಲ್ಲಿ ಕನ್ನಡ ಶಾಲೆಗಳಿಲ್ಲ. ಇದ್ದರೂ ಅಧ್ಯಾಪಕರಿಲ್ಲ. ಹಾಗಾಗಿ ವಿದ್ಯಾರ್ಥಿಗಳು ಅತ್ತಲೂ ಇಲ್ಲ ಇತ್ತಲೂ ಇಲ್ಲ ಆಗಿದ್ದಾರೆ. ಸಮಸ್ಯೆಗಳನ್ನು ಬಗೆಹರಿಸಲು ಏನು ಮಾಡಬೇಕು ಎನ್ನುವುದನ್ನು ಆಲೋಚಿಸಬೇಕು. ಹೊಸೂರು ನಮಗೆ ಸೇರಬೇಕಾದ್ದು. ಆದರೆ ತಮಿಳುನಾಡಿನವರು ಈ ಪ್ರದೇಶದಲ್ಲಿ ಬೇಕಾದಷ್ಟು ಅಭಿವೃದ್ಧಿಕಾರ್ಯ ನಡೆಸಿದ್ದಾರೆ. ಲಕ್ಷಗಟ್ಟಲೆ ತಮಿಳರನ್ನು ಅಲ್ಲೇ ನೆಲೆಗೊಳಿಸಿದ್ದಾರೆ. ಬೆಳಗಾವಿಯಲ್ಲಿ ಯಾಕೆ ಮಾಡಲಿಲ್ಲ ಇಂಥ ಕೆಲಸವನ್ನು ನಮ್ಮ ಸರಕಾರ ? ಅಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಿ, ಕನ್ನಡಿಗರನ್ನು ನೆಲೆಗೊಳಿಸಿ, ಮರಾಠಿಯವರು ಸೊಲ್ಲೆತ್ತದ ಹಾಗೆ ಮಾಡಬಹುದಿತ್ತು. ಈ ಕೆಲಸ ಮಾಡಬೇಕು. ಕನ್ನಡಕ್ಕೆ ಸರಕಾರ ಆದ್ಯತೆ ನೀಡುವಂತೆ ಮಾಡುವುದು ಈಗ ಮುಖ್ಯವಾಗಿದೆ.

ಕನ್ನಡ ಚಳವಳಿಯು ಎರಡು ಗುಂಪಾಗಿದೆ. ಒಂದು ಹೊಡೆತ ಬಡಿತದ ದುಡ್ಡು ಮಾಡುವ ಗುಂಪು. ಇನ್ನೊಂದು ಚಳವಳಿ ಮಾಡಿ ಹೆಸರು ಗಳಿಸಿ ಮುಂದೆ ಏನಾದರೂ ಅಧಿಕಾರ ಸ್ಥಾನ ಹಿಡಿಯುವ ಹಂಬಲ ಇರುವ ಗುಂಪು. ಯಾರಿಗೂ ಬದ್ಧತೆ ಇಲ್ಲ. ಹಾಗಿದ್ದಿದ್ದರೆ ಎಲ್ಲರೂ ಒಂದಾಗಿರುತ್ತಿದ್ದರು. ನಾನು ಎಲ್ಲ ಚಳವಳಿಗಳಿಗೂ ಹೋಗುತ್ತೇನೆ, ಮಾತನಾಡುತ್ತೇನೆ. ಹಿಂದೆ ಕಾಂಗ್ರೆಸ್ಸಿನವರಾದ ನಾವು, ಕಮ್ಯುನಿಸ್ಟರು, ಸೋಷಲಿಸ್ಟರು ಬೇರೆ ಬೇರೆ ಸಿದ್ಧಾಂತಗಳವರಾಗಿದ್ದರೂ ಒಟ್ಟಾಗಿ ಕೆಲಸಮಾಡುತ್ತಿದ್ದೆವು. ದೇಶದ ಸ್ವಾತಂತ್ರ್ಯದ ಕರೆ ಬಂದಾಗ ಹೋರಾಟನಿರತರಾಗುತ್ತಿದ್ದೆವು. ನಮಗೆ ಬದ್ಧತೆ ಇತ್ತು. ನೀವು ಹಾಗೆ ಕೆಲಸಮಾಡಬೇಕು ಎಂದು ಹೇಳುತ್ತೇನೆ. ಇಂದು ಸಾವಿರಾರು ಸಂಸ್ಥೆಗಳಿವೆ. ಅವರವರ ಕೆಲಸದಲ್ಲಿ ಅವರವರು ನಿರತರಾಗಿದ್ದಾರೆ. ಆದರೆ ಕೂಡಿ ಕೆಲಸ ಮಾಡುವುದಿಲ್ಲ. ಸಮಸ್ಯೆ ಒಂದನ್ನು ತೆಗೆದುಕೊಂಡು ಬದ್ಧತೆಯಿಂದ ಒಂದಾಗಿ ಹೋರಾಟ ನಡೆಸುವುದಿಲ್ಲ. ಇದೆಲ್ಲ ನಾನು ಅವರ ಸಭೆಯಲ್ಲಿ ಹೇಳುತ್ತೇನೆ. ಸಮಸ್ಯೆಗಳನ್ನು ತೆಗೆದುಕೊಂಡು ಸರಿಯಾದ ರೀತಿಯಲ್ಲಿ ಅವನ್ನು ಪರಿಹರಿಸಲು ಪ್ರಯತ್ನಿಸಬೇಕು.

ಒಂದು ಉದಾಹರಣೆ : ಶಾಸನಸಭೆಗಳಲ್ಲಿ ಪ್ರತಿನಿತ್ಯ ಗಲಾಟೆಗಳು ನಡೆಯುತ್ತಿ. ಕೆಲಸಗಳೇ ಸ್ಥಗಿತಗೊಳ್ಳುತ್ತಿವೆ. ಸಾರ್ವಜನಿಕ ಸಮಸ್ಯೆಗಳ ಕಡೆ ಗಮನ ನೀಡುವವರೇ ಇಲ್ಲ. ಸಮಸ್ಯೆಗೆ ಅಲ್ಲಿ ಪರಿಹಾರ ಸಿಗದಿದ್ದರೆ ಹೊರಗೆ ಬಂದು ಜನರನ್ನು ಸಂಪರ್ಕಿಸಿ ಚಳವಳಿ ನಡೆಸಬಹುದು. ಅದು ಬಿಟ್ಟು ಚರ್ಚೆಗೇ ಅವಕಾಶ ಕೊಡದೆ ಗಲಾಟೆ ನಡೆಯುತ್ತಿದೆ. ಇದಕ್ಕೆ ನನ್ನದೊಂದು ಸೂಚನೆ ಇದೆ. ನಾವು ಸ್ಪೀಕರ್ ಅವರನ್ನು ಭೇಟಿಯಾಗಿ ಕಲಾಪಗಳನ್ನು ಅಡ್ಡಿಪಡಿಸುವವರ ಮೇಲೆ ಕ್ರಮ ತೆಗೆದುಕೊಳ್ಳುವಂತೆ ಒತ್ತಾಯ ತರಬೇಕು. ಯಾರೂ ಬರದೇ ಇದ್ದರೂ ನಾನು ಈ ಕೆಲಸ ಮಾಡುತ್ತೇನೆ.

**ಹೊ:** ಈ ಚಳವಳಿಗಳು ಶಿವಸೇನೆಯ ಹಾದಿ ಹಿಡಿಯುವುವೇ ?

**ದೊರೆಸ್ವಾಮಿ :** ಹಾಗಾಗುವುದಿಲ್ಲ. ದಾಂಧಲೆ ಮಾಡುವವರಿದ್ದಾರೆ ನಿಜ. ಯಾರಿಗಾದರೂ ಅಂಥ ಉದ್ದೇಶವಿದ್ದರೆ ಅದು ಫಲಕಾರಿಯಾಗುವುದಿಲ್ಲ. ಈ ಸಂಸ್ಥೆಗಳಿಗೆ ಕೂಡಿ ಕೆಲಸ ಮಾಡುವುದು ಸಾಧ್ಯವಿಲ್ಲ. ದಾಂಧಲೆ ಮಾಡಿದವರ ಮೇಲೆ ಪೊಲೀಸರು ಮೊಕದ್ದಮೆ ಹೂಡುತ್ತಾರೆ. ಆದರೆ ಅದನ್ನು ಗಂಭೀರವಾಗಿ ಮುಂದುವರಿಸುವುದಿಲ್ಲ. ಈ ರೀತಿ ದಾಂಧಲೆಯಿಂದ ಏನೂ ಪ್ರಯೋಜನವಾಗುವುದಿಲ್ಲ.

**ಹೊ:** ಸಾರ್ವಜನಿಕ ಸಂಸ್ಥೆಗಳ ಇಂದಿನ ಸ್ಥಿತಿ ಕುರಿತು ನೀವು ಏನು ಹೇಳುತ್ತೀರಿ ?

**ದೊರೆಸ್ವಾಮಿ :** ಉದಾಹರಣೆಗೆ, ಗೋಖಲೆ ಸಾರ್ವಜನಿಕ ಸಂಸ್ಥೆ ತೆಗೆದುಕೊಳ್ಳೋಣ. ಡಿವಿಜಿಯವರು ಒಂದು ಸದುದ್ದೇಶ ಇರಿಸಿಕೊಂಡು ಆ ಸಂಸ್ಥೆ ಪ್ರಾರಂಭಿಸಿದರು. ಆದರೆ ಇವತ್ತೇನಾಗಿದೆ ? ಸಂಘಪರಿವಾರದವರು ನೂರಾರು ಸದಸ್ಯರನ್ನು ಸೇರಿಸಿ ಅದನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದಾರೆ. ಮಿಥಿಕ್ ಸೊಸೈಟಿಯನ್ನು ಹಾಗೆ ವಶಪಡಿಸಿಕೊಂಡಿದ್ದಾರೆ. ಆಸ್ತಿ ಇರುವ ಸಂಸ್ಥೆಗಳನ್ನು ಹಿಡಿಯುವುದು ಅವರ ಉದ್ದೇಶ. ಇದನ್ನು ಬದಲಿಸಬಹುದು. ನಾವು ಸದಸ್ಯರನ್ನು ಸೇರಿಸಿ ಅವರನ್ನು ಚುನಾವಣೆಯಲ್ಲಿ ಸೋಲಿಸಬೇಕು. ಬೇರೆ ಮಾರ್ಗವಿಲ್ಲ. ಸಂಘಪರಿವಾರದವರು ಕ್ರಮಬದ್ಧವಾಗಿ ಸಾರ್ವಜನಿಕ ಸಂಸ್ಥೆ ಹಿಡಿಯುವ ಕೆಲಸ ಮಾಡುತ್ತಿದ್ದಾರೆ.

**ಹೊ :** ಈಗ ಸಮಕಾಲೀನ ಹೋರಾಟಗಳು ಬೇಕಾದಷ್ಟು ನಡೆಯುತ್ತಿರುವಾಗ ನಿಮ್ಮ ದೃಷ್ಟಿಯಲ್ಲಿ ಯಾವುದಕ್ಕೆ ಆದ್ಯತೆ ಇರಬೇಕು ? ನಾವು ಯಾವ ರೀತಿಯಲ್ಲಿ ಭಾಗವಹಿಸಬೇಕು ?

**ದೊರೆಸ್ವಾಮಿ :** ದಲಿತರ ಪ್ರಶ್ನೆ. ನಾನು ದಲಿತರ ಸಭೆಗಳಿಗೆ ಹೋಗಿದ್ದೇನೆ. ಸುಮ್ಮನೆ ಬೈಯ್ಯುವುದರಿಂದ ನಿಮಗೆ ಏನೂ ಪ್ರಯೋಜನವಾಗುವುದಿಲ್ಲ. ಈಗಿರುವ ಅವಕಾಶಗಳನ್ನು ಉಪಯೋಗಿಸಿಕೊಂಡು ಆರ್ಥಿಕವಾಗಿ ಮುಂದೆ ಬರಬೇಕು. ಇದು ಕಷ್ಟದ ಕೆಲಸ. ಅವರು ಮಾಡಲು ಸಿದ್ಧವಿಲ್ಲ. ಮೇಲಕ್ಕೆ ಬಾರದಿದ್ದರೆ ಏನೂ ಆಗುವುದಿಲ್ಲ ಎಂದು ಹೇಳುತ್ತೇನೆ. ಆದರೆ ಅವರು ಅದಕ್ಕೆ ಗಮನ ಕೊಡುತ್ತಿಲ್ಲ. ಕನ್ನಡಿಗರ ಮುಂದೆ ಅನೇಕ ಸಮಸ್ಯೆಗಳಿವೆ. ಅವಕ್ಕೆ ಬೇರೆ ಕನ್ನಡ ಸಂಸ್ಥೆಗಳಿವೆ. ಅವುಗಳು ಸಮಸ್ಯೆಯನ್ನು ಬಗೆಹರಿಸುವುದರಲ್ಲಿ ತೊಡಗಬೇಕು. ಆದರೆ ಹಾಗಾಗುತ್ತಿಲ್ಲ. ಸಮಸ್ಯೆ ಬಗೆಹರಿಸುವ ನಿಟ್ಟಿನಲ್ಲಿ ಕೆಲಸ ಆಗುತ್ತಿಲ್ಲ. ಅವನ್ನು ರಾಜಕೀಯಕ್ಕೆ ಬಳಸಿಕೊಳ್ಳುವ ಇಚ್ಛೆ ಇದ್ದರೆ ಕಷ್ಟದ ಕೆಲಸ.






*೯೦ ತುಂಬಿದ ಶ್ರೀ ಎಚ್.ಎಸ್. ದೊರೆಸ್ವಾಮಿ ಅವರನ್ನು ಕನ್ನಡ ಗೆಳೆಯರ ಬಳಗವು ಏಪ್ರಿಲ್ ೧೦ರಂದು ಸನ್ಮಾನಿಸಿತು. ಶ್ರೀಮತಿ ಲಲಿತಮ್ಮ ದೊರೆಸ್ವಾಮಿಯವರೂ ಉಪಸ್ಥಿತರಿದ್ದುದು ಒಂದು ವಿಶೇಷ.*

**ಹೊ :** ಭ್ರಷ್ಟಾಚಾರವನ್ನೇ ಮುಖ್ಯವಾದ ಗುರಿಯಾಗಿಸಿಕೊಂಡು ಹೋರಾಟ ನಡೆಸುವುದು ಸಾಧ್ಯವಿಲ್ಲವೇ ?

**ದೊರೆಸ್ವಾಮಿ :** ಭ್ರಷ್ಟಾಚಾರದ ಸಮಸ್ಯೆ ಬಹಳ ದೊಡ್ಡದು. ಅದು ನಮ್ಮ ಕೈಲಾಗದಷ್ಟು ಬೃಹತ್ತಾಗಿ ಬೆಳೆದಿದೆ. ಅದು ಯಾವತ್ತೂ ಮುಗಿಯದಿರುವ ಸಮಸ್ಯೆ. ರಾಮಸ್ವಾಮಿ ಮೊದಲಿಯಾರ್ ದಿವಾನರಾಗಿದ್ದಾಗ ಒಂದು ಮಾತು ಹೇಳಿದ್ದರು. ಪ್ರತಿದಿನ ಸಣ್ಣವರನ್ನು ಹಿಡಿಯುವುದರಿಂದ ಪ್ರಯೋಜನವಿಲ್ಲ, ನಾಲ್ಕು ದೊಡ್ಡವರನ್ನು ಹಿಡಿದುಹಾಕಿದರೆ ಸಾಧ್ಯವಾಗುವುದು ಅಂತ. ಭ್ರಷ್ಟರ ಮೇಲೆ ಕ್ರಮ ತೆಗೆದುಕೊಳ್ಳಲು ಕಾನೂನಿಗೆ ನಾವು ಒತ್ತಾಯ ತರಬಹುದು ಅಷ್ಟೆ. ಅದಕ್ಕೆ ಬದಲು ಸಣ್ಣ ಪ್ರಶ್ನೆಗಳನ್ನು ಕೈಗೆತ್ತಿಕೊಂಡು ಬಗೆಹರಿಸುವುದು ಮೇಲು. ದೊಡ್ಡ ಸಮಸ್ಯೆಗಳತ್ತ ಕೈ ಹಾಕಿ ಪ್ರಯೋಜನವಾಗದು. ಜನರಲ್ಲಿ ವಿಶ್ವಾಸ ಮೂಡಿಸಬೇಕಾದರೆ ಸಮಸ್ಯೆಗಳಿಗೆ ಪರಿಹಾರ ಒದಗಿಸಬೇಕು.

**ಹೊ:** ರಾಜ್ಯದ ಹಿತಾಸಕ್ತಿ ಕಾಪಾಡಲು ಪ್ರಾದೇಶಿಕ ಪಕ್ಷ ಅಗತ್ಯ ಎನ್ನುವ ವಿಚಾರದ ಬಗ್ಗೆ ನೀವೇನು ಹೇಳುತ್ತೀರಿ ?

**ದೊರೆಸ್ವಾಮಿ :** ರಾಷ್ಟ್ರೀಯ ಪಕ್ಷಗಳಲ್ಲಿ ಜನರು ವಿಶ್ವಾಸ ಕಳೆದುಕೊಂಡಿದ್ದಾರೆ. ಅವುಗಳಿಂದ ರಾಜ್ಯಕ್ಕೆ ಏನೂ ಪ್ರಯೋಜನವಾಗಿಲ್ಲ ಎನ್ನುವ ಭಾವನೆ ಇದೆ. ಹಾಗಾಗಿ ಪ್ರಾದೇಶಿಕ ಪಕ್ಷದಿಂದ ಏನಾದರೂ ಆದೀತು ಎಂಬ ಭಾವನೆ ಇದೆ. ಆದರೆ ಇದು ಭ್ರಮೆ ಅಷ್ಟೆ. ಅಂಥ ಪಕ್ಷಕ್ಕೆ ಪ್ರಾತಿನಿಧ್ಯ ದೊರೆಯಬಹುದು ಅಷ್ಟೆ. ಅದು ಬಿಟ್ಟರೆ ಏನೂ ಸಾಧನೆಯಾಗುವುದಿಲ್ಲ, ಇದನ್ನು ನಾವು ನೋಡುತ್ತಿದ್ದೇವೆ. ಜನಪರ ಕಾಳಜಿ, ಬದ್ಧತೆ, ತತ್ವನಿಷ್ಠೆ ಇರುವ ಪ್ರತಿನಿಧಿಗಳಿದ್ದರೆ ಏನಾದರೂ ಪ್ರಯೋಜನವಾಗಬಹುದು. ಅಷ್ಟೆ.

**ಹೊ:** ಸ್ವಾತಂತ್ರ್ಯ ಹೋರಾಟಗಾರರು ಈಗ ಎಷ್ಟು ಜನ ಇದ್ದಾರೆ ?

**ದೊರೆಸ್ವಾಮಿ :** ಸುಮಾರು ಸಾವಿರದ ಇನ್ನೂರು, ಸಾವಿರದ ಐನೂರು ಇರಬಹುದು. ಬದ್ಧತೆ, ಸೈದ್ಧಾಂತಿಕ ನಿಷ್ಠೆ ಇರಿಸಿಕೊಂಡಿದ್ದವರು ಬಹಳಷ್ಟು ಜನ ತೀರಿಕೊಂಡಿದ್ದಾರೆ. ಈಗಿರುವವರ ಪೈಕಿ ಎಷ್ಟೋ ಜನ ಬೇರೆ ಮಾರ್ಗ ಹಿಡಿದವರೂ ಇದ್ದಾರೆ. ಸ್ವಾತಂತ್ರ್ಯ ಚಳವಳಿ ಸಾಮೂಹಿಕ ಚಳವಳಿಯಾಗಿದ್ದುದರಿಂದ ಎಲ್ಲ ಬಗೆಯ ಜನರೂ ಬಂದುಹೋಗಿದ್ದರು.

**ಹೊ:** ಇಂದಿನ ನಾಯಕರು ದೇಶದ ಸ್ವಾತಂತ್ರ್ಯ, ಸಾರ್ವಭೌಮತ್ವ ಎತ್ತಿಹಿಡಿಯಲು ಸಮರ್ಥರೆ ?

**ದೊರೆಸ್ವಾಮಿ :** ಹೊರದೇಶಗಳವರನ್ನು ಎದುರಿಸಿ ಧೈರ್ಯವಾಗಿ ನಿಲ್ಲುವ ನೀತಿಯನ್ನು ಸಮರ್ಥಿಸಿಕೊಳ್ಳುವ ಸಾಮರ್ಥ್ಯ ಇರುವವರು ಇಲ್ಲವೇ ಇಲ್ಲ. ಇಂದಿರಾ ಗಾಂಧಿ ಅಂಥ ಸಾಮರ್ಥ್ಯ ಹೊಂದಿದ್ದರು. ಈಗಿನವರು ಗಾಳಿ ಬಂದ ಕಡೆ ತೂರಿಕೊಳ್ಳುತ್ತಾರೆ. ಈಗ ಗಾಳಿ ಒಂದೇ ಕಡೆ ಬೀಸುತ್ತಿರುವುದರಿಂದ ಆ ಕಡೆ ಸರಿಯುತ್ತಿದ್ದಾರೆ.

ಜಾಗತೀಕರಣದಿಂದ ದೇಶಕ್ಕೆ ತುಂಬಾ ನಷ್ಟವಾಗುತ್ತದೆ. ದೇಶವನ್ನು ವಿನಾಶದ ಅಂಚಿಗೆ ಕೊಂಡೊಯ್ಯುತ್ತದೆ. ಈಗ ಜಾಗತೀಕರಣ ಅನಿವಾರ್ಯ, ಒಪ್ಪಿಕೊಳ್ಳಬೇಕು ಎನ್ನುವ ವಾದವಿದೆ. ಗಾಂಧೀಜಿ ಇದ್ದಿದ್ದರೆ ಇದನ್ನು ಒಪ್ಪುತ್ತಿರಲಿಲ್ಲ. ಅವರು ತಪ್ಪನ್ನು ಎತ್ತಿ ತೋರಿಸಿ ಅದನ್ನು ಸರಿಪಡಿಸಲು ಧೈರ್ಯವಾಗಿ ಹೋರಾಡುತ್ತಿದ್ದರು. ಇವತ್ತು ಈ ಬದ್ಧತೆಯೇ ಹೋಗಿಬಿಟ್ಟಿದೆ. ವಿದೇಶೀ ಬಂಡವಾಳಿಗರು ಇಂದು ನಮ್ಮ ದೇಶವನ್ನು ಲೂಟಿ ಮಾಡುತ್ತಿದ್ದಾರೆ. ನೋಕಿಯಾದವರು ನಡೆಸಿರುವ ಅವ್ಯವಹಾರ ಅದಕ್ಕೆ ಉದಾಹರಣೆ. ರಫ್ತಿಗಾಗಿ ತಯಾರಿಸುವ ಹೆಸರಿನಲ್ಲಿ ದೇಶದಲ್ಲೇ ಮಾರಾಟ ಮಾಡಿ ಲಾಭ ದೋಚುತ್ತಿವೆ ಈ ವಿದೇಶೀ ಕಂಪನಿಗಳು. ಸರಕಾರ ಅದನ್ನು ನೋಡಿಕೊಂಡು ಸುಮ್ಮನೆ ಇರುತ್ತದೆ.

**ಹೊ :** ಹೊರಗಿನವರಿಗೆ ಮಣೆಹಾಕುವುದು ಹೆಚ್ಚಾಗಿದೆ ಅಲ್ಲವೆ ?

**ದೊರೆಸ್ವಾಮಿ :** ನಿಜ, ದೇವನಹಳ್ಳಿ ವಿಮಾನ ನಿಲ್ದಾಣದಿಂದ ಟ್ಯಾಕ್ಸಿಗಳನ್ನು ಓಡಿಸಲು ನಮ್ಮವರನ್ನು ಕೈಬಿಟ್ಟು ಹೊರಗಿನವರಿಗೆ ಕಂಟ್ರಾಕ್ಟ್ ಕೊಡಲಾಗಿದೆ. ಈಗ ವಿಮಾನ ನಿಲ್ದಾಣದಲ್ಲಿ ೩೫೦ ಟ್ಯಾಕ್ಸಿಗಳಿವೆ. ಅದಕ್ಕೆ ೨೦೦ ಜನ ಚಾಲಕರಿದ್ದಾರೆ. ಈ ಟ್ಯಾಕ್ಸಿಗಳು ಟೂರಿಸಮ್ ಇಲಾಖೆಯ ಆಶ್ರಯದಲ್ಲಿ ನಡೆಯುತ್ತವೆ. ಆದರೆ ಹೊಸ ವಿಮಾನ ನಿಲ್ದಾಣದ ಆಡಳಿತಗಾರರು ಬೇರೆ ಹೊರಗಿನವರಿಗೆ ವಹಿಸಿರುವುದರಿಂದ ೨೦೦ ಜನ ಬೀದಿಪಾಲಾಗಿದ್ದಾರೆ. ಇದರ ಹಿಂದೆ ಖಂಡಿತ ಭ್ರಷ್ಟಾಚಾರ ನಡೆದಿದೆ.

ಭೂಕಬಳಿಕೆಗಾಗಿ ಇಂದು ಮೈಸೂರು ಸೋಪ್ ಅಂಡ್ ಡಿಟರ್ಜಂಟ್ಸ್ ಮುಚ್ಚಲು ಹುನ್ನಾರ ನಡೆದಿದೆ. ಕಾರ್ಖಾನೆಯನ್ನು ದಾಬಸ್‌ಪೇಟೆಗೆ ವರ್ಗಾಯಿಸಲು ತೀರ್ಮಾನಿಸಲಾಗಿದೆ. ಇಂಥವೆಲ್ಲ ನಡೆಯುತ್ತಿವೆ. ಇದನ್ನು ಎದುರಿಸಿ ಹೋರಾಡಲು ಸಂಘಟಿತ ಹೋರಾಟ ನಡೆಸಬೇಕು. ಎಲ್ಲಿಂದಲಾದರೂ ಹೋರಾಟ ಪ್ರಾರಂಭಿಸಬೇಕು. ಜನರಲ್ಲಿ ಅತೃಪ್ತಿ ಇದೆ.

**ಹೊ :** ಭೂದಾನ ಚಳವಳಿಯಲ್ಲಿ ನೀವು ಭಾಗವಹಿಸಿದ್ದೀರಿ ? ಅದರಿಂದ ಏನಾದರೂ ಪ್ರಯೋಜನವಾಯಿತೆ ?

**ದೊರೆಸ್ವಾಮಿ :** ಖಂಡಿತ ಆಗಿದೆ. ಎಷ್ಟೋ ಜನ ಸದ್ಭಾವನೆಯಿಂದ ಸ್ವಯಂ ಪ್ರೇರಣೆಯಿಂದ ಜಮೀನುಗಳನ್ನು ನೀಡಿದರು. ಈಗಲೂ ಫಲಾನುಭವಿಗಳು ಭೂದಾನ ಕಾಯಿದೆ ಪ್ರಕಾರ ಅನುಭೋಗಿಸುತ್ತಿದ್ದಾರೆ. ಏಕೆಂದರೆ ಅವರು ಜಮೀನನ್ನು ಮಾರಾಟ ಮಾಡುವಂತಿಲ್ಲ. ಜಮೀನು ಹಂಚಿಕೆಯನ್ನು ಎಲ್ಲ ವಿಚಾರಗಳನ್ನು ಪರಿಗಣಿಸಿ, ಗ್ರಾಮದಲ್ಲಿ ಸಭೆ ನಡೆಸಿ ವಿತರಣೆ ಮಾಡಲಾಗುತ್ತಿತ್ತು. ಕನಿಷ್ಠ ಐದು ಎಕರೆ ಜಮೀನನ್ನು ವಿತರಣೆ ಮಾಡಲಾಯಿತು.

**ಹೊ:** ಮುಂಬರುವ ಚುನಾವಣೆಗಳ ಬಗ್ಗೆ ನಿಮ್ಮ ವಿಚಾರವೇನು ?

**ದೊರೆಸ್ವಾಮಿ :** ಮುಂದಿನ ಚುನಾವಣೆಯಲ್ಲಿ ಯಾರಿಗೂ ಬಹುಮತ ದೊರಕುವ ಸೂಚನೆ ಇಲ್ಲ. ಕಾಂಗ್ರೆಸ್ ನೆಲಕಚ್ಚಿದೆ. ರಾಷ್ಟ್ರೀಯ ಪಕ್ಷದ ಚಹರೆ ಹೋಗಿದೆ. ಬಿಜೆಪಿ ಗುಜರಾತ್ ಮಾದರಿ ಮಾಡಲು ಹೊರಟಿದೆ. ಮೋದಿಯನ್ನು ಮುಂದೆ ಇಟ್ಟುಕೊಂಡು ಚುನಾವಣೆಯಲ್ಲಿ ಬಹುಮತ ಗಳಿಸಲು ನೋಡುತ್ತಿದೆ. ಇಲ್ಲಿ ಅದೇನೂ ನಡೆಯದು. ಅವರಿಗಿರುವುದು ದೇವೇಗೌಡರು ಕೈಕೊಟ್ಟರು ಎಂದು ಹೇಳಿಕೊಳ್ಳುವುದಷ್ಟೆ. ಮಠಗಳವರಿಂದ ಏನೂ ಪ್ರಭಾವವಾಗುವುದಿಲ್ಲ. ಬಿಜೆಪಿ ಅಧಿಕಾರಕ್ಕೆ ಬರುತ್ತೆ ಅಂತ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ.

**ಹೊ :** ಬಹಳ ಹೊತ್ತು ನಿಮ್ಮ ಜೊತೆ ಮಾತನಾಡಿದೆವು. ಅನೇಕ ಸ್ವಾರಸ್ಯಕರ ಸಂಗತಿಗಳನ್ನು ಹಂಚಿಕೊಂಡಿದ್ದೀರಿ. ಧನ್ಯವಾದಗಳು.





# ಮರೆಗುಳಿ ಮಾಸ್ತರ

'ಅರವತ್ತಕ್ಕೆ ಅರುಳು ಎಪ್ಪತ್ತಕ್ಕೆ ಮರುಳು' ಎಂಬ ಕನ್ನಡ ಗಾದೆ ಯಾರಿಗೆ ತಾನೇ ಗೊತ್ತಿಲ್ಲ? 'ಆಡು ಮುಟ್ಟದ ಸೊಪ್ಪಿಲ್ಲ' ಎನ್ನುವ ಹಾಗೆ ಮರೆವು ತಟ್ಟದ ತಲೆಯೇ ಇಲ್ಲ! ಎಲ್ಲರ ಹಣೆಬರಹವೂ ಅದೇ ರಾಗ ಅದೇ ಹಾಡು ! ತುಸು ಹೆಚ್ಚು ತುಸು ಕಮ್ಮಿ ಅಷ್ಟೆ. ಮರೆವು ಇಂಟರ್‌ನ್ಯಾಷನಲ್. ಅದೊಂದು ಮಾಮೂಲಿ ಮಿದುಳಿನ ಬ್ಯಾನಿ. ಸಾಮಾನ್ಯವಾಗಿ ಮುಪ್ಪಿನಲ್ಲಿ ಮುತ್ತಿಕೊಂಡರೆ ಕೆಲವರಿಗೆ ಅದು ಮಧ್ಯ ವಯಸ್ಸಿನಲ್ಲೇ ಅಮರಿಕೊಳ್ಳುತ್ತೆ. ಹಾಗೆ ನೋಡಿದಲ್ಲಿ ಅದೇನು ಆನುವಂಶಿಕವಾಗಿ ಬರುವ ಸೊತ್ತಲ್ಲ. ಲಿಂಗಭೇದ ಮಾಡದಿರುವುದು ಮರೆವಿನ ವಿಶೇಷತೆ.

ಮರೆವು ದೇಶದ ಆದರಲ್ಲೂ ರಾಜ್ಯದ ರಾಜಕಾರಣಿಗಳಿಗೆ ತುಂಬಾ ಪ್ರಯೋಜನಕಾರಿ. ಅವರಿಗೆ ದೇವರು ದಯಪಾಲಿಸಿದ ವರದಾನವೆಂದರೆ ಹುಬ್ಬೇರಿಸಬೇಕಾಗಿಲ್ಲ. ನಿಜ ಹೇಳಬೇಕೆಂದರೆ ಮರೆವಿನ ಮಹಾಪ್ರಾಣ ವಿವಿ ಪ್ರೊಫೆಸರ್ಸ್. 'ಅಬ್‌ಸೆಂಟ್ ಮೈಂಡೆಡ್ ಪ್ರೊಫೆಸರ್' ಎಂಬ ಉಪನಾಮ ಅವರಿಗೆ ಬಹಳಷ್ಟು ಒಗ್ಗಿಹೋಗಿದೆ. ಪರಿಚಯದ ವಲಯದಲ್ಲಿ 'ಮರೆಗುಳಿ ಮಾಸ್ತರ' ಅಂತ ಕರೆಯೋದು ತೀರಾ ಮಾಮೂಲಿ – ಕೆಲವೊಮ್ಮೆ ಪ್ರೀತಿಯಿಂದ, ಕೆಲವೊಮ್ಮೆ ವ್ಯಂಗ್ಯದಿಂದ. ಮರೆಗುಳಿ ಮಾಸ್ತರ ಜೋಕ್‌ಗಳ ಭಂಡಾರವೇ ಇದೆ. ಸರ್ದಾರ್ಜಿ ಜೋಕ್ ತರ ಇವು ಕೂಡ ಸಿಕ್ಕಾಪಟ್ಟೆ ಹೆಸರು ಮಾಡಿವೆ.

ಪ್ರೊಫೆಸರ ಹುದ್ದೆಗೆ ಹಾರಿದ್ದೇ ತಡ, ನನಗೆ ದಾಳಿ ಇಟ್ಟಿತು ಸುಡುಗಾಡು ಮರೆಗುಳಿತನ. ದಿನಕಳೆದಂತೆ ಅದು ನನ್ನ ಸತಾಯಿಸುವ ಸೆಕೆಂಡ್ ವಾಯಿಫ್ ಆಗಬೇಕೆ ! ನನ್ನ ಬದುಕಿನಲ್ಲಿ ಬಂದು ಹೋದ ಮರೆಗುಳಿ ಪ್ರಸಂಗಗಳು ಲೆಕ್ಕವಿಲ್ಲದಷ್ಟು, ಎಲ್ಲವೂ ವಿಭಿನ್ನ, ವಿನೂತನ, ವಿನೋದ ಘಟನೆಗಳು. ಏಕಾಂತದಲ್ಲಿ ನೆನಪಾದಾಗ ನನ್ನಷ್ಟಕ್ಕೆ ನಾನು ನಗುತ್ತೇನೆ. ಸ್ನೇಹಿತರ ಜೊತೆಗೂಡಿ ಬಿದ್ದು ಬಿದ್ದು ನಕ್ಕಿದ್ದುಂಟು. ಮರೆಗುಳಿ ಪ್ರಸಂಗಗಳ ಖಜಾನೆಯಿಂದ ಹೆಕ್ಕಿ ತೆಗೆದ ಒಂದು ಸ್ಯಾಂಪಲ್ ಹೀಗಿದೆ –

ಅದೊಂದು ದಿನ ನಾನು ಹೆಗಲಿಗೆ ಬ್ಯಾಗ ಏರಿಸಿ, ತುರ್ತಾದ ಕೆಲಸದಮೇಲೆ ಮಂಗಳೂರಿಗೆ ಹೋದೆ. ಕೆಲಸ ಮುಗಿಸಿಕೊಂಡು, ಸುರತ್ಕಲ್ ಕಾಲೇಜ್ ಕ್ಯಾಂಪಸ್‌ಗೆ ವಾಪಸ್ಸಾದಾಗ ರಾತ್ರಿ ಎಂಟು ಗಂಟೆ. ವಾಡಿಕೆಯಂತೆ ಬೀದಿ ದೀಪಗಳು ತಲೆಮರೆಸಿಕೊಂಡಿದ್ದವು. ಕತ್ತಲಲ್ಲಿ ಹೆಜ್ಜೆ ಹಾಕಿದೆ. ನಮ್ಮ ಮನೆ ಸಂದಿಗೆ ತಿರುಗಿದೆ. ಮನೆ ಬಾಗಿಲು ತೆರೆದಿತ್ತು. ನನ್ನ ಅರ್ಧಾಂಗಿಯ ಸುಳಿವು ಸಿಗಲಿಲ್ಲ. ಸೀದಾ ಒಳಗೆ ಹೋಗಿ ಹಾಲಿನಲ್ಲಿ ಬ್ಯಾಗ ಇಟ್ಟು, ಸೋಫಾಗೊರಗಿ, ಉಸ್ಸಪ್ಪಾ ಅಂತ ಫ್ಯಾನಿನ ಗಾಳಿಗೆ ಮೈಯೊಡ್ಡಿ, ಗಾಳಿಯ ಆಹ್ಲಾದವನ್ನು ಹೀರುತ್ತ ಕಣ್ಮುಚ್ಚಿದೆ. ಕಿಚೆನ್ನಿಂದ ಬಂದ ಪಾತ್ರೆಗಳ ಸದ್ದು, ನನ್ನಾಕೆ ಅಡಿಗೆ ತಯಾರಿಯಲ್ಲಿ ಕಳೆದುಹೋಗಿರುವಳು ಎಂದು ನನ್ನ ಕಿವಿಯೂದಿತು.

''ಲೇ... ಒಂದು ಲೋಟಾ ಕಾಫಿಗೀಫಿ ತರ್ತೀಯಾ ?'' ಏರುದನಿಯಲ್ಲಿ ಕೂಗಿ ಹೇಳಿದೆ. ಕೆಲವೇ ನಿಮಿಷಗಳು ಅಷ್ಟೆ. ಕಿಚೆನಿಂದ ಹೊರಟ ನೂಪುರದ ನಿನಾದ, ಕೈಬಳೆಗಳ ಶಬ್ದ ನನ್ನ ಬಳಿ ಬಂದು ಸಾಯಿಲೆಂಟ್ ಆಯ್ತು. ಆ ಶಬ್ದ ನನ್ನ ಮನದನ್ನೆಯ ಬರುವಿಕೆಯನ್ನು ಸೂಚಿಸುವ ಒಲೇಕಾರ. ಹಬೆಯಾಡುವ ಉಪ್ಪಿಟ್ಟಿನ ತಟ್ಟೆ, ಕಾಫಿ ಲೋಟಾ ಕೈಯಲ್ಲಿ ಹಿಡಿದು, ಲಜ್ಜೆ ನಾಚಿಕೆನೆಲ್ಲಾ ಮೈಗೂಡಿಸಿಕೊಂಡು, ಮುಖದ ತುಂಬಾ ಹೂನಗೆ ಚೆಲ್ಲುತ್ತ ನನ್ನೆದುರು ನಿಂತಿರುವಳೆಂದು ಭಾವಿಸಿ ಫಕ್ಕನೆ ಕಣ್ಣು ಬಿಟ್ಟು ನೋಡಿದೆ. ನಂಬೋಕೆ ಆಗುತ್ತಿಲ್ಲ! ಮೋಹಿನಿ ಆಕೃತಿ ಕಣ್ಣಿಗೆ ಬಿತ್ತು. ಮುಖಾಮುಖಿಯಾದಾಗ ಹೌಹಾರಿ ಬಿಟ್ಟೆ! ಭ್ರಮಾಲೋಕದಿಂದ ವಾಸ್ತವಕ್ಕೆ ವಾಪಸ್ಸಾಗಲು ಒಂದರಗಳಿಗೆ. ನಿಂತವಳು ನಿಜಕ್ಕೂ ಮೋಹಿನಿಯಲ್ಲ ಮಧುಮತಿ! ಪಕ್ಕದ್ಮನಿ ಪ್ರೊ|| ಬಿಕ್ಷಾವತಿಯವರ ಮೂವತ್ತರ ಹರೆಯದ ಹೆಂಡತಿ. ಇನ್ನೂ ಮಕ್ಕಳಾಗಿಲ್ಲ. ಚೆನ್ನಾಗಿ ಮೆಂಟೇನ್ ಮಾಡಿಕೊಂಡಿರೋ ಆಕರ್ಷಕ ಫಿಗರ್ !

ಮಧುಮತಿಯ ಬಿಕ್ಕೊಂಡ ಮೂತಿ ನೋಡಿ 'ಎಲಾ ಇವಳಾ. ಇದೇನಪ್ಪಾ! ಚಿಣ್ಣಗಿ ಹಾವು ಇಲ್ಲೀ ತನಕ ಬಂತು ! ಯಾಕೆ ? ಏನು ?' ಎಂಬುದು ನನ್ನ ಎಣಕಿಗೆ ಸಿಗಲಿಲ್ಲ. ಬಹುಶಃ ರಹಸ್ಯವಾದ ಸುದ್ದಿ ತಿಳಿಸೋಕೆ ಬಂದಿರಲಿಕ್ಕೆ ಸಾಕು. 'ಹೋಗ್ಲಿ ಬಿಡು. ನನಗ್ಯಾಕ ಬೇಕು ಹೆಂಗಸರ ಉಸಾಬರಿ' ಅಂತ ಒಳ ಮನಸ್ಸು ಪಿಸುಗುಟ್ಟಿತು.

''ಬನ್ನಿ ಮಧುಮತಿಯವರೆ, ನೀವು ಹ್ಯಾಂಗಿದ್ದೀರಾ ? ಪ್ರೊಫೆಸರ್ ಹ್ಯಾಂಗಿದ್ದಾರೆ ? ಏನ್ ಸಮಾಚಾರ ? ನಿಮ್ಮ ಕೆಲ್ಸ ಇರೋದು ನನ್ನ ಬಳಿ ಇಲ್ಲಾ ನನ್ನಾಕಿ ಹತ್ರ. ನನ್ನಾಕಿ ಕಿಚೆನಾಗ ಅದಾಳ.'' ಶಿಷ್ಟಾಚಾರಕ್ಕೆ ನಾಲ್ಕು ಹಿತವಚನ ಹೇಳಿ ಅವಳನ್ನು ಒಳಗೆ ದಬ್ಬಲು ನೋಡಿದೆ. ಜಪ್ಪಯ್ಯ ಅಂದರೂ ಜರಗಲಿಲ್ಲ. ನನ್ನ ಮಾತು ಅಸಂಬದ್ಧವಾಗಿ ಕಂಡದ್ದು ಅವಳ ಮುಖಭಾವ ಬಿಂಬಿಸಿತು.

''ಸಾರ್ ನಿಮ್ಗೊಂದು ನಾಜೂಕಿನ ವಿಷ್ಯಾ ಹೇಳಾಕೈತ್ರಿ. ನನ್ನ ಪಾಲಿಗದು ಬಿಸಿ ತುಪ್ಪ ಆಗೈತಿ ! ಹ್ಯಾಂಗ ಹೇಳ್ಬೇಕೋ ಗೊತ್ತಾಗತಾ ಇಲ್ಲ'' ಒಗಟಿನಲ್ಲಿ ಉಲಿದಳು.

''ಏನ್ ವಿಷಯ ?'' ಹುಬ್ಬೇರಿಸಿದೆ. 'ಹೆಂಗಸರ ಮಸಲತ್ತಿನ ಮುಂದ ಗಂಡಸರೆಲ್ಲ ಟ್ಯೂಬ್‌ಲೈಟ್. ತುಡುಗಿಲ್ಲೆ ನನ್ನನ್ನು ತಟ್ಟಂತ ತಬ್ಬಿಕೊಂಡ ಅಂತ ರೂಮರ್ ಹುಟ್ಕೊಂಡ್ರಂತು ನನ್ನ ತಿಥಿ ಮಾಡಿಬಿಡ್ತಾರ ! ಯಾವ್ದಕ್ಕೂ ಹುಷಾರಲ್ಲಿರೋದು ವಾಸಿ' ನನ್ನ ಸಿಕ್ಸ್ತ್ ಸೆನ್ಸ್ ಎಚ್ಚರಿಸಿತು.

''ಮೇಡಂ ಯಾಕ ಸುತ್ತಿ ಬಳಸಿ ಮಾತಾಡ್ತೀರಿ ? ನೇರವಾಗಿ ವಿಷ್ಯಾಕ್ಕೆ ಬನ್ನಿ'' ಬಂದ ವಿಚಾರ ತಿಳಿಸಲು ಪುಸಲಾಯಿಸಿದೆ.

''ಹಾಗಾದ್ರ ನಾನು ಹೇಳೇದೀಟು ಕೇಳ್ರಿ. ನೀವು ದಾರಿ ತಪ್ಪಿದೀರಿ. ನೀವು ನುಗ್ಗಿ ಬಂದಿರೋದು ನಮ್ಮ ಮನಿ ಒಳಗ, ಒರಗಿರೋದು ನಮ್ಮ ಮನಿ ಸೊಫಾಕ್ಕೆ'' ಎಂದಳು ಖಾರವಾಗಿ.

ಅವಳ ಮಾತು ಸುನಾಮಿಯಂತೆ ನನ್ನ ಕಿವಿ ತಟ್ಟಿದಾಗ ಮುಖ ಕಪ್ಪಿಟ್ಟಿತು. ಮನೆಯ ಮಗ್ಗಲುಗಳನ್ನು ತಲಾಶ ಮಾಡಿದೆ. ನಮ್ಮ ಮನೆಯ ಯಾವುದೇ ಕುರುಹು ಸಿಕ್ಕಲಿಲ್ಲ. ನನ್ನ ಸೆಕೆಂಡ್ ವಾಯಿಫ್ ನನಗೆ ಕೈಕೊಟ್ಟಿತ್ತು. ಮಾನ ಮರ್ಯಾದೆ ಬೀದಿ ಪಾಲಾಗೋ ಭೀತಿ. ನನಗಾದ ಮುಖಭಂಗ ಮರೆಮಾಚಲು ದೇಶಾವರಿ ನಗೆ ಬೀರಿದೆ.

''ಮೇಡಂ ಅಚಾನಕ್ಕಾದ ಆಭಾಸಕ್ಕೆ ಹೊಣೆ ನನ್ನ ಅಡ್ನಾಡಿ ಮರೆಗುಳಿತನ. ಥೇಟ್ ಒಂದೇ ತರದ ಅಕ್ಕಪಕ್ಕದ್ಮನಿಗಳು. ಹೊರ್ಗಡೆ ಗಾಢಾಂಧಕಾರ ಬೇರೆ. ಹಿಂದ ಮುಂದ ನೋಡ್ದ ಇದ್ನ ನಮ್ಮನಿ ಅನ್ಕೊಂಡು, ಸೀದಾ ಒಳಗ ಬಂದು ಪ್ರಮಾದ ಎಸಗೀನಿ. ಸಾರಿ ಮೇಡಂ... ರಿಯಲಿ ಸಾರಿ. ಹೋಗಾಕ ಮುಂಚೆ ಸ್ಮಾಲ್ ರಿಕ್ವೆಸ್ಟ್. ಇವತ್ತಿನ ಮರೆಗುಳಿ ಪ್ರಸಂಗನ ಕ್ಯಾಂಪಸ್ ತುಂಬ ಬೊಂಬ್ಡಿ ಬಜಾಯಿಸಿ, ನನ್ನ ಮುಸುಡಿಗೆ ಮಸಿ ಬಳಿಯೋ ಕೆಲ್ಸ ಮಾಡಬ್ಯಾಡ್ರಿ. ಗೊತ್ತಿಲ್ದ ಮಾಡಿದ ತಪ್ಪಿಗೆ ಕ್ಷಮಿಸುವಿರಿ ತಾನೆ...?'' ಅಂತ ಉಗುಳು ನುಂಗುತ್ತ ಬಡಬಡಿಸಿದೆ.

'ಸದ್ಯ ನಿನ್ನ ಗ್ರಹಚಾರ ನೆಟ್ಟಗಿತ್ತು. ಮಧುಮತಿ ನಿನಗೆ ಯಕ್ಕಾಮಕ್ಕ ಉಗಿದು, ಹಾದಿರಂಪ ಬೀದಿರಂಪ ಮಾಡ್ಲಿಲ್ಲ. ಎಕ್ಕಡದ ಹೊಡೆತಗಳಿಂದ ಬಚಾವಾಗಿದ್ದು ನಿನ್ನ ಪುಣ್ಯ' ಒಳಮನಸ್ಸು ನುಡಿಯಿತು.

ಇನ್ನು ಅಲ್ಲಿ ಒಂದಕ್ಷಣ ಕಳೆಯುವುದು ಅಸಹನೀಯವೆನಿಸಿದಾಗ ದಿಗ್ಗನೆ ಎದ್ದು, ಬ್ಯಾಗ್ ಹೆಗಲಿಗೇರಿಸಿ, ಹ್ಯಾಪ್‌ಮೋರೆ ಹಾಕಿಕೊಂಡು ಮೆಲ್ಲಗೆ ಅಲ್ಲಿಂದ ಜಾರಿದೆ. ನಮ್ಮ ಮನೆಯ ಮೆಟ್ಟಲು ಮೆಟ್ಟಿದ ಮೇಲೆಯೇ ಕೆಳಗೆ ಹಾಕಿದ್ದ ತಲೆ ಮೇಲೆ ಎತ್ತಿದ್ದು.

**ಪ್ರೊ|| ರುದ್ರಯ್ಯ ವಿ. ಗದಗ**
ನಂ. ೨೪೦/೪೨; 'ಪಂಚವಟಿ', ವಿವೇಕಾನಂದ ನಗರ
ನೀರಿನ ಟ್ಯಾಂಕ್ ಹತ್ತಿರ, ಗದಗ - ೫೮೨ ೧೦೧

# ಭಾರತದಲ್ಲಿ ಎರಡನೆಯ ಹಸಿರು ಕ್ರಾಂತಿ ?

ಡಾ॥ ಎಚ್. ಆರ್. ಕೃಷ್ಣಮೂರ್ತಿ

**ಈ** ವರ್ಷದ ಫೆಬ್ರವರಿ ೨೮ರಂದು ಕೇಂದ್ರ ಮುಂಗಡಪತ್ರ ಮಂಡಿಸುವ ಸಂದರ್ಭದಲ್ಲಿ ವಿತ್ತಮಂತ್ರಿ ಶ್ರೀ ಪಿ. ಚಿದಂಬರಂ ಅವರು ''ಮಳೆಯಾಧಾರಿತ ಪ್ರದೇಶದಲ್ಲಿನ ರೈತರ ಸಂಕಷ್ಟಗಳನ್ನು ದೂರಮಾಡಿ ಅವರ ಆದಾಯವನ್ನು ಹೆಚ್ಚಿಸುವ ದೃಷ್ಟಿಯಿಂದ ಎರಡನೆಯ ಹಸಿರುಕ್ರಾಂತಿಯನ್ನು ತುರ್ತಾಗಿ ತರಬೇಕಾಗಿದೆ'' ಎಂದಿದ್ದಾರೆ. ಅರ್ಥಮಂತ್ರಿಗಳ ಹೇಳಿಕೆಗೆ ಬಹಳ ದೊಡ್ಡ ಹಿನ್ನೆಲೆಯಿದೆ. ೨೦೦೬ರಲ್ಲಿ ಭಾರತಕ್ಕೆ ಭೇಟಿ ನೀಡಿದ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಶ್, ಮಾರ್ಚ್ ೩ರಂದು ಹೈದರಾಬಾದಿನಲ್ಲಿ ನಡೆದ ಸಮಾರಂಭವೊಂದರಲ್ಲಿ ''ಸದ್ಯದಲ್ಲೇ ಅಮೆರಿಕಾದ ನೆರವಿನಿಂದ ಭಾರತದಲ್ಲಿ ಎರಡನೆಯ ಹಸಿರು ಕ್ರಾಂತಿಯಾಗಲಿದೆ'' ಎಂದು ಭವಿಷ್ಯ ನುಡಿದಿದ್ದರು: ಯಾವ ಹೆಚ್ಚಿನ ಪ್ರಚಾರವೂ ಇಲ್ಲದೆ, ಕೃಷಿ ವಿಶ್ವವಿದ್ಯಾಲಯ, ಕೃಷಿ ಸಂಶೋಧನಾ ಸಂಸ್ಥೆಗಳ ಗಮನ ಸೆಳೆಯದೇ ಎರಡನೆಯ ಹಸಿರುಕ್ರಾಂತಿ ಪ್ರಾರಂಭಿಕ ಹೆಜ್ಜೆಗಳನ್ನಿಟ್ಟಿದೆ. ಇದರ ಸುತ್ತಲಿನ ಗೌಪ್ಯತೆಯೇ ಹಲವಾರು ಅನುಮಾನಗಳಿಗೆ ಕಾರಣವಾಗಿದೆ.

ನಮ್ಮ ದೇಶದ ಮೊದಲ ಹಸಿರುಕ್ರಾಂತಿಯತ್ತ ಒಮ್ಮೆ ಗಮನ ಹರಿಸೋಣ.

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಾಗ ನಮ್ಮ ಮುಂದಿದ್ದ ಅತಿದೊಡ್ಡ ಸಮಸ್ಯೆಯೆಂದರೆ ಆಹಾರೋತ್ಪಾದನೆಯದು. ಮೊದಲೆರಡು ಪಂಚವಾರ್ಷಿಕ ಯೋಜನೆಗಳಲ್ಲಿ ನೀರಾವರಿಯ ಮೂಲಕ ಆಹಾರೋತ್ಪಾದನೆಗೆ ಹೆಚ್ಚಿನ ಒತ್ತು ನೀಡಿದರೂ ಆಹಾರದ ಕೊರತೆ ನೀಗಲಿಲ್ಲ. ಈ ಹಿನ್ನೆಲೆಯಲ್ಲಿ, ೧೯೬೦ರಿಂದಲೇ ಡಾ॥ ನಾರ್ಮನ್ ಬೋರ್ಲಾಗ್ ಅವರ ನೇತೃತ್ವದಲ್ಲಿ ಮೆಕ್ಸಿಕೋದ ಪ್ರಯೋಗಾಲಯಗಳಲ್ಲಿ, ರೈತರ ಗದ್ದೆಗಳಲ್ಲಿ ಅಭಿವೃದ್ಧಿಗೊಂಡು ಬಳಕೆಯಾಗುತ್ತಿದ್ದ ಸುಧಾರಿತ ತಳಿಗಳನ್ನು ಪಂಜಾಬ್ ಮತ್ತು ಹರಿಯಾಣಗಳಲ್ಲಿ ವ್ಯಾಪಕವಾಗಿ ಬಳಸಲಾಯಿತು. ಇದರೊಡನೆ ನಮ್ಮ ದೇಶದಲ್ಲೇ ಅಭಿವೃದ್ಧಿಗೊಂಡ ಸುಧಾರಿತ ಗೋಧಿ, ಬತ್ತ, ರಾಗಿ, ಜೋಳ ಮುಂತಾದವುಗಳೂ ಕೃಷಿಗೊಳಗಾದವು. ನೀರಾವರಿಯಿಂದ ದೊರೆತ ಧಾರಾಳವಾದ ನೀರು, ರಸಗೊಬ್ಬರ, ಪಿಡುಗುನಾಶಕಗಳ ಬಳಕೆ ಮುಂತಾದವುಗಳೆಲ್ಲ ಸೇರಿ ೧೯೭೮-೭೯ರಲ್ಲಿ ನಮ್ಮ ದೇಶದ ಆಹಾರೋತ್ಪಾದನೆ ೧೩೧ ದಶಲಕ್ಷ ಟನ್ನುಗಳನ್ನು ಮುಟ್ಟಿ, ಬೇರೆಯ ದೇಶಗಳ ಮುಂದೆ ಆಹಾರಕ್ಕಾಗಿ ಕೈಯೊಡ್ಡುವ ಪರಿಸ್ಥಿತಿ ತಪ್ಪಿತು. ಆಹಾರೋತ್ಪಾದನೆಯ ಕ್ಷೇತ್ರದಲ್ಲಿ ಭಾರತ ಅಂತರರಾಷ್ಟ್ರೀಯ ಮಟ್ಟದಲ್ಲಿ ತಲೆಯೆತ್ತಿ ನಿಲ್ಲುವಂತಾಯಿತು.

ಅಧಿಕ ಇಳುವರಿಯ ಬೀಜ, ರಸಗೊಬ್ಬರ, ಪಿಡುಗುನಾಶಕಗಳು ಮತ್ತು ನೀರಾವರಿ ಸೌಲಭ್ಯ – ಇವು ಹಸಿರು ಕ್ರಾಂತಿಯ ಮೂಲಮಂತ್ರ. ಇವುಗಳಿಂದ ಆಹಾರೋತ್ಪಾದನೆ ಹೆಚ್ಚಾದದ್ದು ನಿಜ. ಆದರೆ ಈ ಹೆಚ್ಚಿದ ಆಹಾರೋತ್ಪಾದನೆಗಾಗಿ ಪ್ರತಿ ಎಕರೆಯಲ್ಲಿ ಬಳಕೆಯಾಗುತ್ತಿದ್ದ ರಸಗೊಬ್ಬರಗಳ ಪ್ರಮಾಣ ೬ ಪಾಲು ಜಾಸ್ತಿಯಾಯಿತು. ಇದರಿಂದ ಕ್ರಮೇಣವಾಗಿ ಮಣ್ಣು ತನ್ನ ನೈಸರ್ಗಿಕ ಫಲವತ್ತತೆಯನ್ನು ಕಳೆದುಕೊಳ್ಳಲಾರಂಭಿಸಿತು. ನೆಲದಲ್ಲಿ ಲವಣಾಂಶ ಹೆಚ್ಚಿತು. ಪಿಡುಗುನಾಶಕಗಳನ್ನು ಎದುರಿಸಿ ಬದುಕಬಲ್ಲ ಹೊಸ ರೋಗಾಣುಗಳು ಕಂಡುಬಂದವು. ಸುಧಾರಿತ ತಳಿಗಳ ವ್ಯಾಪಕ ಬಳಕೆ ಪ್ರಾರಂಭವಾಗಿದ್ದರಿಂದ ಉತ್ತಮ ಗುಣಗಳ ಅನೇಕ ಸ್ಥಳೀಯ ತಳಿಗಳು ಮೂಲೆಗುಂಪಾದವು. ಇಳುವರಿಯ ಪ್ರಮಾಣವನ್ನು ಕಾಪಾಡಿಕೊಳ್ಳಲು ವರ್ಷವರ್ಷವೂ ಹೆಚ್ಚಿನ ಪ್ರಮಾಣದಲ್ಲಿ ರಸಗೊಬ್ಬರ, ಪಿಡುಗುನಾಶಕಗಳನ್ನು ಬಳಸಬೇಕಾದ ಪರಿಸ್ಥಿತಿ ಪ್ರಾರಂಭವಾಯಿತು. ಇದರ ಫಲವಾಗಿ ಕಳೆದ ನಾಲ್ಕು ದಶಕಗಳಲ್ಲಿ ಪ್ರತಿಯೊಂದು ಟನ್ ರಸಗೊಬ್ಬರದ ಬಳಕೆಯಿಂದ ಉತ್ಪಾದನೆಯಾಗುತ್ತಿದ್ದ ಆಹಾರದ ಪ್ರಮಾಣ

ಪರಿಸರಸ್ನೇಹಿ ಕೃಷಿ ತಂತ್ರಜ್ಞಾನದ ಮೇಲೆ ಆಧರಿತವಾದ ಸಣ್ಣ ಭೂಮಿಯ ಯಶಸ್ವಿ ಕೃಷಿ ನಿದರ್ಶನಗಳನ್ನು ನೋಡಲು ನಾವು ಕ್ಯೂಬಾ, ಚೀನಾ, ವಿಯೆಟ್‌ನಾಮ್‌ಗಳಿಗೆ ಹೋಗಬೇಕಾದುದಿಲ್ಲ. ಕರ್ನಾಟಕ, ಕೇರಳ, ತಮಿಳುನಾಡು, ಮಹಾರಾಷ್ಟ್ರಗಳ ಅಸಂಖ್ಯ ಹಳ್ಳಿಗಳಲ್ಲಿ ಇಂಥ ಉದಾಹರಣೆಗಳಿವೆ. ಬೀಜ, ನೀರು, ಮಣ್ಣು, ಸಾವಯವ ಕೃಷಿ, ಸ್ಥಳೀಯ ತಂತ್ರಜ್ಞಾನ, ಪರಿಸರ ಸಂರಕ್ಷಣೆಯ ಅತ್ಯುತ್ತಮ ನಿದರ್ಶನಗಳು ನಮಗೆ ದೊರೆಯುತ್ತವೆ. ಆದರೆ ಇಂಥ ಕೆಲಸಗಳನ್ನು ಗಮನಿಸಿ, ಪ್ರೋತ್ಸಾಹಿಸಿ ಬೆಂಬಲ ನೀಡುವ ಕೆಲಸ ಮಾತ್ರ ಸರ್ಕಾರದ ಕಡೆಯಿಂದ ನಡೆಯುವುದು ಅತ್ಯಂತ ವಿರಳ.

ಶೇಕಡಾ ೬೫ರಷ್ಟು ಕಡಿಮೆಯಾಗಿದೆ. ೨೦೦೬-೦೭ರಲ್ಲಿ ದೇಶದ ಆಹಾರೋತ್ಪಾದನೆಯ ಪ್ರಮಾಣ ೨೧೬.೩ ದಶಲಕ್ಷ ಟನ್ನುಗಳು. ನಿಗದಿಯಾಗಿದ್ದ ಗುರಿ ೨೨೦ ದಶಲಕ್ಷ ಟನ್ನುಗಳು. ೨೦೦೭-೦೮ರಲ್ಲಿದ್ದ ಗುರಿ ೨೨೧.೫ ದಶಲಕ್ಷ ಟನ್ನುಗಳು. ಉತ್ಪಾದನೆಯಾದದ್ದು ೨೧೯.೩ ದಶಲಕ್ಷ ಟನ್ನುಗಳು. ೧೯೮೨-೮೩ರಲ್ಲಿ ರಾಷ್ಟ್ರೀಯ ಸಗಟು ಉತ್ಪನ್ನದಲ್ಲಿ ಕೃಷಿಯ ಪಾಲು ಶೇಕಡಾ ೩೬.೪. ೨೦೦೬-೦೭ರಲ್ಲಿ ಇದರ ಪ್ರಮಾಣ ೧೮.೫. ದೇಶದ ೫೦ ಕೋಟಿ ಜನರಿಗೆ ಕೃಷಿಕ್ಷೇತ್ರ ಉದ್ಯೋಗವನ್ನೊದಗಿಸಿದರೂ ೧೯೯೦-೨೦೦೭ರ ಅವಧಿಯಲ್ಲಿ ಆಹಾರೋತ್ಪಾದನೆಯ ಪ್ರಮಾಣ ಎದ್ದುಕಾಣುವಂತೆ ಇಳಿಯುತ್ತಿದೆ. ೧೯೯೬-೨೦೦೪ರ ಅವಧಿಯಲ್ಲಿ ನಮ್ಮ ದೇಶದ ಕೃಷಿವಲಯ ಶೇಕಡಾ ೨ರ ಗತಿಯಲ್ಲಿ ಬೆಳೆದರೂ ಆಹಾರೋತ್ಪಾದನೆಯ ಪ್ರಮಾಣ ತಟಸ್ಥವಾಗಿತ್ತು. ಹಸಿರುಕ್ರಾಂತಿಯ ನಂತರವೂ ನಾವು ಹಲವಾರು ಬಾರಿ ಆಹಾರ ಪದಾರ್ಥಗಳನ್ನು ಆಮದು ಮಾಡಿಕೊಂಡಿದ್ದೇವೆ. ಕಳೆದ ವರ್ಷ ಭಾರತ ೫೦ ಲಕ್ಷ ಟನ್ ಗೋಧಿಯನ್ನು ಆಮದು ಮಾಡಿಕೊಳ್ಳಲು ಪ್ರಯತ್ನಿಸಿದಾಗ ಅದಕ್ಕೆ ದೊರತದ್ದು ೩೦ ಲಕ್ಷ ಟನ್‌ಗಳು ಮಾತ್ರ. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲೂ ಆಹಾರದ ಪ್ರಮಾಣ ಕಡಿಮೆಯಾಗಿ ಬೆಲೆ ಏರುತ್ತಿರುವುದರಿಂದ ಆಹಾರ ಪದಾರ್ಥಗಳ ಆಮದೂ ಮುಂದೆ ಕಷ್ಟಸಾಧ್ಯವಾಗಲಿದೆ. ಈ ಮಧ್ಯೆ ನಮ್ಮ ದೇಶದ ರೈತರಲ್ಲಿ ಶೇಕಡಾ ೪೦ರಷ್ಟು ಜನ ತಮ್ಮ ವೃತ್ತಿಯನ್ನು ಸಂಪೂರ್ಣವಾಗಿ ಕೈಬಿಡಲು ಸಿದ್ಧರಾಗಿದ್ದಾರೆಂದು ಕೇಂದ್ರದ ಕೃಷಿ ಮಂತ್ರಿಗಳೇ ತಿಳಿಸಿದ್ದಾರೆ. ನಮ್ಮ ದೇಶದ ಕೃಷಿವಲಯದಲ್ಲಿ ಹಿಂದೆಂದೂ ಕಂಡಿರದಂತಹ ವಿಷಮ ಪರಿಸ್ಥಿತಿಯಲ್ಲಿ ಎರಡನೆಯ ಹಸಿರುಕ್ರಾಂತಿಯ ಮಾತು ಕೇಳಿಬರುತ್ತಿದೆ.



ನಮ್ಮ ಹೊಲಕ್ಕೆ ಮಾತ್ರ ಕಾಡು ಪ್ರಾಣಿಗಳ ಕಾಟ ಇದೆ ಅಂದ್ಕೊಂಡಿದ್ದೆ.. ಅದೇನೋ ಷೇರು ಪೇಟೆಗೂ ಕರಡಿ, ಗೂಳಿಗಳು ಆಗಾಗ ದಾಳಿ ಮಾಡ್ತಿವೆಯಂತೆ ಕಣೋ..!!

೨೦೦೫ರ ಜುಲೈ ತಿಂಗಳಿನಲ್ಲಿ ಭಾರತ ಮತ್ತು ಅಮೆರಿಕಾ 'ಇಂಡೋ-ಯುಎಸ್ ನಾಲೆಡ್ಜ್ ಇನಿಷಿಯೇಟಿವ್ ಆನ್ ಅಗ್ರಿಕಲ್ಚರ್' ಎಂಬ ಒಪ್ಪಂದಕ್ಕೆ ಸಹಿ ಮಾಡಿದವು. ಇದಕ್ಕೆ ಸಹಿಹಾಕಿದ ನಮ್ಮ ಪ್ರಧಾನ ಮಂತ್ರಿಗಳು ''ಈ ಒಪ್ಪಂದ ಭಾರತದಲ್ಲಿ ಎರಡನೆಯ ಹಸಿರು ಕ್ರಾಂತಿಯ ಹರಿಕಾರನಾಗಲಿದೆ'' ಎಂಬ ಭವಿಷ್ಯ ನುಡಿದರು. ಈ ಒಪ್ಪಂದದ ಮುಖ್ಯಾಂಶಗಳು ಹೀಗಿವೆ :

* ಆಹಾರ ಸುರಕ್ಷತೆಯನ್ನು ಸಾಧಿಸಲು ಕೃಷಿ ಉತ್ಪಾದಕತೆಯನ್ನು ಹೆಚ್ಚಿಸುವುದು
* ಜೈವಿಕ ತಂತ್ರಜ್ಞಾನವೂ ಸೇರಿದಂತೆ ಕೃಷಿಗೆ ಸಂಬಂಧಿಸಿದ ಹಲವಾರು ತಂತ್ರಜ್ಞಾನಗಳ ವರ್ಗಾವಣೆ
* ಈ ತಂತ್ರಜ್ಞಾನದ ವರ್ಗಾವಣೆಗೆ ಅಗತ್ಯವಾದ ಕೃಷಿನೀತಿ ಮತ್ತು ನಿಯಂತ್ರಣ ವ್ಯವಸ್ಥೆಗಳನ್ನು ಜಾರಿಗೆ ತರುವುದು
* ಭಾರತ ಮತ್ತು ಅಮೆರಿಕಾಗಳ ನಡುವೆ ವ್ಯಾಪಾರ ಮತ್ತು ಬಂಡವಾಳದ ಹೂಡುವಿಕೆಯನ್ನು ವಿಸ್ತರಿಸಿ ಭಾರತವನ್ನು ಜಾಗತಿಕ ಅರ್ಥವ್ಯವಸ್ಥೆಯೊಡನೆ ಸಮನ್ವಯಗೊಳಿಸುವುದು.
* ಕೃಷಿ ಸಂಬಂಧಿತ ಯೋಜನೆಗಳಲ್ಲಿ ಭಾರತ ಮತ್ತು ಅಮೆರಿಕಾದ ಖಾಸಗಿ ಕಂಪನಿಗಳ ಭಾಗವಹಿಸುವಿಕೆಗೆ ಸೂಕ್ತ ಪರಿಸರವನ್ನು ಸೃಷ್ಟಿಸುವುದು.
* ಕೃಷಿ, ಶಿಕ್ಷಣ, ಸಂಶೋಧನೆ, ವಿಸ್ತರಣಾ ಚಟುವಟಿಕೆಗಳನ್ನೂ ಜಂಟಿಯಾಗಿ ನಿರ್ಧರಿಸುವುದು.
* ಭಾರತ-ಅಮೆರಿಕಾ ವಿಶ್ವವಿದ್ಯಾಲಯಗಳ ನಡುವಿನ ಸಂಪರ್ಕ, ವಿದ್ವಾಂಸರ ವಿನಿಮಯ, ಜಂಟೀ ಸಂಶೋಧನೆ ಮುಂತಾದವುಗಳನ್ನೂ ವ್ಯಾಪಕವಾಗಿ ಪ್ರಾರಂಭಿಸುವುದು.

ಭಾರತ ಮತ್ತು ಅಮೆರಿಕಾಗಳ ನಡುವಿನ ಈ ಒಪ್ಪಂದವನ್ನು ಜಾರಿಗೆ ತರಲು ಎರಡೂ ದೇಶಗಳ ಪ್ರತಿನಿಧಿಗಳಿರುವ ಒಂದು ಮಂಡಳಿಯಿದೆ. ಈ ಮಂಡಳಿಯಲ್ಲಿ ಖಾಸಗಿ ಕಂಪನಿಗಳ ಪ್ರತಿನಿಧಿಗಳೂ ಇದ್ದಾರೆ. ಭಾರತದ ಕಡೆಯಿಂದ ಮಸಾನಿ ಫಾರ್ಮ್ಸ್ ಮತ್ತು ಐ.ಟಿ.ಸಿ.ಗಳಿದ್ದರೆ, ಅಮೆರಿಕಾದ ಕಡೆಯಿಂದ ಮೋನ್ಸಾಂಟೋ, ಆರ್ಚರ್ ಡೇನಿಯಲ್ಸ್ ಮಿಡ್‌ಲ್ಯಾಂಡ್ ಮತ್ತು ವಾಲ್-ಮಾರ್ಟ್‌ಗಳಿವೆ. ಪ್ರಪಂಚದ ಎರಡನೆಯ ಅತಿದೊಡ್ಡ 'ಕುಲಾಂತರಿ' ಬೀಜಗಳ ಉತ್ಪಾದಕ ಹಾಗೂ ರೈತ ವಿರೋಧಿ ನೀತಿಗಳಿಂದ ಕುಖ್ಯಾತವಾಗಿರುವ ಮೋನ್ಸಾಂಟೋ ಮತ್ತು ಪ್ರಪಂಚದ ಅತಿದೊಡ್ಡ 'ರಿಟೇಲರ್' ವಾಲ್-ಮಾರ್ಟ್‌ಗಳು ಈ ಜಂಟೀ ಕಾರ್ಯಾಚರಣೆ ಮಂಡಳಿಯಲ್ಲಿರುವುದು ಅನೇಕ ಅನುಮಾನಗಳಿಗೆ ದಾರಿಮಾಡಿಕೊಡುತ್ತದೆ. ತಂತ್ರಜ್ಞಾನ, ಮಾರುಕಟ್ಟೆ, ಕೃಷಿಬೆಂಬಲ ವ್ಯವಸ್ಥೆ, ಉತ್ಪನ್ನಗಳಿಗೆ ಸೂಕ್ತ ಬೆಲೆ ಮುಂತಾದ ಸಮಸ್ಯೆಗಳಿಂದ ತತ್ತರಿಸುತ್ತಿರುವ ಕೃಷಿ ವಲಯ ಈ ಖಾಸಗಿ ಕಂಪನಿಗಳ ಪಾಲಿಗೆ ''ಹೊಸ ಸವಾಲುಗಳು ಮತ್ತು ಅವಕಾಶಗಳನ್ನು ಕಲ್ಪಿಸಿವೆ'' ಎಂದು ಈ ಕಂಪನಿಗಳ ವಕ್ತಾರರು ತಿಳಿಸಿದ್ದಾರೆ. ರೈತರ ಹಿತಾಸಕ್ತಿಗಳನ್ನು ಕಾಯುವ, ನಮ್ಮ ದೇಶದ ಕೃಷಿ ಸಂಶೋಧನೆ, ಶಿಕ್ಷಣ, ತರಬೇತಿ, ವಿಸ್ತರಣೆಗಳಲ್ಲಿ ಆದ್ಯತೆಗಳನ್ನು ರೂಪಿಸಬಲ್ಲ ಪ್ರತಿಷ್ಠಿತ ಸಂಸ್ಥೆಗಳಾಗಲೀ, ನಾಗರಿಕ ಸಮಾಜದ ಮುಕ್ತ ಚಿಂತಕರಾಗಲೀ ಈ ಮಂಡಳಿಯಲ್ಲಿ ಇಲ್ಲ.

ಕೃಷಿಕ್ಷೇತ್ರದಲ್ಲಿ ಬಳಸಬಹುದಾದ ಜೈವಿಕ ತಂತ್ರಜ್ಞಾನದ ಅಭಿವೃದ್ಧಿ ಮತ್ತು ವರ್ಗಾವಣೆ ಈ ಒಪ್ಪಂದದ ಮುಖ್ಯಗುರಿ. ಈ ತಂತ್ರಜ್ಞಾನದಲ್ಲಿ 'ಕುಲಾಂತರಿ ಆಹಾರ ಪದಾರ್ಥ'ಗಳ ಉತ್ಪಾದನೆಗೆ ಮುಖ್ಯವಾದ ಸ್ಥಾನವಿದೆ. ಈ ಕುಲಾಂತರಿ ತಳಿಗಳೇ ಆಹಾರೋತ್ಪಾದನೆಯನ್ನು ಹೆಚ್ಚಿಸಿ ಎರಡನೆಯ ಹಸಿರುಕ್ರಾಂತಿಗೆ ದಾರಿಮಾಡಿಕೊಡುತ್ತದೆ ಎಂಬ ವ್ಯಾಪಕ ಪ್ರಚಾರ ಇಂದು ನಡೆದಿದೆ. ಆದರೆ ಯಾವ ತಂತ್ರಜ್ಞಾನ ನಮ್ಮ ದೇಶದಲ್ಲಿ ಎರಡನೆಯ ಹಸಿರುಕ್ರಾಂತಿಯನ್ನು ತರಲಿದೆಯೆಂಬ ಭರವಸೆಯನ್ನು ಸರ್ಕಾರ ಜನರಿಗೆ ನೀಡುತ್ತಿದೆಯೋ ಅದೇ ತಂತ್ರಜ್ಞಾನಕ್ಕೆ ಅಮೆರಿಕಾ, ಯೂರೋಪ್, ಆಫ್ರಿಕಾ, ಜಪಾನ್‌ಗಳಲ್ಲಿ ತೀವ್ರ ವಿರೋಧವಿದೆ. ೨೦೦೬ರಲ್ಲಿ ಅರ್ಕಾನ್‌ಸಸ್, ಮಿಸ್ಸೌರಿ, ಮಿಸ್ಸಿಸಿಪಿ, ಲೂಸಿಯಾನ, ಟೆಕ್ಸಾಸ್ ರಾಜ್ಯಗಳ ರೈತರು 'ಬೇಯರ್ ಕ್ರಾಪ್ ಸೈನ್ಸ್' ಕಂಪನಿಯನ್ನು ಕೋರ್ಟಿಗೆಳೆದರು. ಈ ಕಂಪನಿ ಅಭಿವೃದ್ಧಿಪಡಿಸಿದ್ದ ಆದರೆ ಬಳಕೆಗೆ ಇನ್ನೂ ಅನುಮತಿ ದೊರೆಯಬೇಕಿದ್ದ 'ಲಿಬರ್ಟಿ ಲಿಂಕ್' ಎಂಬ ಪ್ರೋಟೀನನ್ನು ಒಳಗೊಂಡಿದ್ದ ಕುಲಾಂತರಿ ಬತ್ತದ ತಳಿಯೊಂದು ಅಲ್ಲಿನ ಸ್ಥಳೀಯ ತಳಿಗಳೊಂದಿಗೆ ಸೇರಿಹೋಗಿತ್ತು. ಈ ವಿಷಯ ಬಹಿರಂಗವಾದಕೂಡಲೇ ಜಪಾನ್, ಅಮೆರಿಕಾದಿಂದ ಆಮದುಮಾಡಿಕೊಳ್ಳುತ್ತಿದ್ದ ಬತ್ತವನ್ನು ಸಂಪೂರ್ಣವಾಗಿ ನಿಲ್ಲಿಸಿತು. ಯೂರೋಪಿಯನ್ ಒಕ್ಕೂಟದ ದೇಶಗಳು ಅಮೆರಿಕಾದಿಂದ ಬರುತ್ತಿದ್ದ ಬತ್ತದ ಮೇಲೆ ಅತ್ಯಂತ ಕಟ್ಟುನಿಟ್ಟಾದ ನಿಯಂತ್ರಣ ಹೇರಿದವು. ಈ ತೀವ್ರ ವಿರೋಧದ ಹಿನ್ನೆಲೆಯಲ್ಲಿ ಅಮೆರಿಕಾಕ್ಕೆ ಭಾರತದಂತಹ ಮಾರುಕಟ್ಟೆಯನ್ನು ಹುಡುಕಿಕೊಳ್ಳುವ ತೀವ್ರ ಅಗತ್ಯವಿದೆ.

ಎರಡನೆಯ ಹಸಿರುಕ್ರಾಂತಿಯ ಹಿಂದಿರುವುದು ಕುಲಾಂತರಿ ತಳಿಗಳ ತಂತ್ರಜ್ಞಾನ. ಕುಲಾಂತರಿ ತಳಿಗಳು ಯಶಸ್ವಿಯಾಗಬೇಕಾದರೆ ಅಧಿಕ ಇಳುವರಿ, ರೋಗ ನಿರೋಧಕ ಶಕ್ತಿ, ಪರಿಸರದ ವೈಪರೀತ್ಯಗಳನ್ನು ಎದುರಿಸಬಲ್ಲ ಸಾಮರ್ಥ್ಯ ಮುಂತಾದ ಉತ್ತಮ ಗುಣಲಕ್ಷಣಗಳಿರುವ ಸ್ಥಳೀಯ ತಳಿಗಳು ಬೇಕೇ ಬೇಕು. ಮಹಿಕೋ-ಮೋನ್ಸಾಂಟೋ ಕಂಪನಿಗಳು ಹೊರತಂದ ಬಿಟಿ-ಹತ್ತಿ ವಿಫಲವಾಗಿ ಅದರ ವಿರುದ್ಧ ರೈತರ ಆಕ್ರೋಶ ಹೆಚ್ಚುತ್ತಿರುವ ಸಂದರ್ಭದಲ್ಲಿ ಸ್ಥಳೀಯ ತಳಿಗಳ ಬಗ್ಗೆ ಸಂಪೂರ್ಣ ಜ್ಞಾನವಿಲ್ಲದೇ ಹೊಸ ಕುಲಾಂತರಿ ತಳಿಗಳನ್ನು ಅಭಿವೃದ್ಧಿಪಡಿಸುವುದು ಅಸಾಧ್ಯವೆಂಬ ಅಂಶ ಅಮೆರಿಕಾದ ಖಾಸಗಿ ಕಂಪನಿಗಳಿಗೆ ತಿಳಿದಿದೆ. ಆದರೆ 'ಜೈವಿಕ ವೈವಿಧ್ಯ ಒಡಂಬಡಿಕೆ'ಗೆ ಸಹಿಹಾಕಿ, ತನ್ನ ಸೆನೇಟಿನ ಅನುಮೋದನೆ ಪಡೆದ ಹೊರತು ಅಮೆರಿಕಾ ನಮ್ಮ ದೇಶದ ಜೈವಿಕ ಭಂಡಾರಕ್ಕೆ ಕೈಹಾಕುವಂತಿಲ್ಲ. ಈ ಒಡಂಬಡಿಕೆಗೆ ಅಮೆರಿಕಾ ಸಂಪೂರ್ಣವಾಗಿ ಬದ್ಧವಾದರೆ ಮಾತ್ರ, ಭಾರತದ ಹಕ್ಕಿಗೆ ಧಕ್ಕೆಯಾಗದಂತೆ ನಮ್ಮ ಜೈವಿಕ ಸಂಪನ್ಮೂಲವನ್ನು ಅಮೆರಿಕಾ ಬಳಸಿಕೊಳ್ಳಬಹುದು. ಅಂಥ ಬಳಕೆಯಿಂದ ದೊರೆಯುವ ಎಲ್ಲ ಲಾಭ, ಪ್ರಯೋಜನಗಳನ್ನೂ ಅಮೆರಿಕಾ ನಮ್ಮೊಡನೆ ನ್ಯಾಯಬದ್ಧವಾಗಿ ಹಂಚಿಕೊಳ್ಳಬೇಕು. ಆದರೆ. ಅಮೆರಿಕಾದ ಖಾಸಗಿ ಕಂಪನಿಗಳಿಗೆ ಇದು ಬೇಡ. ಹೀಗಾಗಿ ಅಮೆರಿಕಾ 'ಜೈವಿಕ ವೈವಿಧ್ಯ' ಒಡಂಬಡಿಕೆಗೆ ಸಹಿಹಾಕಿದೆ. ಆದರೆ ಅದರ ಮುಂದಿನ ಹಂತದಲ್ಲಿ ಸೆನೇಟಿನ ಅನುಮೋದನೆಯನ್ನು ಪಡೆದಿಲ್ಲ. ಈ ಮಧ್ಯೆ ಒಪ್ಪಂದಕ್ಕೆ ಸಂಪೂರ್ಣವಾಗಿ ಬದ್ಧವಾಗದೇ, 'ಇಂಡೋ-ಯುಎಸ್ ನಾಲೆಡ್ಜ್ ಇನಿಷಿಯೇಟಿವ್' ಮೂಲಕ ಹಿಂಬಾಗಿಲಿನಿಂದ ನಮ್ಮ ದೇಶದ ಜೈವಿಕ ವೈವಿಧ್ಯವನ್ನು ಬಳಸಿಕೊಳ್ಳುವ ಮಾರ್ಗಗಳನ್ನು ಹುಡುಕುತ್ತಿದೆ. ನಮ್ಮ ದೇಶದ ಜೈವಿಕ ಸಂಪನ್ಮೂಲವನ್ನು ಬಳಸಿಕೊಂಡು ಅಮೆರಿಕಾದ ಕಂಪನಿಗಳು ಅಭಿವೃದ್ಧಿಪಡಿಸಲಿರುವ ತಳಿ, ಬೀಜ, ಜೀನ್‌ಗಳ ಮೇಲೆ ಪೇಟೆಂಟ್ ಪಡೆಯಲು ನಮ್ಮ ದೇಶದ ಬೌದ್ಧಿಕ ಆಸ್ತಿಹಕ್ಕು ಮತ್ತು ಸಸ್ಯತಳಿಗಳ ರಕ್ಷಣೆ ಹಾಗೂ ರೈತರ ಹಕ್ಕುಗಳಿಗೆ ಸಂಬಂಧಿಸಿದ ಕಾನೂನುಗಳನ್ನು ದುರ್ಬಲಗೊಳಿಸುವ ತೆರೆಯ ಮರೆಯ ಪ್ರಯತ್ನಗಳೂ ನಡೆದಿವೆ. ಈ ಒಪ್ಪಂದದಡಿಯಲ್ಲಿ ನಡೆಯಲಿರುವ ಕೃಷಿ ಸಂಶೋಧನೆಯ ಆದ್ಯತೆಗಳನ್ನು ನಿರ್ಧರಿಸಲು

ನಮ್ಮ ಜೀನ್ ಬ್ಯಾಂಕುಗಳಲ್ಲಿ ಸಂಗ್ರಹವಾಗಿರುವ ಜೀನೀಯ ವೈವಿಧ್ಯವನ್ನು ಅಮೆರಿಕಾದ ಸಂಶೋಧಕರಿಗೆ ಮುಕ್ತವಾಗಿ ತೆರೆದು ತೋರಿಸಬೇಕಾಗಿದೆ.

ಈ ಎರಡು ಹಸಿರುಕ್ರಾಂತಿಗಳ ನಡುವೆಯಿರುವ ವ್ಯತ್ಯಾಸಗಳನ್ನೂ ನಾವು ಗುರುತಿಸ ಬೇಕು. ಮೊದಲನೆಯ ಹಸಿರುಕ್ರಾಂತಿಗೆ ಕಾರಣವಾದ ತಂತ್ರಜ್ಞಾನ ರೂಪುಗೊಂಡದ್ದು ಮೆಕ್ಸಿಕೋದ ರೈತರ ಹೊಲಗದ್ದೆಗಳಲ್ಲಿ, ಸುಧಾರಿತ ಅಧಿಕ ಇಳುವರಿಯ ತಳಿಗಳು ಬಳಕೆಗೆ ಬಂದದ್ದು ಆಹಾರೋತ್ಪಾದನೆಯನ್ನು ಹೆಚ್ಚಿಸಿ ಹಸಿವಿನ ಸಮಸ್ಯೆಯನ್ನು ನಿವಾರಿಸುವ ಸಮುದಾಯದ ಒಳಿತಿನ ದೃಷ್ಟಿಯಿಂದ. ಸಾರ್ವಜನಿಕವಲಯದಲ್ಲಿ ಸೃಷ್ಟಿಯಾದ ತಂತ್ರಜ್ಞಾನಕ್ಕೆ ಯಾರೂ ಪೇಟೆಂಟ್ ಪಡೆಯಲಿಲ್ಲ. ಬೌದ್ಧಿಕ ಆಸ್ತಿ ಹಕ್ಕಿನ ಪ್ರಶ್ನೆ ಬರಲಿಲ್ಲ. ತಂತ್ರಜ್ಞಾನ ರೈತರ ಆಸ್ತಿಯಾಗಿತ್ತು. ತಾತ್ವಿಕವಾಗಿ ಎಲ್ಲರಿಗೂ ಲಭ್ಯವಿತ್ತು. ಸುಧಾರಿತ ತಳಿಗಳನ್ನು ಎಲ್ಲಿ ಬಳಸಬೇಕೆಂಬ ನಿರ್ಧಾರ ಕೈಗೊಂಡವರೂ ರೈತರೇ! ಹಸಿರುಕ್ರಾಂತಿಯ ತಂತ್ರಜ್ಞಾನದಿಂದ ದೊರೆತ ಪ್ರಯೋಜನಗಳ ಹಂಚಿಕೆಯಲ್ಲಿ ಹಲವಾರು ಕುಂದು ಕೊರತೆ, ಅಸಮಾನತೆಗಳಿದ್ದರೂ ಸಹ ಇಂದಿನ ಪರಿಸ್ಥಿತಿಯಿಂದ ಪರಿಶೀಲಿಸಿದರೆ ಮೊದಲನೆಯ ಹಸಿರುಕ್ರಾಂತಿ ಸಾಕಷ್ಟು ಮುಕ್ತವಾದ, ಎಲ್ಲರಿಗೂ ಲಭ್ಯವಾದ, ಪಾರದರ್ಶಕವಾಗಿದ್ದ, ರೈತ-ವಿಜ್ಞಾನಿಗಳ ಸಹಭಾಗಿತ್ವವಿದ್ದ ಪ್ರಯತ್ನಗಳ ಫಲ.

ಎರಡನೆಯ ಹಸಿರುಕ್ರಾಂತಿಯ ಮೂಲವಿರುವುದು ಖಾಸಗಿ ವಲಯದಲ್ಲಿ ಸೃಷ್ಟಿಯಾಗಿ, ಖಾಸಗಿ ಕಂಪನಿಗಳ ಸ್ವಾಮ್ಯದಲ್ಲಿರುವ ಕುಲಾಂತರಿ ತಳಿಗಳ ತಂತ್ರಜ್ಞಾನದಲ್ಲಿ. ನಮ್ಮ ಪ್ರಪಂಚದಲ್ಲಿ ಈ ಕ್ಷೇತ್ರದಲ್ಲಿ ನಡೆಯುತ್ತಿರುವ ಶೇಕಡಾ ೮೦ರಷ್ಟು ಸಂಶೋಧನೆಗಳನ್ನು 'ಬಿಎಎಸ್‌ಎಫ್' ಪ್ಲಾಂಟ್ ಸೈನ್ಸ್, ಬೇಯರ್ ಕ್ರಾಪ್ ಸೈನ್ಸ್, ಡೌ, ಡ್ಯೂಪಂಟ್, ಮೋನಾಂಟೋ ಮತು ಸೈನಜೆಂಟಾ ಎಂಬ ಆರು ಬಹುರಾಷ್ಟ್ರೀಯ ಕಂಪನಿಗಳು ನಿಯಂತ್ರಿಸುತ್ತವೆ. ಈ ಸಂಸ್ಥೆಗಳು ಅಭಿವೃದ್ಧಿಪಡಿಸುವ ಎಲ್ಲ ತಂತ್ರಜ್ಞಾನ, ಉತ್ಪನ್ನಗಳಿಗೂ ಪೇಟೆಂಟ್ ಪಡೆಯುವುದರಿಂದ ಯಾವ ರೈತನೂ ಅದನ್ನು ಮುಕ್ತವಾಗಿ, ಪುಕ್ಕಟೆಯಾಗಿ ಬಳಸುವಂತಿಲ್ಲ. ಉತ್ಪನ್ನಗಳ ಸ್ವಾಮ್ಯ ಆಯಾ ಕಂಪನಿಗಳದ್ದು. ಎರಡನೆಯ ಹಸಿರು ಕ್ರಾಂತಿಯಲ್ಲಿ ರೈತ ಯಾವ ಹಂತದಲ್ಲೂ ವಿಜ್ಞಾನಿಗಳ ಸಹಭಾಗಿಯಲ್ಲ, ಅಸಹಾಯಕ ಬಳಕೆದಾರ ಮಾತ್ರ. ಇದರೊಂದಿಗೆ ಈ ಎರಡನೆಯ ಕ್ರಾಂತಿಯಲ್ಲಿ ರೈತನ ತುಂಡುನೆಲ ಖಾಸಗಿ ಕಾರ್ಪೊರೇಶನ್‌ಗಳ ನಿರ್ವಹಣೆಗೆ ಒಳಪಟ್ಟು, ಸಂಪೂರ್ಣವಾಗಿ ವ್ಯಾಪಾರಿ ದೃಷ್ಟಿಯಿಂದ ನಡೆಯುವ ಕೃಷಿಯಿಂದ ಕೆಲವೇ ವರ್ಷಗಳಲ್ಲಿ ತನ್ನ ಸತ್ವ, ಸಾರಗಳನ್ನು ಕಳೆದುಕೊಳ್ಳುತ್ತದೆ. ಸಣ್ಣ ರೈತ ಕೃಷಿಯಿಂದ ದೂರವಾಗುತ್ತಾನೆ. ಆಹಾರೋತ್ಪಾದನೆಯ ಕಸುಬು ರೈತ ಕುಟುಂಬದಿಂದ ಲಾಭವೇ ಪರಮಗುರಿಯಾಗಿರುವ ಬಹುರಾಷ್ಟ್ರೀಯ ಕಂಪನಿಗಳಿಗೆ ಹಸ್ತಾಂತರವಾಗುತ್ತದೆ.

ನಮ್ಮ ದೇಶದಲ್ಲಿ ಸಣ್ಣ ಮತ್ತು ಅತಿಸಣ್ಣ ಹಿಡುವಳಿದಾರರೇ ಹೆಚ್ಚು. ನಮ್ಮ ದೇಶದ ಶೇಕಡಾ ೬೦ಕ್ಕೂ ಹೆಚ್ಚು ರೈತ ಕುಟುಂಬಗಳಿಗೆ ಒಂದು ಹೆಕ್ಟೇರಿಗಿಂತ ಹೆಚ್ಚಿನ ಭೂಮಿಯಿಲ್ಲ. ಇಂಥ ರೈತ ಕುಟುಂಬಗಳಿಗೆ ಕೃಷಿಯನ್ನು ಆಕರ್ಷಕವನ್ನಾಗಿ, ಲಾಭದಾಯಕ ವನ್ನಾಗಿ ಮಾಡುವುದೇ ನಮ್ಮ ದೇಶದ ಮುಂದಿರುವ ಅತ್ಯಂತ ದೊಡ್ಡ ಸವಾಲು. ಇಂಥದೇ ಸವಾಲುಗಳನ್ನು ಯಶಸ್ವಿಯಾಗಿ ಎದುರಿಸಿರುವ ದೇಶಗಳಿಂದ ನಾವು ಪಾಠ ಕಲಿಯಬೇಕು. ಕ್ಯೂಬಾ ಇಂಥ ಒಂದು ದೇಶ.

ಭಾರತದಷ್ಟೇ ಆಸಕ್ತಿಯಿಂದ ಮೊದಲ ಹಸಿರುಕ್ರಾಂತಿಯನ್ನು ಅಳವಡಿಸಿಕೊಂಡ ದೇಶಗಳಲ್ಲಿ ಕ್ಯೂಬಾ ಕೂಡ ಒಂದು. ೧೯೮೯ರವರೆಗೂ ಕ್ಯೂಬಾ, ಸುಧಾರಿತ ತಳಿ, ರಸಗೊಬ್ಬರ, ಪಿಡುಗುನಾಶಕ ನೀರನ್ನು ಯಥೇಚ್ಛವಾಗಿ ಬಳಸಿ ಆಹಾರೋತ್ಪಾದನೆಯನ್ನು ಗಮನಾರ್ಹವಾಗಿ ಹೆಚ್ಚಿಸಿಕೊಂಡು ಬಂದಿತ್ತು. ಆದರೆ ಸಮಾಜವಾದಿ ದೇಶಗಳ ಒಕ್ಕೂಟದ ಪತನ ಮತ್ತು ಅಮೆರಿಕಾ ತಂದ ಕಟ್ಟುನಿಟ್ಟಾದ ವ್ಯಾಪಾರ, ವಾಣಿಜ್ಯ ನಿರ್ಬಂಧಗಳ ನಂತರ ಕ್ಯೂಬಾದಲ್ಲಿ ಆಹಾರದ ಲಭ್ಯತೆ ಶೇಕಡಾ ೩೦ರಷ್ಟು ಕುಸಿದು ಸಮಸ್ಯೆ ಗಂಭೀರವಾಯಿತು. ಆಹಾರ ಪದಾರ್ಥಗಳನ್ನಾಗಲೀ, ರಸಗೊಬ್ಬರವನ್ನಾಗಲೀ, ಆಮದು ಮಾಡಿಕೊಳ್ಳುವುದು ಅಸಾಧ್ಯವಾದ ಪರಿಸ್ಥಿತಿ ಎದುರಾದಾಗ ಕ್ಯೂಬಾ ತನ್ನ ಕೃಷಿ ನೀತಿಯಲ್ಲಿ ಅನೇಕ ಬದಲಾವಣೆ ಗಳನ್ನು ತಂದಿತು. ವಿಸ್ತಾರವಾದ ಕೃಷಿಭೂಮಿಗಳ ಬದಲಿಗೆ ಸಣ್ಣ ಘಟಕಗಳಲ್ಲಿ ಆಹಾರೋತ್ಪಾದನೆಗೆ ಹೆಚ್ಚಿನ ಗಮನ ನೀಡಿತು. ಕೃಷಿ ಉತ್ಪನ್ನಗಳಿಗೆ ಹೆಚ್ಚಿನ ಬೆಲೆ ನೀಡಿ, ಪರಿಸರ ಸ್ನೇಹಿ ತಂತ್ರಜ್ಞಾನಗಳಿಗೆ ಆದ್ಯತೆ ನೀಡಿತು. ಕೃಷಿಗೆ ಸಂಬಂಧಪಟ್ಟ ಶಿಕ್ಷಣ, ಸಂಶೋಧನೆಗಳಿಗೆ ಹೊಸ ಮಹತ್ವ ಬಂದಿತು. ಮರೆತುಹೋಗಿದ್ದ ಅನೇಕ ಸಾಂಪ್ರದಾಯಿಕ ತಂತ್ರಜ್ಞಾನಗಳು, ತಳಿಗಳು ಪುನಶ್ಚೇತನಗೊಂಡು ಬಳಕೆಗೆ ಬಂದವು. ತಮ್ಮ ಉತ್ಪನ್ನಗಳಿಗೆ ಹೆಚ್ಚಿನ ಬೆಲೆ ದೊರೆಯುವುದು ಖಚಿತವಾದಾಗ ಹಸಿರುಕ್ರಾಂತಿಯ ತಂತ್ರಜ್ಞಾನದ ನೆರವಿಲ್ಲದೆಯೂ ರೈತರು ಉತ್ತಮ ಬೆಳೆ ತೆಗೆದರು. ಸಣ್ಣ ರೈತರು ಮತ್ತು ಸಹಕಾರಿ ವ್ಯವಸ್ಥೆಗಳು ಸರ್ಕಾರದ ಬದಲಾದ ಕೃಷಿನೀತಿಗೆ ಉತ್ತಮ ಪ್ರತಿಕ್ರಿಯೆ ತೋರಿ ಉತ್ಪಾದನೆಯನ್ನು ಹೆಚ್ಚಿಸಿದ್ದರಿಂದ, ಸರ್ಕಾರ ತನ್ನ ಒಡೆತನದಲ್ಲಿದ್ದ ವಿಸ್ತಾರವಾದ ಕೃಷಿ ಭೂಮಿಯನ್ನು ಸಣ್ಣ ಉತ್ಪಾದನಾ ಘಟಕಗಳನ್ನಾಗಿ ಮಾಡಿ, ಹೊಸದಾದ ಭೂಸುಧಾರಣಾ ಕ್ರಮಗಳ ಮೂಲಕ ರೈತರ ನಿರ್ವಹಣೆಗೆ ನೀಡಿತು. ಮಣ್ಣಿನ ಸಾರ ಸಂರಕ್ಷಣೆ, ಕೀಟ ನಿಯಂತ್ರಣ, ಸಸ್ಯ ಸಂರಕ್ಷಣೆ, ಬೆಳೆಯುವ ಸಸ್ಯಗಳಿಗೆ ಪೋಷಕಾಂಶಗಳು ಈ ಮುಂತಾದ ಕೆಲಸಗಳಲ್ಲಿ 'ಕೆಮಿಸ್ಟ್ರಿ ಔಟ್-ಬಯಾಲಜಿ ಇನ್' ಎಂಬ ಜನಪ್ರಿಯ ಘೋಷಣೆಯನ್ನು ಬಳಕೆಗೆ ತಂದ ಕ್ಯೂಬಾದ ರೈತರು ರಾಸಾಯನಿಕ ವಸ್ತುಗಳ ಮೇಲಿನ ಅವಲಂಬನೆಯನ್ನು ಅತ್ಯಂತ ಕನಿಷ್ಠಮಟ್ಟಕ್ಕೆ ತಂದರು. ಕಾರ್ನೆಲ್ ವಿಶ್ವವಿದ್ಯಾಲಯದ ವಿಜ್ಞಾನಿ ಡಾ|| ನಾರ್ಮನ್ ಉಫ್‌ಹಾಫ್ ರೂಪಿಸಿದ 'ಸಿಸ್ಟಮ್ ಆಫ್ ರೈಸ್ ಇಂಟೆನ್ಸಿಫಿಕೇಶನ್' ಎಂಬ ಹೊಸ ಪದ್ಧತಿಯನ್ನು ಬಳಕೆಗೆ ತಂದ ಕ್ಯೂಬಾದ ರೈತರು ಆ ದೇಶದ ಬತ್ತದ ಉತ್ಪಾದನೆಯನ್ನು ಮೂರು ಪಟ್ಟು ಹೆಚ್ಚಿಸಿ ಇಂದು ಬತ್ತವನ್ನು ರಫ್ತುಮಾಡುವ ಹಂತದಲ್ಲಿದ್ದಾರೆ. ಬದಲಾದ ಕೃಷಿ ನೀತಿಯ ಅಂಗವಾಗಿ ನಗರ ಪ್ರದೇಶಗಳ ಎಲ್ಲ ಖಾಲಿ ಜಾಗಗಳಲ್ಲಿ ಸಾವಯವ ಕೃಷಿಯಿಂದ ಹಣ್ಣು, ತರಕಾರಿಗಳನ್ನು ಬೆಳೆಯುವ ಹೊಸ ಆಂದೋಳನವೇ ಪ್ರಾರಂಭವಾಯಿತು. ಈ ಎಲ್ಲ ಕ್ರಮಗಳ ಫಲವಾಗಿ, ಕೇವಲ ಎಂಟು ವರ್ಷಗಳಲ್ಲಿ ಆಹಾರೋತ್ಪಾದನೆಯಲ್ಲಿ ಚಿಂತೆಯಿಲ್ಲದ ಮಟ್ಟ ಮುಟ್ಟಿದ ಕ್ಯೂಬಾ, ಇಂದು ತನ್ನ ಪ್ರಜೆಗಳಿಗೆ ವಿಶ್ವಕೃಷಿ ಮತ್ತು ಆಹಾರ ಸಂಸ್ಥೆ ನಿಗದಿಪಡಿಸಿರುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಆಹಾರವನ್ನು ಒದಗಿಸುತ್ತಿದೆ.

ಪರಿಸರಸ್ನೇಹಿ ಕೃಷಿ ತಂತ್ರಜ್ಞಾನದ ಮೇಲೆ ಆಧರಿತವಾದ ಸಣ್ಣ ಭೂಮಿಯ ಯಶಸ್ವಿ ಕೃಷಿ ನಿದರ್ಶನಗಳನ್ನು ನೋಡಲು ನಾವು ಕ್ಯೂಬಾ, ಚೀನಾ, ವಿಯೆಟ್‌ನಾಮ್‌ಗಳಿಗೆ ಹೋಗಬೇಕಾದುದಿಲ್ಲ. ಕರ್ನಾಟಕ, ಕೇರಳ, ತಮಿಳುನಾಡು, ಮಹಾರಾಷ್ಟ್ರಗಳ ಅಸಂಖ್ಯ ಹಳ್ಳಿಗಳಲ್ಲಿ ಇಂಥ ಉದಾಹರಣೆಗಳಿವೆ. ಬೀಜ, ನೀರು, ಮಣ್ಣು, ಸಾವಯವ ಕೃಷಿ, ಸ್ಥಳೀಯ ತಂತ್ರಜ್ಞಾನ, ಪರಿಸರ ಸಂರಕ್ಷಣೆಯ ಅತ್ಯುತ್ತಮ ನಿದರ್ಶನಗಳು ನಮಗೆ ದೊರೆಯುತ್ತವೆ. ಆದರೆ ಇಂಥ ಕೆಲಸಗಳನ್ನು ಗಮನಿಸಿ, ಪ್ರೋತ್ಸಾಹಿಸಿ ಬೆಂಬಲ ನೀಡುವ ಕೆಲಸ ಮಾತ್ರ ಸರ್ಕಾರದ ಕಡೆಯಿಂದ ನಡೆಯುವುದು ಅತ್ಯಂತ ವಿರಳ.

ಈಗ ಕಡೆಯದಾಗಿ ಭಾರತ-ಅಮೆರಿಕಾ ಒಪ್ಪಂದಕ್ಕೆ ಹಿಂದಿರುಗೋಣ. ಒಪ್ಪಂದಕ್ಕೆ ಸಹಿಹಾಕಿದ ನಂತರ ಇದುವರೆವಿಗೂ ಜಂಟೀ ಕಾರ್ಯಾಚರಣೆ ಮಂಡಳಿಯ ಐದು ಸಭೆಗಳು ನಡೆದಿವೆ. ವಿಜ್ಞಾನಿಗಳು, ಸರ್ಕಾರಿ ಅಧಿಕಾರಿಗಳು, ಕೃಷಿ ಸಂಶೋಧಕರು, ಶಿಕ್ಷಕರು, ವಿದ್ಯಾರ್ಥಿಗಳು, ತರಬೇತುದಾರರು, ರೈತರು ಮುಂತಾದವರು ವಿವಿಧ ಅವಧಿ ಗಳ ತರಬೇತಿ, ಭೇಟಿ, ಕಾರ್ಯಾಗಾರ, ಸಮಾವೇಶಗಳಿಗೆ ಅಮೆರಿಕಾಕ್ಕೆ ಹೋಗಿಬರುತ್ತಿದ್ದಾರೆ. ಅಲ್ಲಿನವರು ಇಲ್ಲಿಗೆ ಬಂದಿದ್ದಾರೆ. ಅಮೆರಿಕಾದ ರಾಷ್ಟ್ರೀಯ ಕೃಷಿ ಸಂಗ್ರಹಾಲಯ ಮತ್ತು ಭಾರತೀಯ ಕೃಷಿ ಸಂಶೋಧನಾ ಸಂಸ್ಥೆಗಳ ನಡುವೆ 'ನಾಲೆಡ್ಜ್ ಅಂಡ್ ಆಪರೇಷನ್ಸ್'ಗೆ ಸಂಬಂಧಿಸಿದಂತೆ ವಿಶೇಷ ಸಂಪರ್ಕ ವ್ಯವಸ್ಥೆ ಏರ್ಪಟ್ಟಿದೆ. ಅಮೆರಿಕಾದ ಪರಿಣತರು ನಮ್ಮ ದೇಶದ ಅಧಿಕಾರಿಗಳಿಗೆ, ಆಯ್ದ ಕೃಷಿ ವಿಶ್ವವಿದ್ಯಾಲಯಗಳ ತರಬೇತುದಾರರಿಗೆ ಬೌದ್ಧಿಕ ಆಸ್ತಿ ಹಾಗೂ ತಂತ್ರಜ್ಞಾನ ವರ್ಗಾವಣೆಯ ಬಗ್ಗೆ ತರಬೇತಿ ನೀಡುತ್ತಿದ್ದಾರೆ. ಜೈವಿಕ ತಂತ್ರಜ್ಞಾನ ಸಂಶೋಧನೆಗೆ ಸ್ಥೂಲವಾದ ಕ್ಷೇತ್ರಗಳನ್ನು ಗೊತ್ತುಪಡಿಸಲಾಗಿದೆ. ಭಾರತದ ಕೃಷಿ ನೀತಿಯ ವಿಶ್ಲೇಷಣೆಯ ಬಗ್ಗೆ ಕಾರ್ಯಾಗಾರಗಳು ನಡೆಯುತ್ತಿವೆ. ಕೃಷಿ ವಿಮೆಯ ಕ್ಷೇತ್ರದಲ್ಲಿ ಅಗತ್ಯ ಬದಲಾವಣೆಗಳನ್ನು ತರಲು ಆಲೋಚನೆಗಳು ನಡೆದಿವೆ. ಅಮೆರಿಕಾ ಮತ್ತು ಭಾರತದ ಪರಿಣತರು ಜೊತೆಗೆ ಸೇರಿ ಕುಲಾಂತರಿ ಉತ್ಪನ್ನಗಳ ಸುರಕ್ಷತೆಯ ಬಗ್ಗೆ ಮಾರ್ಗಸೂಚಿ ನಿರ್ದೇಶನಗಳನ್ನು ರೂಪಿಸುತ್ತಿದ್ದಾರೆ.

ಆಹಾರೋತ್ಪಾದನೆಯನ್ನು ಹೆಚ್ಚಿಸಲು ತಂತ್ರಜ್ಞಾನ ಅಗತ್ಯವೆಂಬುದರಲ್ಲಿ ಎರಡನೆಯ ಮಾತಿಲ್ಲ. ಆದರೆ ಈ ತಂತ್ರಜ್ಞಾನವನ್ನು ಹೊಲಗದ್ದೆಗಳಲ್ಲಿ ಬಳಸುವವರು ನಮ್ಮ ರೈತರು. ಈ ರೈತ ಸಮುದಾಯದ ಸ್ವಾಭಿಮಾನ, ಸ್ಥೈರ್ಯಗಳನ್ನು ನಾಶಮಾಡಿ, ಅವರ ಹಕ್ಕುಗಳನ್ನು ಮೊಟಕುಗೊಳಿಸಿ, ಪೇಟೆಂಟುಗಳ ಜಾಲದಲ್ಲಿ ಅವರನ್ನು ಬಂಧಿಸಿ, ನಿಸ್ಸಹಾಯಕರನ್ನಾಗಿ ಮಾಡಿ ಅವರಿಂದ ಎರಡನೆಯ ಹಸಿರುಕ್ರಾಂತಿಯನ್ನು ನಿರೀಕ್ಷಿಸುವುದು ಮೂರ್ಖತನ ವಾಗುವುದರಲ್ಲಿ ಸಂಶಯವಿಲ್ಲ.

**ಡಾ|| ಎಚ್. ಆರ್. ಕೃಷ್ಣಮೂರ್ತಿ**
ಸಂಖ್ಯೆ [illegible], ೪ನೇ ಮುಖ್ಯರಸ್ತೆ,
ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

# ಮಕ್ಕಳ ದುಡಿಮೆ

**ದು**ಡಿಮೆಯಲ್ಲಿ ನಿರತರಾದ ಮಕ್ಕಳ ಸಂಖ್ಯೆ ಕ್ರಮೇಣ ಕಡಿಮೆಯಾಗುತ್ತಿದೆಯೆಂದು ಕೆಲವು ವರದಿಗಳು ತಿಳಿಸಿವೆ. ಭಾರತದಲ್ಲಿ ಈ ಬಗ್ಗೆ ಮಾಹಿತಿಯು ಜನಗಣತಿ ಹಾಗೂ ರಾಷ್ಟ್ರೀಯ ಸರ್ವೇಕ್ಷಣಾ ಸಂಸ್ಥೆಗಳಿಂದ ಲಭ್ಯವಾಗುತ್ತದೆ. ವಿಶೇಷವಾಗಿ ಸರ್ವೇಕ್ಷಣಾ ಸಂಸ್ಥೆಯ ಅಂಕಿ-ಅಂಶಗಳು ಹೆಚ್ಚು ನಿಖರವಾದ ಮಾಹಿತಿಯನ್ನೊದಗಿಸುತ್ತವೆ. ಜನಗಣತಿಯ ದಾಖಲೆಗಳು ತಿಳಿಸುವಂತೆ ೧೯೯೧ರಲ್ಲಿ ಒಂದು ಕೋಟಿ ಹತ್ತು ಲಕ್ಷ ಮಕ್ಕಳು ದುಡಿಮೆಯಲ್ಲಿದ್ದದ್ದು ೨೦೦೧ರಲ್ಲಿ ಅದು ೩೬ ಲಕ್ಷಕ್ಕೆ ಇಳಿದಿದೆ. ೨೦೦೪-೦೫ರ ವೇಳೆಗೆ ಅದು ಮತ್ತೆ ಇನ್ನೂ ೮೬ ಲಕ್ಷದಷ್ಟೇ ಇದ್ದಿತೆಂದು ರಾಷ್ಟ್ರೀಯ ಸರ್ವೇಕ್ಷಣಾ ಸಂಸ್ಥೆಯು ಅಂದಾಜು ಮಾಡಿದೆ. ಅಂದರೆ, ೫ರಿಂದ ೧೪ವರ್ಷ ವಯಸ್ಸಿನವರ ಪೈಕಿ ಶೇ. ೩.೪ರಷ್ಟು ಮಕ್ಕಳು ದುಡಿಮೆಯಲ್ಲಿ ತೊಡಗಿದ್ದರು. ಅದರಲ್ಲಿ ಗಂಡುಮಕ್ಕಳು ಹೆಣ್ಣುಮಕ್ಕಳಿಗಿಂತಲೂ ಹೆಚ್ಚಾಗಿದ್ದರು. ಕೆಳಗಿನ ಕೋಷ್ಟಕವನ್ನು ಗಮನಿಸಿದರೆ ಅದು ಹೆಚ್ಚು ಸ್ಪಷ್ಟವಾಗುತ್ತದೆ.

೨೦೦೪-೦೫

| | ಗಂಡುಮಕ್ಕಳು | ಹೆಣ್ಣುಮಕ್ಕಳು | ಶೇಕಡಾವಾರು | |
|---|---|---|---|---|
| | | | ಗಂ. | ಹೆ. |
| ದುಡಿಯುತ್ತಿದ್ದವರು | ೪೨ ಲಕ್ಷ | ೩೯ ಲಕ್ಷ | ೩.೫ | ೩.೩ |
| ಕೆಲಸದಲ್ಲಿಲ್ಲದಿದ್ದವರು | ೧೬೧ ಲಕ್ಷ | ೨೦೫ ಲಕ್ಷ | ೧೨ | ೧೭.೪ |
| ಶಾಲೆಯ ಹೊರಗುಳಿದಿದ್ದವರು | ೨೦೮ ಲಕ್ಷ | ೨೪೪ ಲಕ್ಷ | ೧೫.೪ | ೨೦.೮ |
| ವಿದ್ಯಾರ್ಥಿಗಳು | ೧೧೩೯ ಲಕ್ಷ | ೯೩೨ ಲಕ್ಷ | ೮೪.೬ | ೭೯.೨ |
| ಒಟ್ಟು(೫-೧೪ ವಯಸ್ಸಿನವರು) | ೧೩೪೭ ಲಕ್ಷ | ೧೧೭೬ ಲಕ್ಷ | ೧೦೦ | ೧೦೦ |

(ಸೂಚನೆ: ಕೆಲಸದಲ್ಲಿಲ್ಲದಿದ್ದವರೆಂದರೆ ದುಡಿಮೆಯಲ್ಲೂ ಇಲ್ಲದೆ, ಶಾಲೆಯಲ್ಲೂ ಪ್ರವೇಶ ಪಡೆಯದಿದ್ದವರು ಎಂದರ್ಥ. ಶಾಲೆಯ ಹೊರಗುಳಿದವರಲ್ಲಿ ದುಡಿಮೆಯಲ್ಲಿದ್ದವರು, ಇಲ್ಲದಿದ್ದವರು, ಇಬ್ಬರೂ ಸೇರಿದ್ದಾರೆ. ಮಕ್ಕಳಲ್ಲಿ ಎಷ್ಟೊಂದು ಮಂದಿ ಅವಕಾಶ ವಂಚಿತರಾಗಿದ್ದಾರೆಂಬುದು ಇದರಿಂದ ತಿಳಿಯುತ್ತದೆ. ಅವರೆಲ್ಲಾ ದುಡಿಮೆಯಲ್ಲಿ ತೊಡಗಬೇಕಾಗಿಬರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.)

ದುಡಿಮೆಗೆ ದೂಡಲ್ಪಟ್ಟ ಮಕ್ಕಳ ಸಂಖ್ಯೆ ಸ್ವಲ್ಪಮಟ್ಟಿಗಾದರೂ ಕಡಿಮೆಯಾಗಿರುವುದಕ್ಕೆ ಕೆಲವು ಕಾರಣಗಳಿವೆ. ಹೆಚ್ಚಿದ ತಿಳುವಳಿಕೆ, ಬಡಕುಟುಂಬಗಳ ಮಕ್ಕಳು ಶಾಲೆಗೆ ದಾಖಲಾಗುವುದರಲ್ಲಿ ಹೆಚ್ಚಳ, ಸರ್ಕಾರದ ಯತ್ನಗಳು, ಮಕ್ಕಳ ದುಡಿಮೆಯನ್ನು ಕೊನೆಗಾಣಿಸಲು ಬದ್ಧವಾಗಿರುವ ಅಂತರರಾಷ್ಟ್ರೀಯ ಸಂಸ್ಥೆಗಳು (ವಿಶ್ವಸಂಸ್ಥೆಯ ಹಾಗೂ ಇತರೆ ಅಂಗಸಂಸ್ಥೆಗಳು), ಮತ್ತು ಕಾನೂನು ಕಟ್ಟಳೆಗಳು. ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳು ಪೂರ್ಣ ಪ್ರಮಾಣದಲ್ಲಿ ದಾಖಲಾಗುವುದಕ್ಕೂ ಮಕ್ಕಳ ದುಡಿಮೆಯ ನಿವಾರಣೆಗೂ ನೇರ ಸಂಬಂಧವಿದೆಯೆಂದು ಎಲ್ಲರೂ ಒಪ್ಪುತ್ತಾರೆಂಬುದು ಸ್ಪಷ್ಟವಾಗಿದೆ.

---

"ಅಸಂಘಟಿತ ವಲಯದಲ್ಲಿ ದುಡಿಮೆ ಮತ್ತು ಜೀವನಸಾಧನದ ಸನ್ನಿವೇಶ" ಕುರಿತಂತೆ ಡಾ|| ಅರ್ಜುನ್ ಸೇನ್‌ಗುಪ್ತ ಸಮಿತಿಯು ನೀಡಿರುವ ವರದಿಯಲ್ಲಿ "ದುಡಿಮೆಗಾರರ ಕೂಲಿ ಮತ್ತು ಆದಾಯ"ಕ್ಕೆ ಸಂಬಂಧಿಸಿದ ಕೆಲವು ಅಂಶಗಳನ್ನು ಏಪ್ರಿಲ್ ಸಂಚಿಕೆಯಲ್ಲಿ ಪ್ರಸ್ತುತಪಡಿಸಲಾಗಿತ್ತು. ಅದೇ ವರದಿಯು "ಮಕ್ಕಳ ದುಡಿಮೆ" ಬಗ್ಗೆ ನೀಡಿರುವ ಕೆಲವು ಅಂಶಗಳನ್ನು ಈ ಸಂಚಿಕೆಯಲ್ಲಿ ಸಂಗ್ರಹಿಸಲಾಗಿದೆ. ಮೇ ದಿನಾಚರಣೆಯ ಸಂದರ್ಭದಲ್ಲಿ ಇದನ್ನು ಮನನ ಮಾಡಿಕೊಳ್ಳುವುದು ಅಗತ್ಯ. ವಿಶೇಷವಾಗಿ, ದುಡಿಯುವ ಜನ ಇದರತ್ತ ಗಮನ ನೀಡಬೇಕಾಗಿದೆ.

– ಸಂಪಾದಕ

ಪ್ರಸ್ತುತ ಆಯೋಗವು (ಅಂದರೆ, ಸೇನ್‌ಗುಪ್ತ ಆಯೋಗ) ಮಕ್ಕಳ ದುಡಿಮೆಯ ಬಗ್ಗೆ ಚಿಂತನೆ ನಡೆಸುವಾಗ ಕೂದಲು ಸೀಳುವಂತಹ ಕ್ರಮವನ್ನು ಅನುಸರಿಸುವುದಿಲ್ಲ. ಯಾರು ದುಡಿಮೆಗಾರ ಮತ್ತು ಯಾರು ಅಲ್ಲ ಎಂಬುದನ್ನು ದೀರ್ಘವಾಗಿ ಜಿಜ್ಞಾಸೆ ಮಾಡುವ ಅಗತ್ಯವಿಲ್ಲ. ಎಷ್ಟೋ ಮಕ್ಕಳು ದುಡಿಮೆಗಾರರಾಗಿ ಲೆಕ್ಕಕ್ಕೆ ಬಂದಿಲ್ಲ; ಆದರೆ ಅವರು ಶಾಲೆಗಳಲ್ಲೂ ದಾಖಲಾಗಿಲ್ಲ. ಇದು ೨೦೦೪-೦೫ರಲ್ಲಿ ಶೇ. ೧೪ರಷ್ಟಿತ್ತು. ಬಡ ಕುಟುಂಬಗಳ ಪರಿಸ್ಥಿತಿಯನ್ನು ಗಮನಿಸಿದರೆ ಈ ಮಕ್ಕಳು ಯಾವ ರೀತಿಯಲ್ಲಾದರೂ ತಮ್ಮ ತಂದೆ-ತಾಯಿಯರ ಕೆಲಸಗಳಲ್ಲಿ ಸಹಾಯ ನೀಡುತ್ತಿರಬೇಕೆಂದು ಗೊತ್ತಾಗುತ್ತದೆ. ಅದು ವಿವಿಧ ಸ್ವರೂಪಗಳಲ್ಲಿರುತ್ತದೆ. ತಮಗಿಂತಲೂ ಚಿಕ್ಕ ಮಕ್ಕಳನ್ನು ನೋಡಿಕೊಳ್ಳುವುದು, ಅಜ್ಜ-ತಾತರ ಶುಶ್ರೂಷೆ ಮಾಡುವುದು, ಅಥವಾ ಬೇರೇನೋ ಆಗಿರಬಹುದು. ಒಟ್ಟಿನಲ್ಲಿ ಇದಾವುದನ್ನೂ ಆದಾಯ ತರುವ ಕೆಲಸವೆಂದು ಕುಟುಂಬಗಳು ಪರಿಗಣಿಸುವುದಿಲ್ಲ. ಈ ದೃಷ್ಟಿಯಿಂದ ನೋಡಿದರೆ ಶಾಲೆಗಳಲ್ಲಿಲ್ಲದ ಮಕ್ಕಳು ದುಡಿಮೆಯಲ್ಲಿರಬಹುದು, ಇಲ್ಲದೆಯೂ ಇರಬಹುದು. ಏನೇ ಇರಲಿ, ಇಂತಹ ಮಕ್ಕಳು ಅವಕಾಶವಂಚಿತರೆಂಬುದಂತೂ ನಿಜ; ಯಾವುದೇ ಕ್ಷಣದಲ್ಲೂ ಅವರು ಆದಾಯ ಗಳಿಸುವ ದುಡಿಮೆಗೆ ತಳ್ಳಲ್ಪಡುವ ಸಾಧ್ಯತೆ ಇದ್ದೇ ಇರುತ್ತದೆ. ಇಂತಹ ಮಕ್ಕಳ ಪ್ರಮಾಣ ಶೇ. ೧೮; ಶೇ. ೧೫ ಗಂಡುಮಕ್ಕಳು, ಶೇ. ೨೧ ಹೆಣ್ಣುಮಕ್ಕಳು. ೧೯೯೩-೪ರಿಂದೀಚೆಗೆ ಶಾಲೆಗೆ ದಾಖಲಾಗುವ ಮಕ್ಕಳ ಪ್ರಮಾಣವು ಹೆಚ್ಚಾಗಿದ್ದಾಗ್ಯೂ, ಈಗಲೂ ದುಡಿಮೆಗೆ ದೂಡಲ್ಪಡಬಹುದಾದ ಮಕ್ಕಳ ಸಂಖ್ಯೆ ೪ ಕೋಟಿ ೫೨ ಲಕ್ಷಗಳಷ್ಟಿದೆ.

ಇನ್ನೊಂದು ಅಂಶವಿದೆ: ಯಾವ ರಾಜ್ಯಗಳಲ್ಲಿ ದುಡಿಯುವ ಮಕ್ಕಳ ಸಂಖ್ಯೆ ಹೆಚ್ಚಾಗಿದೆಯೋ ಅವೆಲ್ಲಾ ಶಾಲೆಯಲ್ಲಿ ಮಕ್ಕಳ ದಾಖಲಾತಿಯು ಕಡಿಮೆ ಇರುವಂತಹ ರಾಜ್ಯಗಳೇ ಆಗಿರುತ್ತವೆಂಬುದೇನೂ ಇಲ್ಲ. ಕೆಲವು ರಾಜ್ಯಗಳಲ್ಲಿ ಈ ಎರಡೂ ವಿಧದ ಮಕ್ಕಳ ಪ್ರಮಾಣ ಹೆಚ್ಚಾಗಿರುವುದೂ ಉಂಟು. ಭಾರತದಲ್ಲಿ ಸರಾಸರಿ ದುಡಿಯುವ ಮಕ್ಕಳ ಪ್ರಮಾಣಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಮಕ್ಕಳು ದುಡಿಮೆಗೆ ಹಚ್ಚಲ್ಪಟ್ಟಿರುವ ರಾಜ್ಯಗಳೆಂದರೆ ಕರ್ನಾಟಕ, ಆಂಧ್ರಪ್ರದೇಶ, ಒರಿಸ್ಸಾ, ರಾಜಸ್ತಾನ, ಮೇಘಾಲಯ, ಛತ್ತೀಸಘಡ, ಉತ್ತರಪ್ರದೇಶ, ಪಶ್ಚಿಮ ಬಂಗಾಳ ಮತ್ತು ಮಹಾರಾಷ್ಟ್ರ. ಸಾಮಾನ್ಯವಾಗಿ ಕಡಿಮೆ ಮಟ್ಟದ ಮಾನವಿಕ ಅಭಿವೃದ್ಧಿ ಸಾಧಿಸಿರುವ ರಾಜ್ಯಗಳೆಂದು ಹೆಸರಾಗಿರುವ ರಾಜ್ಯಗಳಲ್ಲಿ (ಬಿಹಾರ, ಝಾರ್ಖಂಡ್, ರಾಜಸ್ತಾನ, ಅರುಣಾಚಲ ಪ್ರದೇಶ, ಉತ್ತರ ಪ್ರದೇಶ, ಒರಿಸ್ಸಾ, ಛತ್ತೀಸಘಡ) ಶಾಲೆಗೆ ದಾಖಲಾಗಿಲ್ಲದ ಮಕ್ಕಳ ಪ್ರಮಾಣವು ಅಖಿಲ ಭಾರತ ಮಟ್ಟಕ್ಕಿಂತಲೂ ಹೆಚ್ಚಿನದಾಗಿದೆ.

**ಅವಕಾಶ ವಂಚಿತರು**

ದುಡಿಮೆಯಲ್ಲಿರುವ ಮಕ್ಕಳು ಮತ್ತು ದುಡಿಮೆಯಲ್ಲಿ ಲೆಕ್ಕಕ್ಕೆ ಬಾರದೆ ಶಾಲೆಯಿಂದ ಹೊರಗುಳಿದಿರುವವರು ಒಟ್ಟಾಗಿ ಶೇ. ೨೧ರಷ್ಟಿದ್ದಾರೆ. ಅವರೆಲ್ಲಾ ಅವಕಾಶ ವಂಚಿತರೇ ಎಂಬುದರಲ್ಲಿ ಸಂಶಯವಿಲ್ಲ. ಇದೊಂದು ಪ್ರಮುಖ ಸಾಮಾಜಿಕ-ಆರ್ಥಿಕ ಸಮಸ್ಯೆ. ಅದನ್ನು ಹಾಗೆಂದೇ ಗುರುತಿಸಬೇಕು. 'ದುಡಿಯುವ ಮಕ್ಕಳು' ಎಂದು ಸಂಕುಚಿತಾರ್ಥದಲ್ಲಿ ಗ್ರಹಿಸಲಾಗಿರುವುದಕ್ಕಿಂತ ಹೆಚ್ಚು ಗಂಭೀರವಾದ ಸಮಸ್ಯೆ ಇದು. ಮಕ್ಕಳ ದುಡಿಮೆಯು ಪ್ರಮುಖ ಸಮಸ್ಯೆಯಾಗಿರುವುದು ೯ ರಾಜ್ಯಗಳಲ್ಲಿ; ಆದರೆ ವಂಚಿತ ಮಕ್ಕಳು ದೇಶದ ಹಲವು ರಾಜ್ಯಗಳಲ್ಲಿದ್ದಾರೆ. ಅವರು ಕಡಿಮೆ ಪ್ರಮಾಣದಲ್ಲಿರುವುದು ಕೆಲವು ರಾಜ್ಯಗಳಲ್ಲಿ ಮಾತ್ರ. ಕೇರಳ : ಶೇ. ೩, ತಮಿಳುನಾಡು : ಶೇ. ೫, ಹಿಮಾಚಲಪ್ರದೇಶ : ಶೇ. ೯.

ಕರ್ನಾಟಕದಲ್ಲಿ ಶಾಲೆಯ ಹೊರಗಿರುವ ಗಂಡುಮಕ್ಕಳು : ಶೇ. ೧೦.೪; ದುಡಿಮೆಯಲ್ಲಿರುವ ಗಂಡುಮಕ್ಕಳು : ಶೇ. ೪.೩. ಅದೇ ಹೆಣ್ಣುಮಕ್ಕಳು ಶೇ. ೧೩.೭ ಮತ್ತು ಶೇ. ೪.೮. ಒಟ್ಟು ಪ್ರಮಾಣ ಶೇ. ೧೨ ಮತ್ತು ೪.೬.

ಬೇರೆ ದೇಶಗಳಲ್ಲಿರುವಂತೆಯೇ ಭಾರತದಲ್ಲೂ ಆರ್ಥಿಕ-ಸಾಮಾಜಿಕವಾಗಿ ವಂಚಿತರಾಗಿರುವುದಕ್ಕೂ ಮಕ್ಕಳು ದುಡಿಮೆಗೆ ಹಚ್ಚಲ್ಪಡುವುದಕ್ಕೂ ನೇರ ಸಂಬಂಧವಿದೆ. ಕುಟುಂಬಗಳಲ್ಲಿ ತಲಾ ಆದಾಯವು ಗಮನಾರ್ಹವಾಗಿ ಹೆಚ್ಚಾಗಿರುವಾಗ ಮಕ್ಕಳ ದುಡಿಮೆ ಮತ್ತು ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ ಕಡಿಮೆ ಪ್ರಮಾಣದಲ್ಲಿರುವುದು ಅಂಕಿ-ಸಂಖ್ಯೆಗಳಿಂದ ಸಾಬೀತಾಗಿದೆ. ಕುಟುಂಬಗಳ ಸಾಮಾಜಿಕ-ಮತಧಾರ್ಮಿಕ ಸನ್ನಿವೇಶ ಸಹ ಮಕ್ಕಳ ದುಡಿಮೆ ಮತ್ತು ಶಾಲೆಗಳಲ್ಲಿ ದಾಖಲಾಗದಿರುವುದಕ್ಕೆ ಪೂರಕಾಂಶವಾಗಿರುವುದು ಕಂಡುಬಂದಿದೆ. ಪರಿಶಿಷ್ಟ ಬುಡಕಟ್ಟು ಮತ್ತು ಮುಸಲ್ಮಾನ ಕುಟುಂಬಗಳಲ್ಲಿ ಇದು ಅತಿ ಹೆಚ್ಚಿನ ಪ್ರಮಾಣದಲ್ಲಿದೆ. ಪರಿಶಿಷ್ಟ ಜಾತಿ ಮತ್ತು ಇತರ ಹಿಂದುಳಿದ ಜಾತಿಗಳ ಕುಟುಂಬಗಳು ಅದರ ನಂತರದ ಸ್ಥಾನದಲ್ಲಿವೆ. ಪರಿಶಿಷ್ಟ ಜಾತಿಯ ಕುಟುಂಬಗಳಲ್ಲಿರುವುದಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಮಕ್ಕಳ ದುಡಿಮೆಯು ಮುಸಲ್ಮಾನ ಕುಟುಂಬಗಳಲ್ಲಿದೆ. ಕೆಲವು ವರ್ಷಗಳ ಹಿಂದಿನ ಪರಿಸ್ಥಿತಿ ಇದಕ್ಕಿಂತಲೂ ಭಿನ್ನವಾಗಿತ್ತು; ಏಕೆಂದರೆ ಆಗ ಮುಸಲ್ಮಾನ ಕುಟುಂಬಗಳ ಮಕ್ಕಳು ಪರಿಶಿಷ್ಟ ಜಾತಿಯ ಕುಟುಂಬಗಳ ಮಕ್ಕಳಿಗಿಂತಲೂ ಸ್ವಲ್ಪ ಉತ್ತಮ ಸ್ಥಿತಿಯಲ್ಲಿದ್ದರು. ಮುಸಲ್ಮಾನ ಕುಟುಂಬಗಳಲ್ಲಿ ಕರಕುಶಲ ವಸ್ತುಗಳ ತಯಾರಿಕೆಯು ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಅಲ್ಲಿ ದುಡಿಯುವ ಮಕ್ಕಳ ಪ್ರಮಾಣವೂ ಹೆಚ್ಚಾಗಿದೆಯೆಂದು ತೋರುತ್ತದೆ. ಆದರೆ ಸಮಾಜದಲ್ಲಿ ಈ ಎಲ್ಲ ವಿಭಾಗಗಳೂ ವಂಚಿತ ವಿಭಾಗಗಳೇ ಆಗಿವೆ.

ಕೆಲವು ತಜ್ಞರ ಪ್ರಕಾರ ಕುಟುಂಬಗಳ ಬಡತನ ಅಥವಾ ಉದ್ಯೋಗಾವಕಾಶಗಳ ಅಭಾವವು ಮಕ್ಕಳನ್ನು ಅನಿವಾರ್ಯವಾಗಿ ದುಡಿಮೆಗೆ ತಳ್ಳುತ್ತದೆಂಬುದು ನಿಜವಲ್ಲ. ಮಕ್ಕಳನ್ನು ಶಾಲೆಗೆ ಕಳಿಸದಿದ್ದಾಕ್ಷಣ ಅವರನ್ನು ದುಡಿಮೆಯಲ್ಲಿ ತೊಡಗಿಸಲಾಗುತ್ತದೆಂಬುದೂ ಸರಿಯಲ್ಲವೆಂದು ಇನ್ನು ಕೆಲವರ ವಾದವಿದೆ. ಇದರಲ್ಲಿ ಹುರುಳಿಲ್ಲವೆಂದು ಹೇಳಲಾಗದು. ವಂಚಿತ ಮಕ್ಕಳು ಯಾವ ಹಾದಿ ಹಿಡಿಯಬಹುದೆಂಬುದನ್ನು ನಿರ್ಧಾರವಾಗಿ ಹೇಳುವಂತಿಲ್ಲ. ಅವರು ಶಾಲೆಯಿಂದ ಹೊರಗುಳಿಯಬಹುದು, ದುಡಿಮೆಯಲ್ಲೂ ನಿಯೋಜನೆಗೊಳ್ಳಬಹುದು. ದುಡಿಮೆಯಲ್ಲಿರುವ ಮಕ್ಕಳು ದೇಶದಲ್ಲಿ ಶೇ. ೩.೪; ಆದರೆ ಶಾಲೆಗೆ ಹೋಗದವರು ಶೇ. ೧೮. ಒಂದಂಶವಂತೂ ನಿಜ : ಅತಿ ಕಡಿಮೆ ಆದಾಯವುಳ್ಳ ಕುಟುಂಬಗಳ ಪೈಕಿ ಶೇ. ೨೦ ಕುಟುಂಬಗಳಲ್ಲಿ ಶೇ. ೩೦ರಷ್ಟು ಮಕ್ಕಳು ಶಾಲೆಗಳಿಂದ ಹೊರಗುಳಿದಿದ್ದಾರೆ. ಅಂತೆಯೇ ಪರಿಶಿಷ್ಟ ಬುಡಕಟ್ಟುಗಳ ಶೇ. ೨೮ ಮತ್ತು ಮುಸಲ್ಮಾನರ ಶೇ. ೨೫ ಮಕ್ಕಳು ಶಾಲೆಗಳಿಗೆ ಹೋಗುವುದಿಲ್ಲ. ಆದ್ದರಿಂದ ಸಮಸ್ಯೆ ಇರುವುದು ಕೇವಲ ದುಡಿಮೆಯಲ್ಲಿರುವ ಮಕ್ಕಳದ್ದಲ್ಲ; ಬದಲಾಗಿ, ಶಾಲೆಯ ಹೊರಗಿರುವ ಮಕ್ಕಳ ಸಮಸ್ಯೆಯು ಅಗಾಧವಾದ್ದು. ಅದು ಬಡತನದಿಂದಾಗಿಯೇ ಆಗಿರದೆ, ಕೆಲವೊಮ್ಮೆ ಶಾಲೆಗಳು ದುರ್ಲಭವಾದ್ದು ಮತ್ತು ಇದ್ದಾಗಲೂ ದಾಖಲಾಗಲು ಇರುವ ಸಾಮಾಜಿಕ ಅಶಕ್ತತೆ ಸಹ ಕಾರಣಗಳಾಗಿರುತ್ತವೆ.

**ದುಡಿಮೆಯಲ್ಲಿನ ಪರಿಸ್ಥಿತಿ**

೨೦೦೪-೦೫ರಲ್ಲಿ ದುಡಿಯುವ ಮಕ್ಕಳ ಸಂಖ್ಯೆ ೯೦ ಲಕ್ಷದಷ್ಟಿತ್ತು; ಅವರಲ್ಲಿ ಬಹುಭಾಗ ಹಳ್ಳಿಗಳಲ್ಲಿದ್ದವರು : ಶೇ. ೩.೭ (ಪಟ್ಟಣಗಳಲ್ಲಿ ಶೇ. ೨.೫). ಈ ದುಡಿಯುವ ಮಕ್ಕಳ ಮೂರನೆಯ ಎರಡರಷ್ಟು ಮಂದಿ ಕುಟುಂಬಗಳ ಉತ್ಪಾದನಾ ವ್ಯವಹಾರಗಳಲ್ಲಿದ್ದರು ಮತ್ತು ಇತರರು ಕೂಲಿಗಾಗಿ ಬೇರೆಯವರ ಕಡೆ ಕೆಲಸಕ್ಕಿದ್ದರು. ಪಟ್ಟಣಗಳಲ್ಲಿ ಅರ್ಧಕ್ಕಿಂತಲೂ ಹೆಚ್ಚು ಮಕ್ಕಳು ಕೂಲಿಗಳಾಗಿ ದುಡಿಯುತ್ತಿದ್ದರು. ದುಡಿಯುವ ಮಕ್ಕಳಲ್ಲಿ ಮೂರನೆಯ ಎರಡರಷ್ಟು ಮಂದಿ ಕೃಷಿ ಕ್ಷೇತ್ರದಲ್ಲಿದ್ದರು : ಸ್ವಂತ ಕುಟುಂಬಗಳದ್ದು ಅಥವಾ ಬೇರೆಯವರದ್ದು. ಹೆಣ್ಣುಮಕ್ಕಳ ಪೈಕಿ ಶೇ. ೨೦ ಮತ್ತು ಗಂಡುಮಕ್ಕಳ ಪೈಕಿ ಶೇ. ೧೪ ಉದ್ಯಮಗಳ ಉತ್ಪಾದನಾ ಘಟಕಗಳಲ್ಲಿ ಕೆಲಸಕ್ಕಿದ್ದರು. ದುಡಿಮೆಯ ಬೇರೆ ಕೆಲವು ವಿಭಾಗಗಳಲ್ಲಿ ಶೇಕಡಾವಾರು ಪ್ರಮಾಣ ಹೀಗಿದೆ :

| | ಗಂಡುಮಕ್ಕಳು | ಹೆಣ್ಣುಮಕ್ಕಳು | ಒಟ್ಟು |
|---|---|---|---|
| ಕಟ್ಟಡದ ಕೆಲಸಗಳು | ೩.೦ | ೦.೮ | ೨.೦ |
| ವ್ಯಾಪಾರ ಕ್ಷೇತ್ರ | ೧೦.೬ | ೧.೬ | ೬.೪ |
| ಹೋಟೆಲುಗಳು | ೪.೪ | ೦.೪ | ೨.೫ |

**ದುಡಿಯುವ ಮಕ್ಕಳ ಬಗೆಗಿನ ನಿಯಮ**

ಮಕ್ಕಳ ದುಡಿಮೆಯನ್ನು ನಿವಾರಿಸಬೇಕೆಂದು ಉದ್ದೇಶವಿದ್ದಾಗಲೂ ದುಡಿಯುತ್ತಿರುವವರ ಹಿತ ಕಾಪಾಡಲು ಎರಡು ಬಗೆಯ ಸ್ಥೂಲ ನಿಯಮಗಳು ನಮ್ಮಲ್ಲಿ ಜಾರಿಯಲ್ಲಿವೆ : (ಅ) ಅಪಾಯಕರ ಕೆಲಸಗಳಲ್ಲಿ ತೊಡಗಿಸಕೂಡದೆಂಬ ನಿರ್ಬಂಧ, ಮತ್ತು (ಆ) ಬೇರೆಡೆಗಳಲ್ಲಿ ದುಡಿಮೆಯ ನಿಯಮಗಳನ್ನು ವಿಧಿಸುವುದು.

ಹೀಗಿದ್ದರೂ ಅಪಾಯಕರ ಕೆಲಸಗಳಲ್ಲಿ ಮಕ್ಕಳನ್ನು ತೊಡಗಿಸಿರುವುದು ಜನಗಣತಿಯಿಂದ ತಿಳಿದುಬರುತ್ತದೆ. ಅದನ್ನೇ ಕೆಲವು ಸಂಶೋಧಕರೂ ದಾಖಲಿಸಿದ್ದಾರೆ. ಕೃಷಿಯನ್ನು ಬಿಟ್ಟರೆ ಔದ್ಯೋಗಿಕ ಘಟಕಗಳೇ ಅತಿಹೆಚ್ಚಿನ ಸಂಖ್ಯೆಯ ಮಕ್ಕಳನ್ನು ದುಡಿಮೆಯಲ್ಲಿ ತೊಡಗಿಸಿರುವುದು. (ಗಂಡುಮಕ್ಕಳು : ಶೇ. ೧೪.೪; ಹೆಣ್ಣುಮಕ್ಕಳು : ಶೇ. [illegible]; ಒಟ್ಟು: ಶೇ. ೧೭.೨). ಇಲ್ಲಿ ಮಕ್ಕಳು ಸಹ ಬೇರೆ ಕೆಲಸಗಾರರಂತೆ ಅಪಾಯಕ್ಕೀಡಾಗುವಂತಹ ಸಂದರ್ಭಗಳು ಹೇರಳವಾಗಿವೆ.

ಮಕ್ಕಳನ್ನು ದುಡಿಮೆಯಲ್ಲಿ ತೊಡಗಿಸಿಕೊಳ್ಳುವ [illegible] ಘಟಕಗಳು ಒಂದೇ ಸೂರಿನಡಿ ಇರುವಂಥವಲ್ಲ. ಅವುಗಳ ಸ್ವರೂಪ [illegible]

ಚಿಕ್ಕ ಚಿಕ್ಕ ಕಂಟ್ರಾಕ್ಟರುಗಳಿಗೆ ವಹಿಸಿಬಿಡಲಾಗುತ್ತದೆ; ಇನ್ನು ಕೆಲವನ್ನು ಮನೆಗಳಲ್ಲಿ ಮಾಡಬಹುದಾಗಿರುತ್ತದೆ. ಅವಕ್ಕೆ ಕೂಲಿಯನ್ನು ಇಂತಿಷ್ಟು ತಯಾರಿಕೆಗೆ ಎಂಬ ಲೆಕ್ಕದಲ್ಲಿ ಕೊಡಲಾಗುತ್ತದೆ. ಈ ವಿಧಾನಗಳು ಮಕ್ಕಳನ್ನು ದುಡಿಮೆಗೆ ನೇಮಕ ಮಾಡಿಕೊಳ್ಳ ಕೂಡದೆಂಬ ನಿಯಮವನ್ನು ಉಲ್ಲಂಘಿಸಲೆಂದೇ ಅಸ್ತಿತ್ವಕ್ಕೆ ಬಂದಿರುವಂಥವು. ಬೀಡಿ ಕಟ್ಟುವುದು, ಬೆಂಕಿಪೊಟ್ಟಣದ ತಯಾರಿಕೆ, ಜಮಖಾನ ಹೆಣೆಯುವುದು, ಬೀಗ ಮಾಡುವುದು, ಬಳೆಗಳ ತಯಾರಿಕೆ, ಬಟ್ಟೆ ಕೆಲಸ ಇತ್ಯಾದಿಗಳಲ್ಲಿ ಮಕ್ಕಳು ಅಧಿಕವಾಗಿ ಕೆಲಸ ಮಾಡುತ್ತಾರೆ. ಅವುಗಳಲ್ಲಿ ಹಲವು ಮನೆಗಳಲ್ಲೇ ಮಾಡುವಂಥವು. ೧೯೮೬ರ ಮಕ್ಕಳ ದುಡಿಮೆಯ ಶಾಸನದಲ್ಲಿ ಯಾವೆಲ್ಲಾ ಅಪಾಯಕಾರಿಯೆಂದು ಗುರುತಿಸಲಾಗಿವೆಯೋ ಅವನ್ನು ಮಾಡಿಸಲು ಈ ವಿಧಾನವು ಅನುಕೂಲ ಕಲ್ಪಿಸಿಕೊಟ್ಟಿದೆ. ಇಂಥವೇ ಅಪಾಯಕಾರಿ ಕೆಲಸಗಳನ್ನು ಮಾಡಲು ಅನೇಕ ವರ್ಕ್‌ಶಾಪ್‌ಗಳಲ್ಲಿ ಮಕ್ಕಳನ್ನು ನೇಮಿಸಿಕೊಳ್ಳಲಾಗಿದೆ.

ವಿ. ವಿ. ಗಿರಿ ರಾಷ್ಟ್ರೀಯ ದುಡಿಮೆ ಸಂಸ್ಥೆಯು ದುಡಿಯುವ ಮಕ್ಕಳ ಸನ್ನಿವೇಶವನ್ನು ಆಳವಾಗಿ ಅಭ್ಯಾಸ ಮಾಡಿದೆ. ಅದಕ್ಕಾಗಿ ಬೇರೆ ಬೇರೆ ಉದ್ಯಮಗಳನ್ನು ಗುರುತಿಸಿ ಅಧ್ಯಯನ ಮಾಡಲಾಗಿದೆ. ಎಲ್ಲೆಡೆಯೂ ಮಕ್ಕಳು ಎಂಟು ಗಂಟೆಗಿಂತಲೂ ಹೆಚ್ಚು ಕಾಲ ದುಡಿಯುತ್ತಿದ್ದಾರೆಂದು ಆ ಅಧ್ಯಯನ ತಿಳಿಸಿದೆ. ಶಾಲೆಗೆ ಹೋಗುವ ಮಕ್ಕಳು ದುಡಿಮೆಯಲ್ಲೂ ಇದ್ದರೆ ಅಂಥವರು ಮಾತ್ರ ಅದಕ್ಕಿಂತ ಕಡಿಮೆ ಅವಧಿಯ ಕೆಲಸ ಮಾಡಲು ಸಾಧ್ಯ. ಅವರು ೬ ಗಂಟೆ ಶಾಲೆಯಲ್ಲಿ ಕಳೆದು ೪ರಿಂದ ೬ ಗಂಟೆಗಳ ಕಾಲ ದುಡಿಮೆಯಲ್ಲಿ ಕಳೆಯುತ್ತಿದ್ದರು.

ಉದ್ಯಮಗಳಲ್ಲಿ ಸಾಮಾನ್ಯ ಕೂಲಿಯ ದರವು ಕಡಿಮೆ ಮಟ್ಟದಲ್ಲಿರಲು ಮಕ್ಕಳ ದುಡಿಮೆಯು ಸಹಾಯ ಮಾಡುತ್ತದೆ. ಮಕ್ಕಳು ದೊಡ್ಡವರಷ್ಟೇ ಕೆಲಸ ಮಾಡಿ, ಅವರು ಉತ್ಪಾದಿಸುವಷ್ಟನ್ನೇ ಉತ್ಪಾದಿಸಿದರೂ, ಅವರು ಪಡೆಯುವ ಕೂಲಿ ಮಾತ್ರ ಕಡಿಮೆ. ಕೆಲವರಿಗಂತೂ 'ತರಬೇತಿ'ಯ ಹೆಸರಿನಲ್ಲಿ ಕೂಲಿಯನ್ನೇ ಕೊಡುವುದಿಲ್ಲ. ಅಸಂಘಟಿತ ಕೆಲಸಗಾರರ ಪೈಕಿ ಅತ್ಯಂತ ಭೀಕರ ಶೋಷಣೆಗೆ ಗುರಿಯಾಗಿರುವವರು ಮಕ್ಕಳು. ಅವರಿಗೆ ಬಾಲ್ಯವೆಂಬುದು ಇಲ್ಲವೇ ಇಲ್ಲ; ಶಿಕ್ಷಣ ಸಹ ಅಲಭ್ಯ. ಜೊತೆಗೆ ದೊಡ್ಡವರಂತೆ ದುಡಿಯುವ ಇವರಿಗೆ ಯಾವುದೇ ಹಕ್ಕುಗಳೂ ಇಲ್ಲ, ಅದನ್ನು ಪಡೆಯಲು ಸಂಘಟನೆಯೂ ಅಸಾಧ್ಯ. ಆದ್ದರಿಂದ ನಮ್ಮ ದೇಶದಲ್ಲಿ ಒಂದು ರಾಷ್ಟ್ರೀಯ ನಿಯಮದ ಅಥವಾ ಶಾಸನದ ಅವಶ್ಯಕತೆ ಇದೆ. ಅದು ಅಸಂಘಟಿತ ವಲಯದಲ್ಲಿರುವವರ ರಕ್ಷಣೆಗೆ ಅನುವಾಗಬೇಕು. ವಿಶೇಷತಃ ಕೃಷಿ ಹಾಗೂ ಕೃಷಿಯೇತರ ವಲಯಗಳಲ್ಲಿ ದುಡಿಯುತ್ತಿರುವ ಮಕ್ಕಳ ಜೀವನವನ್ನು ಸುಧಾರಿಸಲು ಇದು ಸಾಧನವಾಗಬೇಕು; ಇನ್ನೂ ಮುಂದೆ ಹೋಗಿ, ಮಕ್ಕಳನ್ನು ದುಡಿಮೆಗೆ ತಳ್ಳುವ ಪ್ರಕ್ರಿಯೆಯನ್ನು ಇಲ್ಲವಾಗಿಸಬೇಕು. ಈಗಿನ ಶಾಸನವು ''ಅಪಾಯಕಾರಿ ದುಡಿಮೆ''ಯಲ್ಲಿ ಅವರನ್ನು ತೊಡಗಿಸಕೂಡದೆಂದು ಹೇಳಿದೆ, ಆದರೆ ಅದಕ್ಕೆ ಯಾವ ಬೆಲೆಯೂ ಸಿಕ್ಕಿಲ್ಲ. (ಅರ್ಜುನ್ ಸೇನ್‌ಗುಪ್ತ) ವರದಿಯು ತನ್ನ ೧೩ನೆಯ ಅಧ್ಯಾಯದಲ್ಲಿ ಆ ಬಗ್ಗೆ ಕೆಲವು ಸಲಹೆಗಳನ್ನು ನೀಡಿದೆ. ಅವನ್ನು ಅನುಷ್ಠಾನಕ್ಕೆ ತರುವುದರ ಜೊತೆಗೆ ಮಕ್ಕಳಿಗೆ ಶಿಕ್ಷಣ ಸೌಲಭ್ಯವು ದೊರೆಯುವಂತೆ ಮಾಡಬೇಕು ಮತ್ತು ಶಿಕ್ಷಣವು ಮಗುವನ್ನು ಕೇಂದ್ರವಾಗಿರಿಸಿ ಕೊಳ್ಳಬೇಕು. ಯುವಕರಿಗೆ ಉದ್ಯೋಗ ದೊರಕಿ, ಜೀವನಕ್ಕೆ ಆಧಾರ ದೊರೆಯುವುದು ಮಕ್ಕಳ ದುಡಿಮೆಯ ಸಮಸ್ಯೆಯ ಪರಿಹಾರದತ್ತ ಒಂದು ಪ್ರಮುಖ ಹೆಜ್ಜೆಯಾಗಿದೆ.



**ದುಡಿಯುವ ಹೆಣ್ಣುಮಕ್ಕಳು**

೧೪ ವರ್ಷಕ್ಕಿಂತಲೂ ಕಡಿಮೆ ವಯಸ್ಸಿನ ೮೬ ಲಕ್ಷ ದುಡಿಯುವ ಮಕ್ಕಳ ಪೈಕಿ ೨೦೦೪-೦೫ರಲ್ಲಿ ೩೯ ಲಕ್ಷ ಹೆಣ್ಣುಮಕ್ಕಳಿದ್ದರೆಂದು ಅಂದಾಜು ಮಾಡಲಾಗಿದ್ದಿತು. ಅವರಲ್ಲಿ ಬಹುಭಾಗ ಕೃಷಿ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದವರು. ೧೦ರಿಂದ ೧೪ ವರ್ಷಗಳವರ ಪೈಕಿ ಶೇ. ೫.೪ರಷ್ಟು ಗಂಡುಮಕ್ಕಳು ಮತ್ತು ಶೇ. ೪.೯ರಷ್ಟು ಹೆಣ್ಣುಮಕ್ಕಳು ಗ್ರಾಮಾಂತರ ಪ್ರದೇಶಗಳಲ್ಲಿ ಪೂರ್ಣಾವಧಿ ಕೆಲಸಗಾರರಾಗಿದ್ದರು; ಪಟ್ಟಣ ಪ್ರದೇಶಗಳಲ್ಲಿ ಈ ಪ್ರಮಾಣವು ಶೇ. ೪.೪ ಮತ್ತು ಶೇ. ೨.೪ರಷ್ಟಿತ್ತು. ಗ್ರಾಮಾಂತರ ಪ್ರದೇಶಗಳಲ್ಲಿ ಬಹು ಭಾಗದ ಹೆಣ್ಣುಮಕ್ಕಳು ಕುಟುಂಬದ ಹೊಲ-ಗದ್ದೆಗಳಲ್ಲಿ ಮತ್ತು ಗೃಹಕೃತ್ಯದಲ್ಲಿ ತಾಯಂದಿರಿಗೆ ಸಹಾಯ ಮಾಡುವುದರಲ್ಲಿ ನಿರತರಾಗಿದ್ದರು. ೧೦ರಿಂದ ೧೪ ವರ್ಷದ ಹೆಣ್ಣುಮಕ್ಕಳ ಪೈಕಿ ಶೇ. ೨.೫ರಷ್ಟು ಮಂದಿ ಗ್ರಾಮಾಂತರ ಪ್ರದೇಶಗಳಲ್ಲಿ ಮತ್ತು ಶೇ. ೧ರಷ್ಟು ಮಂದಿ ಪಟ್ಟಣಗಳಲ್ಲಿ ವರ್ಷದ ಕೆಲವು ತಿಂಗಳು ಗಳಲ್ಲಾದರೂ ಬೇರೆ ಕೆಲಸಗಳಿಗೆ ನಿಯೋಜಿಸಲ್ಪಡುತ್ತಿದ್ದರು.

ಗ್ರಾಮಾಂತರ ಪ್ರದೇಶಗಳಲ್ಲಿ ಹೆಣ್ಣುಮಕ್ಕಳ ಬಗ್ಗೆ ಹೆಚ್ಚು ತಾರತಮ್ಯವಿರುವುದು ಖಚಿತವಾಗಿ ಗೋಚರವಾಗುತ್ತದೆ. ಅಲ್ಲಿಯ ಗಂಡುಮಕ್ಕಳ ಪೈಕಿ ಶೇ. ೮೭ರಷ್ಟು ಮಂದಿ ಶಾಲೆಯಲ್ಲಿರುತ್ತಿದ್ದರು; ಆದರೆ ಹೆಣ್ಣುಮಕ್ಕಳು ಕೇವಲ ಶೇ. ೭೭ರಷ್ಟು ಇರುತ್ತಿದ್ದರು. ೧೦-೧೪ ವಯಸ್ಸಿನ ಹೆಣ್ಣುಮಕ್ಕಳಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಶೇ. ೧೧ ಮತ್ತು ಪಟ್ಟಣ ಪ್ರದೇಶಗಳಲ್ಲಿ ಶೇ. ೫.೫ರಷ್ಟು ಮಂದಿ ತಮ್ಮ ತಾಯಂದಿರ ಸಹಾಯಕ್ಕೆ ನಿಂತು ಮನೆಗೆಲಸಗಳನ್ನು ಮಾಡುತ್ತಿರುತ್ತಿದ್ದರು. ಮನೆಗೆಲಸಗಳಲ್ಲಿ ತೊಡಗಿರುತ್ತಿದ್ದ ಗಂಡುಮಕ್ಕಳ ಸಂಖ್ಯೆ ನಗಣ್ಯ. ತಾಯಂದಿರು ಮನೆಯ ಹೊರಗೆ ದುಡಿಯಲು, ಕುಟುಂಬಗಳ ಹೆಣ್ಣು ಮಕ್ಕಳು ಮನೆಗೆಲಸ ಮಾಡಿ ಸಹಾಯ ಮಾಡುತ್ತಿದ್ದರೆಂದು ಹೇಳಬಹುದಾಗಿದೆ.

ಗ್ರಾಮಾಂತರ ಪ್ರದೇಶಗಳ ಶೇ. ೧೧ರಷ್ಟು ದುಡಿಯುವ ಹೆಣ್ಣುಮಕ್ಕಳ ಪೈಕಿ ಅರ್ಧದಷ್ಟು ಮಂದಿಗೆ ಇರುತ್ತಿದ್ದ ಕೆಲಸವೆಂದರೆ ಮನೆಗೆ ನೀರು ಹೊರುವುದು, ಉರುವಲು ತರುವುದು, ಮತ್ತು ಬೆರಣಿ ತಟ್ಟುವುದು. ವಯಸ್ಸಾದ ಹೆಂಗಸರೂ ಇಂತಹ ಕೆಲಸಗಳಲ್ಲಿರುತ್ತಿದ್ದರೆಂಬುದನ್ನು ಹೇಳಬೇಕಾಗಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ, ಹೆಣ್ಣು ಮಕ್ಕಳು 'ದುಡಿಮೆ' ಎನಿಸಿಕೊಳ್ಳುವಂತಹ ಕೆಲಸಗಳಲ್ಲಿ ನಿರತರಾಗಿದ್ದರು. ಅವುಗಳಲ್ಲಿ ಭತ್ತ ಕುಟ್ಟುವುದು, ಧಾನ್ಯ ಬೀಸುವುದು, ಬಟ್ಟೆ ಹೊಲಿಯುವುದು ಎಲ್ಲಾ ಸೇರಿವೆ. ಇದರಲ್ಲಿ ಗಮನಿಸ ಬೇಕಾದ ಒಂದು ಪ್ರಮುಖ ವಿಷಯವೆಂದರೆ, ಹೆಂಗಸರು ಮಾಡುವ ಕೆಲಸಗಳನ್ನೆಲ್ಲಾ ಹೆಣ್ಣುಮಕ್ಕಳಿಗೂ ವಿಧಿಸಲಾಗಿದೆ, ಎಂಬುದು. ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯಗಳೆ ರಡರಲ್ಲೂ ದುಡಿಯುವುದು ಹೆಂಗಸರ ಪಾಲಿಗೆ ಬಿದ್ದಿದೆ; ಅವೆರಡರಲ್ಲೂ ಹೆಣ್ಣುಮಕ್ಕಳು ಕೂಡ ತೊಡಗಿಸಲ್ಪಟ್ಟಿದ್ದಾರೆ. ಶಾಲೆಯಿಂದ ಹೊರಗುಳಿದು ತಾಯಿಗೆ ಕೌಟುಂಬಿಕ ಕೆಲಸ ಗಳಲ್ಲಿ ನೆರವಾಗುವುದು ಮುಂದೆ ಹೆಣ್ಣುಮಕ್ಕಳಿಗೆ ದುಡಿಮೆಯ ಮಾರುಕಟ್ಟೆಯಲ್ಲಿ ಸ್ಪರ್ಧಿಸಲು ಸಾಧ್ಯವಾಗದಂತೆ ಮಾಡುತ್ತದೆ. ಹೀಗಾಗಿ, ೧೦ನೆಯ ವಯಸ್ಸಿನಿಂದಲೇ ಹೆಣ್ಣುಮಕ್ಕಳ ಭವಿಷ್ಯವು ಆತಂಕಕ್ಕೆ ಗುರಿಯಾಗುತ್ತದೆ. ಗ್ರಾಮಾಂತರ ಪ್ರದೇಶಗಳಲ್ಲಂತೂ ಈ ಆತಂಕವು ಇನ್ನೂ ಹೆಚ್ಚಿನ ಮಟ್ಟದ್ದು. ಈ ಹೆಣ್ಣುಮಕ್ಕಳೆಲ್ಲಾ ಬಹುಮಟ್ಟಿಗೆ ಬಡ ಕುಟುಂಬಗಳಿಗೆ ಸೇರಿದವರು, ಮತ್ತು ಜೀವನ ಹೊರೆಯಲು ಬೇಕಾದ ವರಮಾನಕ್ಕಾಗಿ ಕುಟುಂಬಗಳು ಇವರನ್ನು ಬಳಸಿಕೊಳ್ಳುತ್ತಿವೆ. ಇದರ ನಿವಾರಣೆಯು ಅತ್ಯಂತ ಅಗತ್ಯವಾಗಿ ಆಗಬೇಕಾದ ಕೆಲಸ.

❑

### ಗೂಡಾರ್ಥ

ಯಾವನ(ಳ)ಲ್ಲಿ
ಇರುವುದೋ ಒಂದೇ
ಒಂದು 'ಅಂಗಿ'
ಅವನೆ(ಳೆ)ೀ
ಅಲ್ಲವೇ ನಿಜವಾದ
'ಏಕಾಂಗಿ' !

**ಅಶೋಕ ಯ. ಪತ್ತಾರ**
ಮಾತಾ-ಪಿತೃ ನಿಲಯ
ಕಣಗಿನಹಾಳ ರಸ್ತೆ
ಬೆಟಗೇರಿ-ಗದಗ - ೫೮೨ ೧೦೨

# ಬಂಡವಾಳ ವ್ಯವಸ್ಥೆಯ ಬಂಡವಾಳ ಬಯಲಿಗೆ ಬಂತು

ಕೆ. ಎಸ್. ಪಾರ್ಥಸಾರಥಿ

ಹಣದುಬ್ಬರ ವಿಪರೀತ ಏರಿ, ಅಗತ್ಯವಸ್ತುಗಳ ಸಗಟುಬೆಲೆ ಸೂಚ್ಯಂಕ ೭.೫ರಷ್ಟು ಮಿಕ್ಕು ಏರುತ್ತಾ, ಸಾಮಾನ್ಯ ಜನರ ಜೀವನ ನೆನೆಗುದಿಗೆ ಬಿದ್ದಿದೆ. ಚಿಲ್ಲರೆ ವ್ಯಾಪಾರದ ಬೆಲೆ ಇದಕ್ಕಿಂತ ವಿಪರೀತವಾಗಿರುವುದನ್ನು ಈ ಸಂಖ್ಯೆ ೭.೫ ಹೊರಗೆಡಹುವುದಿಲ್ಲ. ೧೯೮೦ರಿಂದೀಚೆಗೆ ಬೆಲೆ ಏರಿಕೆಯ ವಾಸ್ತವ ಮಟ್ಟವನ್ನು ಮುಚ್ಚಿಡಲು ಈ ಸೂಚ್ಯಂಕಗಳನ್ನು ತಮಗೆ ಬೇಕಾದಂತೆ ತಿದ್ದಲು ಹೊರಟ ಬೂರ್ಷ್ವಾ ಸರ್ಕಾರೀ ಯಂತ್ರಕ್ಕೆ ಈಗಿನ ವಾಸ್ತವವನ್ನು ಮುಚ್ಚಿಡಲು ಸಾಧ್ಯವಾಗಿಲ್ಲ. ಬೆಲೆ ಏರಿಕೆ ಮತ್ತು ಹಣದುಬ್ಬರದಿಂದಾಗಿ, ಈಗ ಒಟ್ಟು ವ್ಯಾಪಾರ ಕುಸಿದು, ಲಾಭ ಕಡಿಮೆಯಾಗಿದೆ. ಬಂಡವಳಿಗರಿಗೂ ಬೆಲೆ ಏರಿಕೆಯ ಬಿಸಿ ತಟ್ಟಿದೆ, ಉಪ್ಪು ತಿಂದವನು ನೀರು ಕುಡಿಯಲೇ ಬೇಕು ಎಂಬಂತೆ. ೧೮ ವರ್ಷಗಳ ಉದಾರೀಕರಣ, ಜಾಗತೀಕರಣ, ಖಾಸಗೀಕರಣಗಳ ನೀತಿಯ ಅನುಕರಣೆಯಿಂದ ಬೆಲೆ ಏರಿಕೆ ಮತ್ತು ಹಣದುಬ್ಬರವಲ್ಲದೆ ಬೇರೇನನ್ನು ತಾನೆ ನಿರೀಕ್ಷಿಸಬಹುದು ? ಎಲ್ಲರನ್ನೂ ಒಳಗೊಂಡ ಆರ್ಥಿಕ ಬೆಳವಣಿಗೆಯಾಗಿದ್ದರೆ ಮಾತ್ರ ಈ ಎರಡೂ ಪಿಡುಗುಗಳನ್ನು ನಿಯಂತ್ರಿಸಬಹುದಿತ್ತು. ಆದರೆ ತಮ್ಮ ಜೀವನವನ್ನು ತಟ್ಟದ, ಕೇವಲ ಬಂಡವಳಿಗರ ಅಭಿವೃದ್ಧಿಯ ಬಗ್ಗೆ ಸಾಧಾರಣ ಜನ ಏಕೆ ತಲೆಕೆಡಿಸಿಕೊಳ್ಳಬೇಕು ?

ಹಣದುಬ್ಬರ, ಬೆಲೆ ಏರಿಕೆ ಎರಡೂ ಆರ್ಥಿಕ ಅಭಿವೃದ್ಧಿಗೆ ಅನಿವಾರ್ಯವೆಂಬಂತೆ ವ್ಯಾಖ್ಯಾನಿಸಲಾಗುತ್ತಿದೆ. ಎಲ್ಲರನ್ನೂ ಒಳಗೊಂಡ ಅಭಿವೃದ್ಧಿಯ ಜೊತೆ ಜೊತೆಗೇ ನ್ಯಾಯಯುತ ಹಂಚಿಕೆಯೂ ಬೇಕು ಎನ್ನುವವರನ್ನು ಅಭಿವೃದ್ಧಿಯ ವಿರೋಧಿಗಳು ಎಂಬಂತೆ ವರ್ಣಿಸಲಾಗುತ್ತಿದೆ. ಇದೇ ಜನ ಕೈಗಾರಿಕಾ ಕ್ಷೇತ್ರಕ್ಕೆ, ಉದ್ಯಮಿಗಳಿಗೆ ಕಡಿಮೆ ದರದಲ್ಲಿ ಬಂಡವಾಳ ಹೂಡಲು ಸಾಲ ಬೇಕು ಎನ್ನುತ್ತಲೇ, ಆ ಸಾಲವನ್ನು ದೊರಕಿಸುವ ಜನತೆಯ ಉಳಿತಾಯಕ್ಕೆ ಕಡಿಮೆ ಬಡ್ಡಿ ನೀಡಬೇಕು ಎನ್ನುತ್ತಾರೆ. ಇದು ಶೇ. ೯ಕ್ಕೂ ಹೆಚ್ಚು ವಿಕಾಸದ ದರವನ್ನು ಅನುಭವಿಸುತ್ತಿರುವ ಉದ್ಯಮಪತಿಗಳು ತಮ್ಮನ್ನು ತಾವೇ ಸಮರ್ಥಿಸಿಕೊಳ್ಳುವ ವೈಖರಿ. ಎರಡು ದಶಕಗಳ ಈ ನೀತಿಯ ಪರಿಣಾಮವಾಗಿಯೇ ಹಣದುಬ್ಬರ, ಬೆಲೆ ಏರಿಕೆಗಳು ಇಂದು ಹುಚ್ಚುಕುದುರೆಯಂತೆ ನಿಯಂತ್ರಣಕ್ಕೆ ಸಿಕ್ಕದಿರುವ ಪರಿಸ್ಥಿತಿಯನ್ನು ತಲುಪಿದೆ ಎಂದು ಇಂಥವರು ನೇರವಾಗಿ ಒಪ್ಪುವುದಿಲ್ಲ. ಕಾರಣ, ಬಂಡವಾಳ ವ್ಯವಸ್ಥೆಯಲ್ಲಿ ಜನಸಾಮಾನ್ಯರನ್ನು ಹಿಂಡಿ ಹಿಂಡಿ, ಅವರಿಂದ ತಮ್ಮದೇ ವಿಕಾಸಕ್ಕೆ ಬಂಡವಾಳವನ್ನು ಸಂಗ್ರಹಿಸುವ ಒಂದು ಮುಖ್ಯ ಸಾಧನವೇ ಹಣದುಬ್ಬರ ಮತ್ತು ಬೆಲೆ ಏರಿಕೆ. ಅಭಿವೃದ್ಧಿಯ ಜೊತೆ ಜೊತೆಗೇ ಒಂದಿಷ್ಟು ನ್ಯಾಯಯುತ ಹಂಚಿಕೆಗೂ ಆಸ್ಪದ ನೀಡಿದ್ದರೆ, ಅಂಥ ಬೆಳವಣಿಗೆಯಲ್ಲಿ ಬೆಲೆ ಏರಿಕೆ ಮತ್ತು ಹಣದುಬ್ಬರ ನಿಯಂತ್ರಣಕ್ಕೆ ಒಳಪಟ್ಟು, ಸ್ವಲ್ಪ ಕಡಿಮೆ ದರದ್ದೇ ಆದರೂ, ಪರಿಣಾಮಕಾರಿ ವಿಕಾಸವಾಗುತ್ತಿತ್ತು. ಆರ್ಥಿಕ ವಿಕಾಸ ಸಮಾಜದ ಎಲ್ಲ ಸ್ತರಗಳನ್ನು ವ್ಯಾಪಕವಾಗಿ ತಲುಪಬಹುದಿತ್ತು. ಹಣದುಬ್ಬರವೆಂದರೆ, ಶಾಸನಸಭೆಯ ಅನುಮತಿಯಿಲ್ಲದೆ ಜನಸಾಮಾನ್ಯರ ಮೇಲೆ ಹೇರಿದ ತೆರಿಗೆ ಎಂದು ಹೇಳುವುದು ಈ ಕಾರಣಕ್ಕಾಗಿ.

ಇಂದಿನ ಆರ್ಥಿಕ ವಿಕಾಸ ಏರುಪೇರಿನದು, ಅಸಮತೋಲನಕ್ಕೆ ಎಡೆಮಾಡಿಕೊಟ್ಟಿದೆ ಎಂಬುದಂತೂ ಸ್ಪಷ್ಟ. ಆರ್ಥಿಕತೆಯ ಕೆಲವೇ ಕ್ಷೇತ್ರಗಳಲ್ಲಿ ವಿಕಾಸವೇನೋ ಕಂಡುಬಂದಿದೆ ನಿಜ. ಈ ವಿಕಾಸವು ಗಣನೀಯವಾಗಿ ಸಾಮಾನ್ಯ ಜನರಿಗೆ ಉದ್ಯೋಗವನ್ನೇನೂ ಸೃಷ್ಟಿಸಲಿಲ್ಲ ಎಂಬುದು ವಾಸ್ತವ. ಜನಸಾಮಾನ್ಯರ [illegible] ವಿಕಾಸ ಆಗಿಲ್ಲ. ಶಿಕ್ಷಣ, ಆರೋಗ್ಯ, ಮೂಲಭೂತ ಸೌಕರ್ಯಗಳು ಮೊದಲಾದವು ಸೊರಗಿದ್ದಲ್ಲದೆ ಬಹುಮುಖ್ಯವಾಗಿ ಕೃಷಿ ಮತ್ತು ಗ್ರಾಮೀಣ ಕ್ಷೇತ್ರಗಳು ಬಡಕಲಾಗಿ, ಅಲ್ಲಿ ಯಾವುದೇ [illegible] ಎರಡು ಕ್ಷೇತ್ರಗಳೂ ಅಪಾರವಾಗಿ ಹಿಂದೆ ಸರಿದಿವೆ. ಆಹಾರ ಸ್ವಾವಲಂಬನೆಗೆ ಈ ಕಳೆದ ಎರಡು ದಶಕಗಳಲ್ಲಿ ಯಾವುದೇ ಆದ್ಯತೆಯನ್ನೂ ನೀಡಿಲ್ಲ. ಪರಿಣಾಮವಾಗಿ, ಇಂದು ಆಹಾರದ ತೀವ್ರ ಕೊರತೆಗಳ ಜೊತೆಗೆ ಸಾಮಾನ್ಯ ಜನ ಬಳಸುವ ಅಗತ್ಯವಸ್ತುಗಳ ಕೊರತೆಯೂ ಸೇರಿ ಜನತೆ ಹತಾಶರಾಗಿದ್ದಾರೆ. ಆರ್ಥಿಕ ಅಭಿವೃದ್ಧಿಯ ಶೇ. ೯ರ ಪ್ರಯೋಜನ ಪಡೆದ ಜನತೆಯ ಒಂದು ಸಣ್ಣ ವಿಭಾಗದವರ ಆದಾಯ ವಿಪರೀತ ಹೆಚ್ಚಿದೆ. ಇವರಿಂದಾಗಿ ಈಗಾಗಲೇ ಕೊರತೆಯಿರುವ ಸರಕುಗಳಿಗೂ ಬೇಡಿಕೆ ಅಪಾರವಾಗಿ ಏರಿದೆ; ಯಾವ ಬೆಳವಣಿಗೆ ಎರಡು ದಶಕಗಳ ಖಾಸಗಿ ಕ್ಷೇತ್ರ ಪರವಾದ ಆರ್ಥಿಕ ನೀತಿಯ ಪರಿಣಾಮವೋ ಅದನ್ನು ಈಗ ಕೈಗೊಂಡಿರುವ ಕೆಲವು ತುರ್ತುಕ್ರಮಗಳಿಂದ ತಕ್ಷಣವೇ ಸರಿಪಡಿಸಲು ಸಾಧ್ಯವಾಗದು. ಅರ್ಥಮಂತ್ರಿಯವರು ತಮ್ಮ ಇತ್ತೀಚಿನ ಬಜೆಟ್ಟಿನ ನೀತಿಯಿಂದಾಗಿಯೇ ಆರೇ ತಿಂಗಳಲ್ಲಿ ಶೇ. ೪ರಿಂದ ಶೇ. ೭.೫ಕ್ಕೆ ಹಣದುಬ್ಬರ ಏರಲು, ಷೇರುಪೇಟೆ ಅಸ್ತವ್ಯಸ್ತವಾಗಲು ತಮ್ಮ ನೀತಿಗಳೂ ಕಾರಣವೆಂದು ಒಪ್ಪಿಕೊಳ್ಳುವರೇ ? ಇನ್ನುಮೇಲೆ ಸರ್ಕಾರದ ಆದಾಯವು ತಂತಾನೆ ನಿರಂತರ ಹೆಚ್ಚುತ್ತಲೇ ಹೋಗುತ್ತದೆ ಎಂದು ತಮ್ಮ ಬಜೆಟ್‌ಅನ್ನು ಮಂಡಿಸಿದಾಗ ಚಿದಂಬರಂ ಭ್ರಮಿಸಿದ್ದು ಎಷ್ಟು ಸರಿ ?

ಜಾಗತಿಕವಾಗಿ ಎಲ್ಲೆಲ್ಲೂ ಹಣದುಬ್ಬರವಿದೆ. ಆಹಾರ ಪದಾರ್ಥದ ಉತ್ಪಾದನೆ ಕುಂಠಿತಗೊಂಡಿದೆ. ಪರಿಣಾಮವಾಗಿ ಅದಕ್ಕೆ ಬೇಡಿಕೆ ಹೆಚ್ಚಿದೆ. ಅಷ್ಟೇ ಅಲ್ಲ, ಈಗ ಆಹಾರ ವಸ್ತುಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸಿ ಜೈವಿಕ ಇಂಧನವನ್ನೂ ತಯಾರಿಸುವ ದುರ್ಬಳಕೆ ಮಾಡುತ್ತಿರುವುದು ಪ್ರಮುಖವಾಗಿ ಅಮೆರಿಕಾ ಸಂಯುಕ್ತ ಸಂಸ್ಥಾನ. ರೈತರು ಆಹಾರ ಧಾನ್ಯಗಳ ಬೆಳೆಯನ್ನು ಬಿಟ್ಟು ಲಾಭದಾಯಕವಾಗಿರುವ ವಾಣಿಜ್ಯ ಕೃಷಿಗೆ ಮುನ್ನುಗ್ಗುತ್ತಿದ್ದಾರೆ. ಆಧುನಿಕ ತಂತ್ರಜ್ಞಾನ, ಉತ್ತಮ ಬೀಜ, ಗೊಬ್ಬರ ಇವುಗಳನ್ನು ಬಳಸಲು ರೈತರು ಆರ್ಥಿಕವಾಗಿ ಅಸಮರ್ಥರಾಗಿ, ಕೃಷಿಯ ಉತ್ಪಾದಕತೆಯೂ ಕಡಿಮೆಯಾಗಿದೆ. ಆದರೆ, ಸ್ವಾಮಿನಾಥನ್ ಅವರು ಹೇಳುವಂತೆ ಆದ್ಯತೆಯ ಕ್ರಮವರಿತ ಅರ್ಥನೀತಿಗೆ, ಇವು ಯಾವುವೂ ಅನಿವಾರ್ಯವಲ್ಲ. ಕೃಷಿ ಕ್ಷೇತ್ರವು, ಅದರಲ್ಲೂ ಆಹಾರದ ಉತ್ಪಾದನೆಯು, ರಕ್ಷಣಾ ವೆಚ್ಚದಂತೆಯೇ ಅತ್ಯಗತ್ಯವೆಂದು ಪರಿಗಣಿಸಿ ಸರ್ಕಾರಗಳು ಜನಪರ ನೀತಿಯೊಂದನ್ನು ನಿರೂಪಿಸದೆ ಹೋದರೆ ಜಗತ್ತಿನಲ್ಲಿ ಹಸಿವಿನ ಸಮಸ್ಯೆ ಬೃಹದಾಕಾರವಾಗಿ ಬೆಳೆದು, ನಿಯಂತ್ರಿಸಲಾರದ ಕ್ಷೋಭೆ ಉಂಟಾದೀತು. ಪ್ರಸ್ತುತ ಸಂದರ್ಭದಲ್ಲಿ ಪೆಟ್ರೋಲ್ ಇರಲಿ, ನೀರಿಗೂ, ಅನ್ನಕ್ಕೂ ಯುದ್ಧಗಳು ಸಂಭವಿಸುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಅಂತರರಾಷ್ಟ್ರೀಯ ಆರ್ಥಿಕ ಮತ್ತು ಷೇರುಪೇಟೆಯ ಪರಿಸ್ಥಿತಿಯಿಂದ ಭಾರತದ ಆಂತರಿಕ ಅರ್ಥವ್ಯವಸ್ಥೆಯನ್ನು ರಕ್ಷಿಸಿದ್ದೇವೆಂದು ಬೊಗಳೆ ಬಿಡುತ್ತಿದ್ದವರ ದನಿಯೆಲ್ಲ ಈಗ ಉಡುಗಿಹೋಗಿದೆ.

ಆಹಾರ ಉತ್ಪನ್ನಗಳನ್ನು [illegible] ಮಾರುಕಟ್ಟೆಗೆ ದೊರಕೊಡದರೆಂದು ಹೇಳಿದವರನ್ನೆಲ್ಲ [illegible] ರೆಂದು [illegible] ಸರ್ಕಾರಕ್ಕೆ ಇಂದು [illegible] ಬೆಂಬಲಿಗರು [illegible]

ಪ್ರಧಾನ ಮಂತ್ರಿಗಳು ನಿರಂಬಳವಾಗಿ ಒಂದು ಮಾತು ಹೇಳಿದ್ದಾರೆ: ''ಆಹಾರ ಧಾನ್ಯಗಳ ಬೆಲೆ ಹೆಚ್ಚಿರುವುದರಿಂದ ಬೆಲೆಮಟ್ಟ ಏರಿದೆ. ಇದನ್ನು ಸದ್ಯದಲ್ಲೇ ನಿಯಂತ್ರಿಸುವುದು ಸಾಧ್ಯವಿಲ್ಲ. ಹಾಗೆಂದು ಆರ್ಥಿಕ ವಿಕಾಸಕ್ಕೆ ಧಕ್ಕೆಯುಂಟು ಮಾಡುವ ಯಾವ ಕಾರ್ಯಕ್ರಮವನ್ನೂ ಬೆಲೆ ನಿಯಂತ್ರಿಸುವ ಹೆಸರಿನಲ್ಲಿ ಕೈಗೊಳ್ಳುವುದಿಲ್ಲ.'' ಇದು ಅವರ ಒಲವು ಎತ್ತ ಕಡೆ ಎಂದು ಸ್ಪಷ್ಟಪಡಿಸುವ ಪ್ರಾಮಾಣಿಕವಾದ ಮಾತು. ಅರ್ಥಮಂತ್ರಿ ಎರಡು ವಾರಕ್ಕೂ ಹೆಚ್ಚು ವೃತ್ತಪತ್ರಿಕೆಗಳಿಂದ ತಲೆಮರೆಸಿಕೊಂಡಿದ್ದರು. ಈಗಷ್ಟೇ ವಾಷಿಂಗ್ಟನ್‌ನಿಂದ ಈ ಬೆಲೆ ಏರಿಕೆಯ ಬಗ್ಗೆ ಕಳವಳ ವ್ಯಕ್ತಪಡಿಸುತ್ತಾ, ತಮ್ಮ ಯಜಮಾನರಾದ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ಮುಂದೆ ಮಧ್ಯಮಾವಧಿಯಲ್ಲಿ ಯಾವ ಮಹತ್ತರ ಬದಲಾವಣೆಯನ್ನೂ ತರಲಾಗುವುದಿಲ್ಲವೆಂದು ಒಪ್ಪಿಕೊಂಡಿದ್ದಾರೆ. ನಿಯಂತ್ರಿಸಲು ಏನೆಲ್ಲಾ ಮಾಡಲು ತಾವು ಸಿದ್ಧನೆಂದು ಪಟ್ಟಿ ಮಾಡುತ್ತಾ ,ಅವರು ಹೇಳಿದ ಒಂದು ಮಾತು ಗಮನಾರ್ಹ: ''ಎಲ್ಲ ರೀತಿಯ ಸರ್ಕಾರಿ ವೆಚ್ಚವನ್ನೂ, ಸಾಮಾಜಿಕ ಕ್ಷೇತ್ರದಲ್ಲಿ ಮಾಡಲಿರುವ ವೆಚ್ಚವನ್ನೂ ಕಡಿತಮಾಡಲು ಸಿದ್ಧ''. ಇದನ್ನು ಕುರಿತು ವಿವರಣೆ ಅನವಶ್ಯಕ.

ವಿಪರ್ಯಾಸ. ಜಾಗತಿಕ ಮಾರುಕಟ್ಟೆ ಸಂಸ್ಥೆಯ ಆಶ್ರಯದಲ್ಲಿ ನಡೆಯುತ್ತಿರುವ ದೋಹಾ ಚರ್ಚೆಯಲ್ಲಿ ಎಲ್ಲ ರಾಷ್ಟ್ರಗಳೂ ಕೃಷಿ ಉತ್ಪನ್ನಗಳ ಆಮದಿಗೆ ಗಡಿ ತೆರಿಗೆಯ ಗೋಡೆಯನ್ನು ಏರಿಸದೆ, ಮುಕ್ತಪ್ರವೇಶ ನೀಡಬೇಕೆಂಬ ಒತ್ತಾಯ ಹೆಚ್ಚುತ್ತಿದೆ. ಇಲ್ಲಿಯವರೆಗೂ ಈ ಚರ್ಚೆಯಲ್ಲಿ ಯಾವ ಪ್ರಗತಿಯೂ ಆಗದೇ ಇರುವುದು ಸರಿಯಷ್ಟೆ. ಆದರೆ ಈಗ ಆಹಾರ ಮತ್ತು ಅಗತ್ಯವಸ್ತುಗಳ ಪೂರೈಕೆಯನ್ನು ಆಮದಿನಿಂದ ಆಂತರಿಕವಾಗಿ ಹೆಚ್ಚಿಸಿಕೊಂಡು ಬೆಲೆ ನಿಯಂತ್ರಿಸುವುದಕ್ಕೋಸ್ಕರ ಮುಕ್ತವಾಗಿ, ಮಹತ್ವ ಪ್ರಮಾಣದಲ್ಲಿ ಆಮದು ಮಾಡಿಕೊಳ್ಳಲು ಸರ್ಕಾರಗಳು ಧಾವಿಸುತ್ತಿವೆ. ತತ್ಪರಿಣಾಮವಾಗಿ ಇಂದು ಅಂತರರಾಷ್ಟ್ರೀಯವಾಗಿ ಆಹಾರಕ್ಕೆ ಬೇಡಿಕೆ ಹೆಚ್ಚಿ ಗಡಿ ತೆರಿಗೆ ವಿಧಿಸದೆಯೇ, ಅವುಗಳ ಬೆಲೆ ಹೆಚ್ಚಿ, ಆದರೂ ಅವುಗಳ ಆಮದು ಅನಿವಾರ್ಯವಾಗಿ, ಅಂಥ ಆಮದು ಆಂತರಿಕ ಮಾರುಕಟ್ಟೆಯ ಬೆಲೆಗಳ ಮಟ್ಟದ ಮೇಲೆ, ಈ ನೀತಿ ಬಯಸುವ, ಬೆಲೆ ಸುಧಾರಿಸುವ ಪರಿಣಾಮವನ್ನು ಉಂಟು ಮಾಡದೆಯೇ ಹೋಗಬಹುದು. ಅದೇ ಸಮಯದಲ್ಲಿ ಈ ಅವಕಾಶವನ್ನು ಉಪಯೋಗಿಸಿಕೊಂಡು, ದೋಹಾ ಮಾತುಕತೆಯನ್ನು ತುರ್ತಾಗಿ ಮುಗಿಸಬೇಕೆಂದು ಒತ್ತಡ ತಂದಿರುವ ಅಮೆರಿಕಾ ತನ್ನ ಉದ್ದೇಶವನ್ನು ಈಗ ಸಾಧಿಸಿಕೊಳ್ಳುವ ಸಾಧ್ಯತೆಯಿದೆ. ಇದಕ್ಕೆ ಈಗಷ್ಟೇ ಚಿದಂಬರಂ ತಮ್ಮ ಬೆಂಬಲ ಸೂಚಿಸಿದ್ದಾರೆ. ಕಮಲನಾಥರು ದೋಹಾ ಮಾತುಕತೆಯಲ್ಲಿ ಕೃಷಿ ಉತ್ಪನ್ನಗಳ ಆಮದು ನೀತಿಯನ್ನು ರೂಪಿಸುವಾಗ ಆಂತರಿಕ ಕೃಷಿ ಕ್ಷೇತ್ರವನ್ನು ರಕ್ಷಿಸುವುದರಲ್ಲಿ ರಾಜಿಮಾಡಿಕೊಳ್ಳುವುದಿಲ್ಲ ಎಂದು ಹೇಳುತ್ತಿದ್ದುದೆಲ್ಲಾ ಕೇವಲ ಪೊಳ್ಳು ಮಾತಾಗುವಂತಿದೆ. ಸದ್ಯದ ಸಮಸ್ಯೆಗೆ ತುರ್ತಿನ ಪರಿಹಾರವೆನ್ನುವ ಸಡಿಲಗೊಳಿಸಿದ ಆಮದು ನೀತಿ ಆಂತರಿಕವಾಗಿ ಕೃಷಿ ಕ್ಷೇತ್ರಕ್ಕೆ ಮತ್ತಷ್ಟು ಮಾರಕವಾಗುವ ಎಲ್ಲ ಸಾಧ್ಯತೆಗಳೂ ಉಂಟಾಗಿವೆ. ಈ ನೀತಿ ಮನೆಗೆ ಬೆಂಕಿ ಬಿದ್ದಾಗ ನೀರೆರೆದು ಬಾವಿ ತೋಡುವಂತಿದೆ. ಬಂಡವಾಳ ವ್ಯವಸ್ಥೆಯ ಮೇಲೆ ಪ್ರಜಾಪ್ರಭುತ್ವಾತ್ಮಕ ನಿಯಂತ್ರಣ ಇಲ್ಲದಿದ್ದರೆ ಕೆಲವೇ ಜನರ ಆದಾಯವು ಅವಾಸ್ತವಿಕವಾಗಿ ಹಾಗೂ ಮಿತಿಮೀರಿ ಹೆಚ್ಚಿದಾಗ ಅವರು ಸೃಷ್ಟಿಸುವ ಬೇಡಿಕೆಯು ಪೂರೈಸಲಾರದಷ್ಟು ಮಟ್ಟಕ್ಕೆ ಹೆಚ್ಚುತ್ತದೆ; ಅದರಿಂದಾಗಿ ಉದ್ಭವಿಸುವ ಬೆಲೆ ಏರಿಕೆಯು ಸಾಧಾರಣ ಜನತೆಗೆ ಸಹಿಸಲಾರದ ಹೊರೆಯಾಗುತ್ತದೆ, ಸಾಮಾಜಿಕ ಕ್ಷೋಭೆಯ ಸ್ವರೂಪ ಪಡೆಯುತ್ತದೆ.

ಬೆಲೆ ಏರಿಕೆಯನ್ನು ನಿಯಂತ್ರಿಸಬೇಕೆಂದು ಬಯಸುವವರು ಕೇವಲ ಕೂಲಿನಾಲಿ ಮಾಡಿ ಬದುಕುವವರು ಮಾತ್ರವಲ್ಲ. ಸಣ್ಣ ಉದ್ದಿಮೆದಾರರೂ, ಲಘು ಉದ್ದಿಮೆ ಮತ್ತು ಸ್ವಯಂ ಉದ್ದಿಮೆ ಮಾಡುವವರೂ ಇದರ ಪರಿಣಾಮದಿಂದ ತತ್ತರಿಸುತ್ತಾರೆ. ಇಂದು ಆರ್ಥಿಕತೆಯನ್ನು ನಿಯಂತ್ರಿಸುವ ಏಕಸ್ವಾಮ್ಯ ಕಂಪನಿಗಳ ಒಡೆಯರಿಗೆ ಇದರ ಗೊಡವೆ ಇಲ್ಲ. ಈ ಪರಿಸ್ಥಿತಿಯು ಕೇವಲ ತಾತ್ಕಾಲಿಕವೆಂದು, ಅಗತ್ಯವೆಂದು ಅವರು ಭಾವಿಸುತ್ತಾರೆ. ಆದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಅಧಿಕಾರ ಹಿಡಿಯಲು ಹೊಂಚು ಹಾಕುತ್ತಿರುವವರು, ಬೆಲೆ ನಿಯಂತ್ರಿಸಲು ತಾವು ಪ್ರಾಮಾಣಿಕವಾಗಿ ಏನೇನೋ ಮಾಡುತ್ತಿದ್ದೇವೆ ಎಂದು, ಅದರಲ್ಲೂ ಚುನಾವಣೆ ಹತ್ತಿರವಾದಾಗ, ನಟಿಸುವುದು ಸಾಮಾನ್ಯ. ವಾಸ್ತವದಲ್ಲಿ ಇವರೆಲ್ಲಾ ಕತ್ತಲಲ್ಲಿ ಶಿಳ್ಳೆ ಹೊಡೆಯುತ್ತಿದ್ದಾರೆ ಅಷ್ಟೆ. ಪರಿಸ್ಥಿತಿ ಯಾವ ದಿಕ್ಕಿಗೆ ಹೊರಳಿದರೂ, ಅದು ಏಕಸ್ವಾಮ್ಯ ಬಂಡವಾಳಕ್ಕೆ ಅನುಕೂಲಕರವೇ. ಈಗ ಸರ್ಕಾರ ಕೈಗೊಂಡಿರುವ ಹಲವಾರು ಕ್ರಮಗಳಲ್ಲಿ ಕಾಳಸಂತೆ ದಾಸ್ತಾನುಗಳ ವಿರುದ್ಧ ಎದ್ದಿರುವ ಅಬ್ಬರವೂ ಅಂಥ ಒಂದು



...ನಿಂ 'ಆತ್ಮಕಥೆ' ಪುಸ್ತಕ ಹೆಚ್ಚು ಖರ್ಚಾಗಿ ಪ್ರಚಾರ ಸಿಗಬೇಕಾದ್ರೆ, 'ಬಾಲಿವುಡ್' ಚಿತ್ರನಟಿಯರ ವಿಚಾರ ಬರೆಯಿರಿ ಸಾರ್...!

ಕ್ರಮವೇ ಆಗಿದೆ. ಆದರೆ ಸತ್ಯ ಸಂಗತಿ ಎಂದರೆ ಕಾಳಸಂತೆಯ ದಾಸ್ತಾನು ಮಾಡಬೇಕಾದರೂ, ಅಗತ್ಯ ವಸ್ತುಗಳು ಸಾಕಷ್ಟು ಪ್ರಮಾಣದಲ್ಲಿ ಉತ್ಪಾದನೆಯಾಗಿ ಲಭ್ಯವಾಗಬೇಕಲ್ಲವೇ! ಬಂಡವಾಳಶಾಹಿ ಮಾರ್ಗವೇ ಸರಿಯೆಂದು ಪ್ರಮಾಣ ಮಾಡುವವರಿಗೆ ತಾವೇ ಸೃಷ್ಟಿಸಿದ ಭೂತವನ್ನು ಉಚ್ಚಾಟನೆ ಮಾಡಲು ಈಗ ಸಮಾಜವಾದೀಯ ಕಾರ್ಯಕ್ರಮಗಳಿಗೆ ಶರಣುಹೋಗುವ ಈ ಅವಸ್ಥೆ ಬರಬಾರದಿತ್ತು ಪಾಪ! ಸತತ ಒಂದಿಷ್ಟು ನಿಯಂತ್ರಿಸದೆ ಮಾರುಕಟ್ಟೆಯಲ್ಲಿ ಸದ್ವರ್ತನೆ ಸಾಧ್ಯವಿಲ್ಲ ಎಂದು ಈಗ ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ.

ಬೆಲೆ ಏರಿಕೆಗೆ ಉದ್ಯಮ ಕ್ಷೇತ್ರ ಪಡೆಯುವ ಸಾಲದ ದರ ತೀರ ದುಬಾರಿ ಎಂಬ ಒಂದು ಕಾರಣವನ್ನು ಈಗ ಮುನ್ನೊಡ್ಡಲಾಗಿದೆ. ಹಾಗೆಯೇ ಜಾಗತಿಕವಾಗಿ ಆಹಾರ ಧಾನ್ಯ ಮತ್ತು ಪೆಟ್ರೋಲ್ ಅಲ್ಲದೆ ಉತ್ಪಾದನೆಗಾಗಿ ಆಮದು ಮಾಡಿಕೊಳ್ಳುವ ಇತರ ಸರಕುಗಳ ಬೆಲೆಯೂ ಹೆಚ್ಚಿದ್ದು ಒಂದು ರೀತಿಯಲ್ಲಿ ಬೆಲೆ ಏರಿಕೆಯನ್ನೇ ಆಮದು ಮಾಡಿಕೊಳ್ಳುತ್ತಿದ್ದೇವೆ ಎಂಬ ವಾದ ಮಂಡಿಸಲಾಗಿದೆ. ಈ ಎರಡೂ ಕಾರಣಗಳಲ್ಲಿ ಒಂದಿಷ್ಟು ತಥ್ಯಾಂಶವಿದೆ. ಅದರೊಂದಿಗೆ ಸುಲಭವಾದ ಬಡ್ಡಿ ದರದಲ್ಲಿ ವಿದೇಶೀ ಬಂಡವಾಳವೂ ಒಳಹರಿಯುತ್ತಿರುವುದು ವಾಸ್ತವ. ದೇಶದೊಳಗೆ ಅಗತ್ಯ ಕ್ಷೇತ್ರಗಳಲ್ಲಿ ಬಂಡವಾಳ ಹೂಡಲು ಅಪಾರ ಅವಕಾಶಗಳಿದ್ದರೂ ತಕ್ಷಣಕ್ಕೆ ಹೆಚ್ಚು ಲಾಭ ನೀಡದ ಅವುಗಳನ್ನು ನಿರ್ಲಕ್ಷಿಸಿ, ನಮ್ಮ ಹಲವು ಹಿರಿಯ ಉದ್ಯಮಿಗಳು ಜಾಗತಿಕವಾಗಿ ಬಂಡವಾಳ ಹೂಡಲು, ಬಂಡವಾಳವನ್ನು ರಫ್ತು ಮಾಡಲು ಮುಂದಾಗಿದ್ದಾರೆ. ಈಗಾಗಲೇ ನಮ್ಮ ಉದ್ಯಮಿಗಳ ವಿದೇಶೀ ಹೂಡಿಕೆ ೪೦,೦೦೦ ಕೋಟಿ ರೂ.ಗಳಷ್ಟಾಗಿದೆ. ಅಂದರೆ, ಈ ಹೂಡಿಕೆಯ ತೀರ್ಮಾನಗಳು ನಮ್ಮ ಜನತೆಯ ಅಗತ್ಯಗಳನ್ನು ಗಣನೆಗೆ ತೆಗೆದುಕೊಳ್ಳದೆ, ಕೇವಲ ಉದ್ದಿಮೆಗಳ, ಉದ್ಯಮಪತಿಗಳ ವೈಯಕ್ತಿಕ ಲಾಭಗಳಿಕೆಯನ್ನಷ್ಟೆ ಪರಿಗಣಿಸುತ್ತವೆ. ಅಗತ್ಯ ಕ್ಷೇತ್ರಗಳಲ್ಲಿ ಸಾರ್ವಜನಿಕ ಕ್ಷೇತ್ರವಾದರೂ ಪರಿಣಾಮಕಾರಿಯಾಗಿ ಪ್ರವೇಶಿಸಬೇಕಾಗಿತ್ತು. ಆದರೆ ಎನ್‌ಡಿಎ ಸರ್ಕಾರದ ಕಾಲದಿಂದ ಇಂದಿನವರೆಗೆ ಸಾರ್ವಜನಿಕ ಪಡಿತರ ವ್ಯವಸ್ಥೆಯನ್ನು ಕುಲಗೆಡಿಸುವುದೇ ನೀತಿಯಾಗಿದೆ. ಹೆಸರಿಗೆ ಮಾತ್ರ ಯೋಜನಾ ಮಂಡಳಿ ಎನಿಸುವ, ಆದರೆ ಯೋಜಿತ ಅರ್ಥವ್ಯವಸ್ಥೆ ಮತ್ತು ಅದರಲ್ಲಿ ಸಾರ್ವಜನಿಕ ಕ್ಷೇತ್ರದ ಪಾತ್ರ ಎರಡನ್ನೂ ಕೈಬಿಟ್ಟಿರುವ ಆ ಮಂಡಳಿಯ ಉಪಾಧ್ಯಕ್ಷ, ಅರ್ಥಮಂತ್ರಿ, ಪ್ರಧಾನಮಂತ್ರಿ ಈ ಮೂವರ ಕೂಟವು ಬೆಲೆ ಏರಿಕೆಯನ್ನು ಪ್ರಾಮಾಣಿಕವಾಗಿ ತಡೆಯುವುದೆಂದು ಹೇಗೆ ತಾನೇ ನಿರೀಕ್ಷಿಸುವುದು ? ಆಂತರಿಕವಾಗಿ ಹೂಡಿಕೆಗೆ ಬಾರದ ಅಪಾರ ವಿದೇಶೀ ವಿನಿಮಯದ ಗಳಿಕೆಯಿಂದ ಶ್ರೀಮಂತರ ಐಷಾರಾಮದ ವಿದೇಶೀ ಪ್ರವಾಸಕ್ಕೆ ಅನುಕೂಲವಾಗಿದೆ. ಹಾಗೂ ಪರದೇಶದಲ್ಲಿ ಉಕ್ಕಿನ, ಕಾರು ತಯಾರಿಕೆಯಂಥ ಘಟಕಗಳನ್ನು ನಮ್ಮ ಹಿರಿಯ ಉದ್ಯಮಪತಿಗಳು ಕೊಂಡುಕೊಳ್ಳಲು ಸಹಕಾರಿಯಾಗಿವೆ. ಕಾರ್ಮಿಕರಿಗೆ, ಸರ್ಕಾರಿ ನೌಕರರಿಗೆ ನೀಡುವ ತುಟ್ಟಿಭತ್ಯ, ವೇತನದ ಹೆಚ್ಚಳ, ರೈತರಿಗೆ ನೀಡುವ ಅಲ್ಪವಾದ ಸಹಾಯಧನ, ಇವುಗಳಿಗಿಂತ ಅಪಾರವಾಗಿ ಸಂಚಿತವಾದ ವಿದೇಶೀ ವಿನಿಮಯದಿಂದ ಪರಿಣಮಿಸುವ ಹಣದುಬ್ಬರ ಬೃಹತ್ ಪ್ರಮಾಣದ್ದು. ಹಿರಿಯ ಬಂಡವಳಿಗರ ವೈಯಕ್ತಿಕ ಹಿತಾಸಕ್ತಿಯನ್ನು ರಕ್ಷಿಸುವ ಸಲುವಾಗಿ, ರೂಪಾಯಿ-ಡಾಲರ್‌ಗಳ ನಡುವಿನ ವಿನಿಮಯ ದರವನ್ನು ಕೃತಕವಾಗಿ ಹೆಚ್ಚಿನ ಮಟ್ಟದಲ್ಲಿ ಕಾಯ್ದುಕೊಳ್ಳುವ ರಿಸರ್ವ್ ಬ್ಯಾಂಕ್ ಬಳಿ, ಮತ್ತಷ್ಟು ಬಡ್ಡಿದರವನ್ನು ಏರಿಸುವ ಮಾರ್ಗವಲ್ಲದೆ, ಅದರ ಬತ್ತಳಿಕೆಯಲ್ಲಿ ಬೆಲೆ ಏರಿಕೆಯನ್ನು ತಡೆಯಲು, ಹಣದುಬ್ಬರ ಇಳಿಸಲು ಬೇರೇನೂ ಮಾರ್ಗಗಳು ಉಳಿದಿಲ್ಲ. ಆರ್ಥಿಕ ವಿಕಾಸದ ದರ ಕುಸಿಯುತ್ತಿರುವುದಕ್ಕೆ ರೈತರು, ಕಾರ್ಮಿಕರು, ಸಾಧಾರಣ ಜನರು ಕಾರಣವಲ್ಲ. ಸಮರ್ಥವಾದ ಉತ್ಪಾದನೆಯನ್ನು ತಾವೇ ಮಾಡಲಾರದ ಉದ್ಯಮಿಗಳು, ಉತ್ಪಾದಕತೆಯ ಮಟ್ಟ ಕಮ್ಮಿ ಎಂದು ಕೃಷಿ ಕ್ಷೇತ್ರವನ್ನು ದೂರುವುದು ವ್ಯರ್ಥ. ತಿನ್ನುವ ಅನ್ನವನ್ನು ಬಳಸಿ ಸಾರಾಯಿ ಮಾಡ ಹೊರಟಿರುವ ಬಂಡವಾಳ ವ್ಯವಸ್ಥೆಯ ಅಡಿಪಾಯವೇ ರೋಗಗ್ರಸ್ತವಾಗಿರುವುದೇ ಇಂದಿನ ಕಟುಸತ್ಯ.

ಪ್ರಧಾನಮಂತ್ರಿಯಂತೂ ನಿರಂಬಳವಾಗಿ ಒಂದು ಮಾತು ಹೇಳಿದ್ದಾರೆ : 'ಆಹಾರಧಾನ್ಯಗಳ ಬೆಲೆ ಹೆಚ್ಚಿರುವುದರಿಂದ ಬೆಲೆಮಟ್ಟ ಏರಿದೆ. ಇದನ್ನು ಸದ್ಯದಲ್ಲೇ ನಿಯಂತ್ರಿಸುವುದು ಸಾಧ್ಯವಿಲ್ಲ. ಹಾಗೆಂದು ಆರ್ಥಿಕ ವಿಕಾಸಕ್ಕೆ ಧಕ್ಕೆಯುಂಟುಮಾಡುವ ಯಾವ ಕಾರ್ಯಕ್ರಮವನ್ನೂ ಬೆಲೆ ನಿಯಂತ್ರಿಸುವ ಹೆಸರಿನಲ್ಲಿ ಕೈಗೊಳ್ಳುವುದಿಲ್ಲ.' ಇದು ಅವರ ಒಲವು ಎತ್ತ ಕಡೆ ಎಂದು ಸ್ಪಷ್ಟಪಡಿಸುವ ಪ್ರಾಮಾಣಿಕವಾದ ಮಾತು. ಅರ್ಥಮಂತ್ರಿ ಎರಡು ವಾರಕ್ಕೂ ಹೆಚ್ಚು ವೃತ್ತಪತ್ರಿಕೆಗಳಿಂದ ತಲೆಮರೆಸಿಕೊಂಡಿದ್ದರು. ಈಗಷ್ಟೇ ವಾಷಿಂಗ್ಟನ್‌ನಿಂದ ಈ ಬೆಲೆ ಏರಿಕೆಯ ಬಗ್ಗೆ ಕಳವಳ ವ್ಯಕ್ತಪಡಿಸುತ್ತಾ, ತಮ್ಮ ಯಜಮಾನರಾದ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ಮುಂದೆ ಮಧ್ಯಮಾವಧಿಯಲ್ಲಿ ಯಾವ ಮಹತ್ತರ ಬದಲಾವಣೆಯನ್ನೂ ತರಲಾಗುವುದಿಲ್ಲವೆಂದು ಒಪ್ಪಿಕೊಂಡಿದ್ದಾರೆ. ನಿಯಂತ್ರಿಸಲು ಏನೆಲ್ಲಾ ಮಾಡಲು ತಾವು ಸಿದ್ಧವೆಂದು ಪಟ್ಟಿ ಮಾಡುತ್ತಾ, ಅವರು ಹೇಳಿದ ಒಂದು ಮಾತು ಗಮನಾರ್ಹ : 'ಎಲ್ಲ ರೀತಿಯ ಸರ್ಕಾರಿ ವೆಚ್ಚವನ್ನೂ, ಸಾಮಾಜಿಕ ಕ್ಷೇತ್ರದಲ್ಲಿ ಮಾಡಲಿರುವ ವೆಚ್ಚವನ್ನೂ ಕಡಿತಮಾಡಲು ಸಿದ್ಧ.' ಇದನ್ನು ಕುರಿತು ವಿವರಣೆ ಅನವಶ್ಯಕ.

**ಕೆ. ಎಸ್. ಪಾರ್ಥಸಾರಥಿ**
ಸಿ-೨, 'ಐಕ್ಯತಾ', ೬೦/೨, ೧೭ನೇ ಕ್ರಾಸ್,
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫

**ಊ**ರಾಗೆಲ್ಲಾ ಅದೇ ವಿಚಾರ, ಎಲ್ಲರ ನಾಲಿಗೆಯ ಮೇಲೂ ಅದೇ ಮಾತು. ಈ ಹೊಸಾ ಸುದ್ದಿ ಕೇಳಿ ಹೆಂಗಸರಂತೂ ಬೆವತುಹೋಗಿದ್ದರು. ಪಡ್ಡೆ ಹೈಕಳಿಗಂತೂ ಖುಷಿಯೋ ಖುಷಿ. ಜನ ಒಬ್ಬೊಬ್ಬರಾಗಿ ಈ ವಿಷಯದ ಬಗ್ಗೆ ಚರ್ಚಿಸಲು ರಾಮಮಂದಿರದ ಚಾವಡಿ ಬಳಿ ಸೇರ ತೊಡಗಿದರು. ಎಲ್ಲರ ಮಧ್ಯೆ ಒಬ್ಬ ಹೊಸ ವ್ಯಕ್ತಿ ಕುಳಿತಿದ್ದ. ಜನ ಎಲ್ಲಾ ಬಂದರು ಎಂದು ತಿಳಿದ ಮೇಲೆ ಪಟೇಲರೇ ಮ್ಯಾಲೆದ್ದು – ''ವಿಚಾರ ನಿಮ್ಗೆಲ್ಲಾ ತಿಳಿದಿರೋದೆ. ಪ್ರತಿ ವರ್ಷದಂತೆ ಈ ವರ್ಷಾನೂ ನಡೆದುಕೊಳ್ಳೋದು ಸರಿಯಿಲ್ಲ. ನಿಮ್ಗೆ ವಸಿ ಭಾರ ಆಗ್ಬೋದು. ಆದ್ರು ಹತ್ತೂರ್ನಾಗ ನಮ್ಗೆ ಒಂದು ಕಿಮ್ಮತ್ತು ಬರ್ತದೆ. ಆದ್ರಿಂದ್ಲೇ ಎಲ್ಲಾನೂ ವಿಚಾರ ಮಾಡಿ ಇವ್ರನ್ನ ಕರ್ಸಿರೋದು. ಮಂಡ್ಯಾ ದಾಗೆಲ್ಲಾ ಬೋ ಹೆಸರದೆ ಇವ್ರಿಗೆ...'' ಎಂದೆಲ್ಲಾ ಹೇಳುತ್ತಿದ್ದಾಗ ಬಿರುಗಾಳಿ ನುಗ್ಗಿದಂತೆ ಕಾಟ ಜನರ ನಡುವೆ ತೂರಿಬಂದು ಪೆಕ್ಕರು-ಪೆಕ್ಕರಾಗಿ ಕುಂತವರನ್ನ ನೋಡತೊಡಗಿದ.

ಪಟೇಲರು ಮಾತು ಮುಂದುವರೆಸಿ... ''ಹೆಸರು ಉಳಿಸೋದು ಬಿಡೋದು ನಿಮ್ಮ ಕೈಲೈತೆ. ಅಲ್ದೆ ಹೆಂಗುಸ್ರೂನು ಕರ್ಸೋಕೆ ತೀರ್ಮಾನಿಸಿರೋದ್ರಿಂದ ನಾಟ್ಕಾನಾ ಅದ್ದೂರಿಗೊಳಿಸೋದಕ್ಕೆ ನಿಮ್ಮ ಸಹಾಯ ಬೇಕು...'' ಎಂದೆಲ್ಲಾ ತನ್ನ ಗಾರ್ದಭ ಕಂಠದಲ್ಲಿ ಹೇಳತೊಡಗಿದರು.

ಯಾರೂ ಮಾತಾಡದಿದ್ದದ್ದು ತಾನು ಬಂದಿದ್ದ ಕಂಡರೂ ಬಕ್ಕೇಶಪ್ಪ ನೋಡಿಯೂ ನೋಡದಂತೆ ಇದ್ದುದ್ದು ಕಂಡ ಕಾಟ ತನ್ನ ಇರುವಿಕೆಯನ್ನ ತೋರಿಸಿಕೊಡಲು, ''ಮೇಷ್ಟ್ರೇ, ಇವತ್ತೇ ಪಾಲ್ಟು ಹಂಚ್ಬಿಡಿ, ಮೊದಲು ನಾಟ್ಕದ ಹೆಸ್ರೇಳಿ'' ಎಂದ. ಅವರೆಗೆ ತೆಪ್ಪಗಿದ್ದ ಜನ ''ಹೂಂ... ಅದು ಮಾಡಿ'' ಎಂದರು. ತನ್ನ ಮಾತಿಗೆ ವಸಿ ಕಿಮ್ಮತ್ತು ಸಿಕ್ಕಿದ್ದು ಕಂಡ ಕಾಟ ಮತ್ತೆ ಮಾತಾಡಲು ಹೋದ. ಪಟೇಲ ದುರುಗುಟ್ಟಿಕೊಂಡು ನೋಡ್ತಾ ''ಕುಂತ್ಕೊಳ್ಳಾ. ಇಲ್ಲಿ ಇರೋರೆಲ್ಲಾ ಗಂಡುಸ್ರಲ್ವಾ. ಎದ್ದಿಟ್ಟ ಮ್ಯಾಕೆ'' ಎಂದಾಗ, ಗೌಡರೇ ಮಧ್ಯೆ ಪ್ರವೇಶಿಸಿ ''ಅವ್ನು ಹೇಳೋದ್ರಲ್ಲೂ ತೆಪ್ಪೇನೈತೆ, ನಾವು ನಾಟಕದ ಹೆಸ್ರು ಹೇಳ್ದೆ–ಮೊದ್ಲೆ ಬೈಲಾ ಹ್ಯೋಳಾಕೊದುದ್ದು ತೆಪ್ಪಲ್ವಾ ?'' ಎಂದರು.

''ನೋಡ್ರಪ್ಪಾ, ಈ ಸುತ್ತಮುತ್ನಾಗ ಎಲ್ಲೂ ಕಲಿಯದ ಪಸಾ ನಾಟ್ಕ, ನಾಡ್ಕದೆಸ್ರು 'ವಸ್ತ್ರಾಪಹರಣ' ಅಂತಾ. ಮಹಾಭಾರುತ್ತುದ್ದು ಕತೆ'' ಎಂದ್ರು.

ಗೌಡ್ರು ಕೂಡ ತನ್ನ ಮಾತ್ಗೆ ಸೈ ಅಂದುದ್ದ ಕಂಡ ಕಾಟ ನಿಂತುದ್ದ ತಾಪ್ಲಿಂದ್ಲೆ ''ಜೋ ಪಸಂದ ನಾಟ್ಕ, ನಾಟ್ಕದ ಹೆಸ್ರು ಉಳಿಬೇಕಂದ್ರೆ ದುಶ್ಯಾಸನನ ಪಾತ್ರವ ನಮ್ಮ ಬಕ್ಕೇಶಪ್ಪಂಗೆ ಕೊಡ್ಬೇಕು'' ಅಂದುದ್ದೇ ತಡ ಗದ್ದಲ ಶುರುವಾಯ್ತು.

''ಅಮ್ಮಿಕ್ಕೊಂಡು ನಿಂತ್ಕೊಡಿಯೋ, ಇಲ್ಲಾ ಎರ್ಡು ಬಿಗಿಯೋದ್ಲೋ'' ಎಂದು ಲಿಂಗಾಯಿತರ ಸಂಜಪ್ಪ ಅಂದಾಗ ಮಾತಿಗೆ ಮಾತು ಬೆಳೆಯಿತು. ಒಡನೆ ಮಧ್ಯಕ್ಕೆ ಬಂದ ಬಕ್ಕೇಶಪ್ಪ ''ನಾನು ಸ್ಟೇಜ್ ಮ್ಯಾನೇಜ್ರಾಗಿರೋದ್ರಿಂದ ನಾಟ್ಕ ಆಡಾಕಿಲ್ಲ. ನನ್ಬದ್ಲು ಆ ಪಾತ್ರನ ಕೊಡೋದಿದ್ರೆ ಕಾಟಂಗೆ ಕೊಡಿ ಇಲ್ದಿದ್ರೆ...'' ಎಂದು ಹೊರಡಲನುವಾದ.

''ಇದೇನು ಗೌಡ್ರೆ, ಪಾತ್ರ ಹಂಚೋನು ಬಕ್ಕೇಶಪ್ನೋ – ನಾಟಕದ ಮೇಷ್ಟ್ರೋ – ಅದ್ಕೇನು ಕಂಠ-ಶರೀರ ಪರೀಕ್ಷೆ ಆಗ್ಬಾರ್ದಾ?'' ಎಂದು ತನ್ನ ಅಸಹನೆಯನ್ನು ದೊಡ್ಡ ಕಂಠದಲ್ಲಿ ವ್ಯಕ್ತಪಡಿಸುತ್ತಾ ತನ್ನ ದಪ್ಪನೆಯ ದೇಹ - ಕಂಠವನ್ನು ಪ್ರದರ್ಶಿಸುತ್ತಾ ತಾನೇ ದುಶ್ಯಾಸನನ ಪಾತ್ರಕ್ಕೆ ಲಾಯಕ್ಕು ಎಂಬುದನ್ನ ಪರೋಕ್ಷವಾಗಿ ವ್ಯಕ್ತಪಡಿಸಿದ ಶಿವಪ್ಪ.

ಗದ್ದಲ ನಿಲ್ಲಲಿಲ್ಲ. ಗೌಡ್ರು ಪೈಕಿಯೋರ್ಗಂತೂ ದುಶ್ಯಾಸನನ ಪಾತ್ರವ ಶಿವಪ್ಪನ ಪೈಕಿಯೋರ್ಗೆ ಕೊಡೋಕೆ ತುಸು ಒಪ್ಗೆಯೂ ಇರ್ಲಿಲ್ಲ. ಹಾಗೆಯೇ ಶಿವಪ್ಪನ ಕಡೆಯೋರಿಗೂ ಒಪ್ಗಿರಲಿಲ್ಲ. ಹೀಗಾಗಿ ಏನು ಮಾಡಬೇಕೆಂಬುದು ತೋಚದೆ ಸುಮ್ಮಿದ್ದಾಗ ಅಲ್ಲಿಯ ಸೂಕ್ಷ್ಮತೆ, ಮೆಜಾರಿಟಿ ಇರೋ ಪೈಕಿ... ಎಲ್ಲವನ್ನು ಗಮನಿಸಿದ ನಾಟ್ಕದ ಮೇಸ್ಟ್ರು - ಸ್ಟೇಜ್ ಮ್ಯಾನೇಜ್ರು ಮನಃಸ್ಥಿತಿ ಅರಿತು ಕಂಠ ಪರೀಕ್ಷೆ ಎಂಬ ನಾಟಕ ಮಾಡಿ ಪಾತ್ರವನ್ನು ಹಂಚಿದರು. ಮೇಷ್ಟ್ರು ತೀರ್ಮಾನ ಕಹಿಯಾದ್ರೂ ವಿಚಾರಿಸಲಾಗದೆ, ಶಿವಪ್ಪನ ಪೈಕಿಯೋರು ನಾಟ್ಕದ ಎರಡು ಪ್ರಮುಖ ಭೀಮ, ದುರ್ಯೋಧನ ಪಾತ್ರಗಳು ತಮ್ಗೆ ದೊರೆತಿದ್ದರಿಂದ ಸುಮ್ಮನಾದರು. ಕಾಟನಿಗೆ ದುಶ್ಯಾಸನನ ಪಾತ್ರ ಎಂದು ಮೇಷ್ಟ್ರು ಹೇಳುತ್ತಿದ್ದಂತೆ ಬಕ್ಕೇಶಪ್ಪನಿಗೆ ಕಂಗಳಲ್ಲಿ ಮಿಂಚು ಸುಳಿದಂತಾಯಿತು. ಕಾಟನಿಗಂತೂ ನಂಬಲಿಕ್ಕೇ ಆಗದೆ

# ಸುಭದ್ರೆಯ ಪರಿಣಯವೋ ? ವಸ್ತ್ರಾಪಹರಣ ಎಂಬ ನಾಟಕವೋ ?



• ಬಲ್ಲೇನಹಳ್ಳಿ ಮಂಜುನಾಥ

ಬಕ್ಕೇಶಪ್ಪನ್ನ ದೇವರನ್ನ ನೋಡುವಂತೆ ನೋಡುತ್ತಾ ನಿಂತ.

ಈ ವೇಳೆಗಾಗಲೇ ಊರಾಗೆಲ್ಲಾ ಸುದ್ದಿ ಹರಡಿಹೋಗಿತ್ತು. ಕಾಟನಿಗೆ ಸಿಕ್ಕ ಹೊಸ ಪಾತ್ರದ ಬಗ್ಗೆ ಎಲ್ಲರ ಬಾಯಲ್ಲೂ ಚರ್ಚೆ ನಡೆದಿತ್ತು. ನೀರಿಡಿಯುತ್ತಾ ನಿಂತಿದ್ದ ಹೆಂಗಸರು ಕಾಟ ಬರುವುದನ್ನು ಕಂಡು ಫೇಟ್ ಫಿಲಂನ ವಜ್ರಮುನಿಯೇ ಬಂದಂತೆ ಕಂಡು ಸೆರಗು ಮುಚ್ಚಿಕೊಂಡರು. ಅವನ ಆಕಾರಕ್ಕಿಂತ ಆತ ನಿರ್ವಹಿಸುವ ಪಾತ್ರದ ಬಗ್ಗೆ ಅವಕ್ಕೆ ಎಲ್ಲಿಲ್ಲದ ಭಯ ಒಂದಿತ್ತು. ಈ ಹೊಸ ಸುದ್ದಿ ಕೇಳಿದ ಸುಬ್ಬಿಗಂತೂ ನಂಬಲಿಕ್ಕೇ ಆಗಲಿಲ್ಲ. ತನ್ನ ಗಂಡನ ಸ್ವಭಾವದ ಬಗ್ಗೆ ಚೆನ್ನಾಗಿ ತಿಳಿದಿದ್ದ ಅವಳಿಗೆ ಅಚ್ಚರಿಯಾಗಿತ್ತು. ಪೈಸೆ ಖರ್ಚು ಮಾಡಲು ಹಿಂದೆ-ಮುಂದೆ ನೋಡುವ ಗಂಡ ನಾಟಕಕ್ಕೆ ಸೇರಿದ್ದು ಅದೂ ದುಶ್ಶಾಸನನ ಪಾತ್ರಕ್ಕೆ ಆಯ್ಕೆಯಾದುದ್ದರ ಬಗ್ಗೆ ತನ್ನನ್ನು ತಾನೇ ಪ್ರಶ್ನಿಸಿಕೊಂಡು – 'ಈ ಸಾಮರ್ಥ್ಯ ತನ್ನ ಗಂಡನಿಗಿದೆಯೇ' ಎಂದುಕೊಂಡಳು.

ಆದರೂ ಅವಳಿಗೊಂದು ಖುಷಿಯಾಯಿತು. ತನ್ನ ಬದುಕಲ್ಲಿ ಹೀರೋ ಆಗದ ಗಂಡ ನಾಟಕದಲ್ಲಾದರೂ ಹೀರೋ ಆದನಲ್ಲ ಎಂದು. ಅವಳೇನೂ ಕಾಟನಂತೆ ಅನಕ್ಷರಸ್ಥಳಲ್ಲ, ಅಷ್ಟಿಷ್ಟು ಕಲಿತವಳು. ತನ್ನ ಬದುಕ ಬಗ್ಗೆ ನೂರಾರು ಕನಸು ಕಂಡವಳು. ತನ್ನ ಗಂಡನಾಗಿ ಬರುವವನ ಬಗ್ಗೆ ಏನೇನೋ ಕಲ್ಪಿಸಿಕೊಂಡವಳು. ಆದರೆ ಬಡತನ ಎಲ್ಲ ಆಸೆ-ಕನಸು ಗಳನ್ನು ನುಂಗಿಹಾಕಿತ್ತು. ಕುಟಿಕುಟಿಯಲ್ಲಿ ಕೂತು ಗಂಡನ ನಡು ಹಿಡಿದುಕೊಂಡು ಕಪ್ಪು ಕನ್ನಡಕ ಹಾಕ್ಕೊಂಡು ಹೋಗಬೇಕು ಎಂದುಕೊಂಡಿದ್ದವಳಿಗೆ ಸೈಕಲ್ಲಿಗೂ ಗತಿಯಿಲ್ಲದ ಕಾಟನೊಂದಿಗೆ ಬಾಳ್ವೆ ನಡೆಸಬೇಕಾಯಿತು. ಹಾಗೆ ನೋಡಿದರೆ ತಿನ್ನುವುದಕ್ಕೆ ಉಣ್ಣುವುದಕ್ಕೆ ಆ ಮನೆಯಲ್ಲಿ ಏನೂ ಕೊರತೆ ಇರಲಿಲ್ಲ. ಕೊರತೆ ಇದ್ದುದ್ದೇ ಪ್ರೀತಿ, ಅನುಕಂಪ ತೋರುವುದರಲ್ಲಿ. ಅದು ಆ ಮನೆಯಲ್ಲಿ ಕಾಣದಾಗಿತ್ತು. ಎಲ್ಲವನ್ನೂ ಕಾಸಿನಲ್ಲೇ ಅಳೆಯುವ ಕಾಟ ತನ್ನ ಹೆಂಡತಿಯ ಬಯಕೆ ಏನು, ಅವಳ ಆಸೆಗಳೇನು ಎಂದು ತಿಳಿಯುವಲ್ಲೂ ವಿಫಲನಾಗಿದ್ದ. ಹೀಗಾಗಿ ಲಗ್ನವಾಗಿ ಐದಾರು ವರ್ಷಗಳಾದರೂ ಕೂಸೊಂದನ್ನು ಕಾಣುವ ಭಾಗ್ಯ ಅವಳಿಗಿರಲಿಲ್ಲ.

* * *

ಕಾಟ, ನಕ್ಷತ್ರ ಫಳ-ಫಳ ಅನ್ನೋ ಹೊತ್ಗೆ ಗಡದ್ದಾಗಿ ಉಂಡು ಮುಸುಕೆಳೆದು ಕೊಂಡು ಮಲಗಿಬಿಡುತ್ತಿದ್ದ. ಊರವರಿಗೆ ಮಧ್ಯರಾತ್ರಿ ಕಳೆದರೂ ನಾಟ್ಕದವರ ರಾಗ-ಆಲಾಪನೆ ನಿಲ್ಲದಿದ್ದುದ್ದು ಕಿರಿ-ಕಿರಿ ಎನಿಸತೊಡಗಿತು. ಮೈಸೂರಿನಿಂದ ಸ್ತ್ರೀ ಪಾತ್ರಕ್ಕೆ ಹೆಂಗಸು ಬರೋ ಸುದ್ದಿಯಿಂದ ಭಯಭೀತರಾದ ಹೆಂಗಸರು ಎಲ್ಲಿ ತಮ್ಮ ಗಂಡಂದಿರು ಅಡ್ಡದಾರಿ ಹಿಡಿದು ಬಿಟ್ಟಾರೋ ಎಂಬ ಆತಂಕಕ್ಕೆ ಒಳಗಾದರು. ಹೊಸದಾಗಿ ಮದ್ವೆಯಾದ ಗಂಡುಗಳು ಮಾವನ ಮನೆಯಿಂದ ಬಳುವಳಿ ಗಿಟ್ಟಿಸಲು ಇದೇ ಸಮಯವೆಂದು ನಾಟಕಕ್ಕೆ ಸೇರಿದ್ದರಿಂದ, ಕೊರೆವ ಚಳಿಗೆ ಬೆಚ್ಚಗೆ ಗಂಡಂದಿರೊಂದಿಗೆ ಕನಸು ಕಾಣುತ್ತಾ ಮಲಗುತ್ತಿದ್ದ ಹೆಣ್ಣುಗಳಿಗೆ ಒಂಟಿಯಾಗಿ ಹಾಸಿಗೆಯಲ್ಲಿ ಒದ್ದಾಡುವ ಪರಿ ಬಂತು. ಬರುತ್ತಾ ಬರುತ್ತಾ ಗಂಡಸರು ಮನೆಯನ್ನೂ ಮರೆತು ನಾಟಕದ ಮೇಷ್ಟ್ರ ಬಾಲದಂಗೆ ಅವರ ಹಿಂದೆ ತಿರುಗಾಡುವುದು, ಮೇಷ್ಟ್ರೊಂದಿಗೆ ಕದ್ದು ಕುಡಿಯುವುದು, ಆ ಮಂಪರಲ್ಲಿ ಮನೆಗೆ ಬಂದು ತದಕುವುದು ಹೆಚ್ಚಾಗಿ ಹೆಂಗಸರೆಲ್ಲಾ ಚಿಂತೆಗೊಳಗಾದರು. ಈ ವಿಷಯದ ಬಗ್ಗೆ ಮೇಷ್ಟ್ರುಗೂ ಹೆಂಗಸರಿಗೂ ಜಗಳವೂ ಆಗಿಹೋಯ್ತು. ಕೋಪಗೊಂಡ ಮೇಷ್ಟ್ರು ತಮ್ಮ ಶಿಷ್ಯರಿಗೆ ಬೆವರಿಳಿಸಿ, ''ಹೆಂಡ್ತಿರ್‍ನಾ ಹದ್ದುಬಸ್ತಿನಲ್ಲಿ ಇಡೋದಿಕ್ಕಾಗ್ದೆ ಇರೋರು ಎಂತಾ ಗಂಡಿಸ್ರಯ್ಯಾ, ನಾನೇನು ಗತಿಗೆಟ್ಟಿ ಬಂದಿವ್ನಾ, ನಿಮ್ಮ ನಾಟ್ಕವೂ ಬ್ಯಾಡ – ನಿಮ್ಮೆಂಗುಸ್ರ ಕೈಲಿ ಬೈಸಿಕೊಳ್ಳೋದೂ ಬ್ಯಾಡ'' ಎಂದು ಗಂಟು ಮೂಟೆ ಕಟ್ಟಿಕೊಳ್ಳತೊಡಗಿದರು.

ವಿಷಯ ತಿಳಿದ ಗೌಡ್ರು-ಪಟೇಲ್ರು ಹೌಹಾರಿಹೋದರು. ನಾಟ್ಕದ ಮೇಷ್ಟ್ರು ಕೈಕೊಟ್ಟಾನೆಂಬ ಗಾಬರಿಯಲ್ಲಿ ನಾಟ್ಕದ ಮನೆಗೆ ಓಡಿಬಂದರು. ಸ್ವಲ್ಪ ಎಡವಟ್ಟಾದರೂ ಡ್ರೆಸ್ಸಿಗೆ ಕಟ್ಟಿರೋ ಹಣ, ಹೆಂಗುಸಿಗೆ ಕೊಟ್ಟಿರೋ ಹಣ ಎಲ್ಲಾ ನಷ್ಟ ಎಂದು ಅರಿತು ಹನುಮಂತ್ನಂಗೆ ಹಾರ್‍ತಿದ್ದ ಮೇಷ್ಟ್ರುನ್ನ ಹಿಡಿದು ಬೆಳಗಾನ ಉಪದೇಶ ಮಾಡಿ ''ಏನೋ ಬಡ್ಡೆತ್ತವು ತಪ್ಪು ಮಾಡ್ಬಿಟ್ಟಾವೆ. ಅದ್ಕೆ ಬೇಕಾದ್ರ ದಂಡ ಹಾಕುವಾ. ತಾವು ದೊಡ್ಡ ಮನಸ್ಸು ಮಾಡ್ಬೇಕು'' ಎಂದು ಮೇಷ್ಟ್ರು ಮ್ಯಾಲೆ ಕೋಪಿದ್ರೂ ಅದ್ನ ತೋರ್‍ಸ್ದಕ್ಕಾಗ್ದೆ ಪಾತ್ರಧಾರಿಗಳ್ನ ಬಯ್ದು ಇನ್ನೊಂದು ಬಾರಿ ಹಿಂಗಾಗ್ದಂಗೆ ನೋಡ್ಕಬೇಕೆಂದು ತಾಕೀತು ಮಾಡಿದರು.

ಪ್ರಕರಣ ಹ್ಯಾಗೋ ಶಾಂತಿಯಾಯ್ತಲ್ಲ ಎಂದು ಉಸಿರು ಬಿಡೋವತ್ಗೆ ಕೆಲವು ಹುಡುಗ್ರು ಈ ಎಲ್ಲಾ ಘಟನೆಗೆ ಸರಾಯಿ ಅಂಗಡಿ ಕಾರಣ. ಅದ್ಕೆ ಆ ಅಂಗಡಿಯೇ ನಮ್ಮೂರ್‍ಗೆ ಬ್ಯಾಡ. ಆ ಬಗ್ಗೆ ಇವತ್ತೇ ತೀರ್ಮಾನವಾಗ್ಲಿ ಎಂದು ತಗಾದೆ ತಗುದ್ರು. ಈ ವಿಷಯದಲ್ಲಿ ಏನೂ ಹೇಳಲಿಕ್ಕಾಗದೆ ಒದ್ದಾಡುವಂಗಾಯ್ತು ಸಾಕಮ್ಮಂಗೆ ದುಡ್ಡು ಕೊಟ್ಟು - ಶಿಫಾರಸ್ಸು ಮಾಡ್ಸಿ ಸಾರಾಯಿ ಅಂಗ್ಡಿ ಇಡುಸ್ದೋರು ಗೌಡ್ರೇ. ಹಂಗಿರುವಾಗ ಈಗ ಆ ಬಗ್ಗೆ ತೀರ್ಮಾನಿಸೋದು ಸುಲಭದ ಮಾತೇ? ಗೌಡ್ರುಗೂ - ಸಾಕವ್ವಂಗೂ ಗಳಸ್ಯಕಂಠಸ್ಯ ಸಂಬಂಧ ಬ್ಯಾರೆ. ಅಂತಾದ್ರಲ್ಲಿ... ಗೌಡ್ರು ಯೋಚಿಸುತ್ತಿದ್ದಂತೆ ಯಾರೋ ಶ್ಯಾನುಭೋಗ್ರು ಬಂದ್ರು ಎಂದು ಗುಸುಗುಟ್ಟಿದರು.

ಗೌಡ್ರಿಗೆ ವಾಸ್ತವ ತಿಳಿಯೋದಕ್ಕೆ ಹೆಚ್ಚು ಹೊತ್ತು ಬೇಕಾಗಲಿಲ್ಲ. ಈ ತಗಾದೆಯ ಹಿಂದೆ ಇರೋ ಕೈವಾಡ ಯಾರ್‍ದು ಎಂದು ತಿಳಿದು ಹಲ್ಲು ಕಡಿದರು. ಶ್ಯಾನುಭೋಗ್ರು ಚಾವಡ್ತಾವ್ಕೆ ಬಂದುದ್ದೇ ತಡ. ಯುವಕರೆಲ್ಲಾ ಸಾರಾಯಿ ಅಂಗಡಿ ವಿಷಯ ಪ್ರಸ್ತಾಪಿಸಿ – ಅದನ್ನು ರದ್ದುಗೊಳಿಸುವಂತೆ ಸರ್ಕಾರಕ್ಕೆ ಪತ್ರ ಬರೆಯಬೇಕೆಂದು ಒತ್ತಾಯಿಸಿದರು. ಎಲ್ಲವನ್ನೂ ಕೇಳಿದ ಶ್ಯಾನುಭೋಗ್ರು...

''ನಾನು ಹಿಂಗಾಗ್ತದೆ ಅಂತಾ ಮೊದ್ಲೆ ಗೌಡ್ರಿಗೆ ಹೇಳಿದ್ದೆ, ಆದ್ರೆ ಅವರು ಕೇಳ್ಲಿಲ್ಲ. ಕಳ್ಳಭಟ್ಟಿ ಶುರುವಾಗಿ ಎಲ್ಲಾ ಸಾಯ್ತಾರ ಅಂತೇಳಿದರು. ಹೀಗೆ ನೀವೆಲ್ಲಾ ಬ್ಯಾಡಾ ಅಂತಿರೋದ್ರಿಂದ ಸರ್ಕಾರಕ್ಕೆ ಬರಿತೀನಿ. ಆದ್ರೆ ನಾಟ್ಕ ಕಳೆಯೋತನ್ಕ ಏನೂ ಮಾಡಾಕಾಗಲ್ಲ. ಏನು ಮಾಡುದ್ರೂ ನಾಟ್ಕದ ಮ್ಯಾಲೆ ಪ್ರಭಾವ ಬೀರ್‍ತದೆ ಅಲ್ವಾ ಗೌಡ್ರೇ...'' ಎಂದು ಗೌಡರನ್ನ ಕೇಳಿದರು. ಗೌಡರು ಹೂಂಗುಟ್ಟರು. ಯುವಕರೆಲ್ಲಾ ''ನಿಮ್ಮ ಮಾತ್ನ ನಂಬ್ತೀವಿ'' ಎಂದ್ಹೇಳಿ ಹೋದವು. ಏನೇನೋ ಹೇಳಿಬಿಟ್ಟಾನೆಂದು ಹೆದರಿದ್ದ ಗೌಡ-ಪಟೇಲರು ''ಈ ನಾಟ್ಕದ ಸವಾಸ ಸಾಕಪ್ಪ'' ಎಂದು ನಿಟ್ಟುಸಿರುಬಿಟ್ಟು ಮ್ಯಾಲೆದ್ರು.

ನಾಟಕದ ರಿಹರ್ಸಲ್ ಹೆಚ್ಚೆಚ್ಚು ಹೊತ್ತು ನಡೆಯತೊಡಗಿದಂತೆ ಬಕ್ಕೇಶಪ್ಪನ ಮನದ ಬಯಕೆಯೂ ತೀವ್ರವಾಗತೊಡಗಿತು. ಹೊಂಚು ಹಾಕಿ ಸಂಚು ಹೂಡುವ ಬಕದಂತೆ ಸಮಯಕ್ಕಾಗಿ ಕಾಯತೊಡಗಿದ. ಪಾತ್ರಧಾರಿಗಳು ತಮ್ಮ ಪಾತ್ರದಲ್ಲಿ ಮಗ್ನರಾಗ ತೊಡಗಿದರು. ಕಾಟನೂ ಈಗ ಬದಲಾಯಿಸಿಬಿಟ್ಟಿದ್ದ. ಮೊದಲಿನಂತಿರದೆ ಉದಾರ ನಾಗಿದ್ದ. ಗಂಡನ ಬದಲಾವಣೆ ಸುಬ್ಬಿಯಲ್ಲಿ ಅಚ್ಚರಿ ತರಿಸಿತ್ತು. ನಾಟಕದ ದಿನಗಳು ಹತ್ತಿರವಾದಂತೆ ಹಬ್ಬಿದ ಗಾಳಿಸುದ್ದಿ ಊರವರೆಲ್ಲಾ ಹೌಹಾರುವಂತೆ ಮಾಡಿತ್ತು. ಕಾಟನಂತೂ ಈ ಸುದ್ದಿಗೆ ಯಾವ ಬೆಲೆಯನ್ನೂ ಕೊಡಲಿಲ್ಲ. ತನಗೆ ದುಶ್ಶಾಸನನ ಪಾತ್ರ ಸಿಗುವಂತೆ ಮಾಡಿದ್ದಕ್ಕೆ ಈ ಶಿವಪ್ಪನ ಪೈಕಿಯೋರು ಇಲ್ಲದೇ ಇರೋದನ್ನ ಸೃಷ್ಟಿಸಿ ಬಕ್ಕೇಶಪ್ಪನ ಮಾನ ಹರಾಜು ಹಾಕ್ಲಿಕ್ಕೆ ಹೊರಟಿದ್ದಾರೆಂದುಕೊಂಡ.

ಬಳೆಗಳ ಶಬ್ದ-ಹೆಂಗಸರ ಮಾತುಗಳು ರಾತ್ರಿಯೆಲ್ಲಾ ನಿದ್ದೆಗೆಟ್ಟು ಮಲಗಿದ್ದ ಕಾಟನನ್ನು ಎಚ್ಚರಿಸಿದವು. ಮನೆಯಲ್ಲೆಲ್ಲಾ ಹೆಂಗಸರೆ, ಇವರಿಗೇನಿಲ್ಲಿ ಕೆಲಸ ಅದೂ ತನ್ನ ಮನೆಯಲ್ಲಿ ಎಂದುಕೊಂಡ. ಬಲದ ಮಗ್ಗಲಿಗೆ ತಿರುಗಿ ದ್ಯಾವ್ರಿಗೆ ಕೈಮುಗಿದು ಕೂರುವಷ್ಟರಲ್ಲಿ, ಹೆಂಗಸೊಬ್ಬಳು ಮುಂದೆ ಬಂದು ಸಂತೋಷದಿಂದ ''ಸಾರ್ಥಕಾತು ಬಿಡು ಕಾಟಣ್ಣ. ನೀನು ದುಶ್ಶಾಸನನ ಪಾತ್ರ ಮಾಡಿದ ಪುಣ್ಯಕ್ಕೇನೋ ನಮ್ಮ ಸುಬ್ಬಿ ಮೈ ತುಂಬಿಕೊಂಡ್ಲು, ಎಲ್ಲರಿಗೂ ಸಿಹಿ ಹಂಚು'' ಎಂದಳು.

ಹೆಂಗಸರ ಮಾತು ಹೃದಯಕ್ಕೆ ಅಪ್ಪಳಿಸಿದಂತಾಯಿತು ಕಾಟನಿಗೆ. ತನ್ನ ಸ್ಥಿತಿ ಅರಿವಿದ್ದ ಅವನಿಗೆ ತಲೆ ತಗ್ಗಿಸುವಂತಾಯಿತು. ಹೆಂಗಸರು ಒಬ್ಬೊಬ್ಬರಾಗಿ ಹೋದ ಮೇಲೆ ತಲೆ ತಗ್ಗಿಸಿದ್ದ ಸುಬ್ಬಿ ನಿಧಾನವಾಗಿ ತಲೆಎತ್ತಿ ಮಾತನಾಡಲು ಪ್ರಯತ್ನಿಸಿದಳು. ಅದನ್ನ ಗಮನಿಸದೆ ತನ್ನ ನಡುಗುವ ಕೈಯಿಂದ ಪಟೀರ್ ಎಂದು ಅವಳ ಕೆನ್ನೆಗೆ ಬಿಗಿದು ಹೊರಬಿದ್ದ.

ಮನಸ್ಸು ಸಂಪೂರ್ಣ ಗಲಿಬಿಲಿಗೊಂಡಿತ್ತು. ಹರಡಿದ್ದ ಸುದ್ದಿ ನಿಜವೇ ಎಂದು ಪ್ರಶ್ನಿಸಿಕೊಂಡ. ಎಲ್ಲೂ ನಿಲ್ಲಲಾರದವನಾಗಿ, ಹೊರಬಿದ್ದವನೆ ತೋಟಕ್ಕೆ ಬಂದ. ಕೆರೆಯ ಮಗ್ಗುಲಲ್ಲೆ ಅವನ ತೋಟ. ಅವನ ಅಪ್ಪ ಬಿಟ್ಟು ಹೋದ ಆಸ್ತಿ ಎಂದರೆ ಇದೊಂದೆ. ಹತ್ತಾರು ತೆಂಗಿನ ಗಿಡ, ಒಂದೆರಡು ಮಾವಿನ ಮರ ಅಲ್ಲಿನ ಸಂಪತ್ತು. ಬಂದವನೇ ತೆಂಗಿನ ಬುಡದಲ್ಲಿ ಕೂತ. ಕಣ್ಣಲ್ಲಿ ನೀರು ತುಂಬಿತ್ತು. 'ತನ್ನ ಬಾಳೆಲ್ಲಾ ಕಂಡವರಿಗೆ ದುಡಿಯೋದೇ ಆಗೋಯ್ತು. ಕೊನೆಗೆ ನನ್ನ ಸಂಸಾರವೂ...! ಛೇ?' ಎಂದು ಬಯ್ದುಕೊಂಡ. ಎದುರಿಗಿದ್ದ ಮಾವಿನ ಮರದ ಮಾವಿನಕಾಯಿ ಇವನನ್ನು ನೋಡಿ ನಕ್ಕಂತಾಯಿತು. ಅಸಾಧ್ಯ ಸಿಟ್ಟು ಬಂದು ಕುಳಿತಲ್ಲಿಂದಲೇ ಕಲ್ಲು ಒಗೆದ. 'ಇದೇ ಮಾವಿನ ಮರ ಇದೇ ಮಾವಿನಕಾಯಿ ಅಲ್ಲವೇ ನನ್ನನ್ನು ಈ ಸ್ಥಿತಿಗೆ ತಂದುದ್ದು' ಎಂದುಕೊಂಡ. ಕಣ್ಣಿನಿಂದ ನೀರು ಉದುರಿದವು. ಅಂದು ಚಿಕ್ಕಂದ್ನಲ್ಲಿ ಮಾವಿನಕಾಯಿ ಕೀಳಲು

ಸಂಸ್ಕಾರ

ಸಂಸಾರ ಸಾಗರದಿ
ಮುಳುಗಿ
Some ಸಾರವನು
ಸವಿದು
ಸಂತೃಪ್ತಿ ಪಡುವ
ಆಕರ!

ನಾ. ದಿವಾಕರ

ಎಷ್ಟೇ ಹೊರಳಾಡಿದರೂ ನಿದ್ದೆ ಕಣ್ಣಿಗೆ ಹತ್ತಲೇ ಇಲ್ಲ. ಯಾರನ್ನು ನಂಬೋದು ? ಕಣ್ಣೀರು ಒತ್ತರಿಸಿ ಬರುತ್ತಿದೆ. ದಿಂಬಿಗೆ ಮುಖ ಕೊಟ್ಟು ಅಳತೊಡಗಿದ.

ಗೌಡರು-ಪಟೇಲರ ಸಂವಾದ-ಸುರಾಪಾನ ಸಾಗಿಯೇ ಇತ್ತು. ''ಪರಿಹಾರ ಕಂಡುಹಿಡಿಯೋದು ನಿಮಗೇ ಸೇರಿದ್ದು'' ಎಂದು ವಿನಯಪೂರ್ವಕವಾಗಿ ಆಗ್ರಹಿಸುತ್ತಿದ್ದರು ಪಟೇಲರು.

''ಅದ್ಕೆ ಯಾಕ್ ಹೆದ್ರುತೀರಿ'' ಎಂದು ಸಮಾಧಾನಿಸುತ್ತಿದ್ದರು ಗೌಡರು. ಅವರ ಮನದಲ್ಲಿ ಆಸೆಯ ಹಕ್ಕಿ ಗರಿ ಬಿಚ್ಚತ್ತೊಡಗಿತು. ''ನನ್ನ ಮಾನ-ಮರ್ವಾದೆ ನಿಮ್ ಕೈಲಿಟ್ಟದ್ದೀನಿ, ಅದೇನ್ ಮಾಡ್ತಿರೋ ಮಾಡಿ'' ಎಂದ್ಹೇಳಿ ಪಟೇಲರು ಹೊರಟರು. ಮೀಸೆಯಲ್ಲೇ ನಕ್ಕ ಗೌಡರು ''ಇಷ್ಟು ದಿನ ಈ ಪಟೇಲ ಹಣ್ಣು ತಿನ್ನೋಕೆ ಅಡ್ಡವಾಗಿದ್ದ, ಈಗ ಬಿಡೋ ಕಾಗುತ್ತಾ'' ಎಂದು ಮನಸ್ಸಲ್ಲೇ ಲೆಕ್ಕಾಚಾರ ಹಾಕತೊಡಗಿದ.



ಚುನಾವಣೆ ದಿನಾಂಕ ಗೊತ್ತಾದ ಮೇಲೆ.... ನೀವು ಇದರ ಹತ್ತುಪಟ್ಟು ರೈಲು ಬಿಡಬೇಕ್ರೀ...!!

ಕಾಟನಿಗೆ ಆಶ್ಚರ್ಯವಾಯಿತು. ಎಣ್ಣೇ ಸೀಗೆಕಾಯಿ ಸಂಬಂಧದ ಬಕ್ಕೇಶಪ್ಪ ಹಾಗೂ ದ್ಯಾವ್ರ ಗುಡ್ಡಪ್ಪ ಮಾತಾಡ್ತಾ ಇರೋದ್ ಕಂಡು ''ನಾನ್ ಹೇಳೋದೆಲ್ಲಾ ಅರ್ಥ ಆಯ್ತದ್ ತಾನೆ'' ಎನ್ನುತ್ತಿದ್ದ ಬಕ್ಕೇಶ ಕಾಟ ಬಂದುದ್ ಕಂಡು ''ಹೆಂಗಯ್ತ್ಲೆ ಕಾಟ, ಪ್ರಾಕ್ಟೀಸು'' ಎಂದು ಹೆಗಲ ಮ್ಯಾಲೆ ಕೈ ಹಾಕಿ, ಮತ್ತೊಂದು ಕಯ್ಯ ದ್ಯಾವ್ರ ಗುಡ್ಡಪುನ್ ಬುಜದ ಮ್ಯಾಲಾಕಿ ''ಈ ನಾಟಕದ ಆಸ್ತಿಗಳಪ್ಪ ನೀವು'' ಎಂದ.

ಮೇಷ್ಟ್ರ ಮುಖ ನೋಡುತ್ತಾ ''ಭೀಮ ದುಶ್ಯಾಸನನ ಪಾತ್ರಕ್ಕೆ ಹೇಳ್ ಮಾಡ್ಸುದ್ ಜೋಡಿ ಅಲ್ವಾ ಮೇಷ್ಟ್ರೆ'' ಎಂದಾಗ, ಮೇಷ್ಟ್ರು ''ಹೌದು, ಹೌದು, ನಾಟ್ಕ ನಿಂತಿರೋದೆ ಇವ್ರ್ ಮ್ಯಾಕಲ್ವೆ'' ಎಂದರು. ಮಧ್ಯೆ ಬಾಯಿ ಹಾಕಿದ ಆಚಾರ್ರ ರಾಜಪ್ಪ ''ನಾಟ್ಕ ನಿಂತಿರೋದು ಇಬ್ರು ಮ್ಯಾಕೆ. ಜನ ನೋಡ್ಲಿಕ್ಕೆ ಕಾತುರುಸ್ತಾ ಇರೋದು ಆ ಎರಡೇ ದೃಶ್ಯಕ್ಕೆ. ಒಂದು ಕಾಟ ದ್ರೌಪತಿ ಸೀರೆ ಸೆಳೆಯೋದ್ನ ನೋಡೋಕೆ. ಮತ್ತೊಂದು ನಮ್ ದ್ಯಾವ್ರ ಗುಡ್ಡಪ್ಪ ದುಶ್ಯಾಸನುನ್ ಪಾತ್ರಧಾರಿ ಕಾಟುನ್ ಎದೆ ಬಗಿಯೋ ಸೀನ್ ನೋಡಾಕೆ'' ಎಂದು ಉದ್ಗರಿಸಿದ. ಉದ್ಗಾರದ ಈ ಮಾತು ಕೇಳುತ್ತಿದ್ದಂತೆ ಬೆವತುಹೋದ ಕಾಟ ದ್ಯಾವ್ರ ಗುಡ್ಡಪ್ಪುನ್ನ ಒಂದ್ ಬಾರಿ ಮ್ಯಾಲಿಂದ್ ಕೆಳಕ್ ನೋಡ್ದ. ಸಾಕ್ಷಾತ್ ಯಮನೇ ನಿಂತಂಗೆ ಭಾಸವಾಗಿ ಇವರೆಲ್ಲಾ ಸೇರಿ ಏನೋ ಪಿಲಾನ್ ಮಾಡ್ತಾವ್ರೆ ಎಂದುಕೊಂಡು ಅಲ್ಲಿ ನಿಲ್ಲದೆ ಮನೆ ಕಡೆ ಹೊರಟ.

* * *

ದೊಡ್ಡ ನಾಟಕದ ದಿನ ಬಂದೇಬಿಟ್ಟಿತು. ಊರಲ್ಲಿ ಸಂಭ್ರಮವೋ ಸಂಭ್ರಮ. ಮೂರು ದಿನಕ್ಕೆ ಮುಂಚಿತವಾಗೇ ನೆಂಟರು ಬರತೊಡಗಿದ್ದರಿಂದ ಊರಿಗೆ ಊರೇ ಗಿಜುಗುಡ ತೊಡಗಿತು. ಬಕ್ಕೇಶನಿಗಂತೂ ಈಗ ಸಮಯವೇ ಇಲ್ಲ, ಕೈತುಂಬ ಕೆಲಸ. ನಾಟ್ಕದ ಕೆಲಸದೊಂದಿಗೆ ತನ್ನ ಕೆಲಸಗಳಿಗೆ ರೂಪ ಕೊಡಲು ಈವತ್ತೇ ಕೊನೆ ದಿನ. ಹೀಗಾಗಿ ಒಮ್ಮೆ ರಂಗಸ್ಥಳಕ್ಕೆ , ಮತ್ತೊಮ್ಮೆ ಏನೇನೋ ಸಬೂಬು ತಳೆದು ಕಾಟನ ಮನೆ ಕಡೆಗೆ ತಿರುಗತೊಡಗಿದ. ಪಾತ್ರಧಾರಿಗಳಂತೂ ಹೊಸ ಬಟ್ಟೆ ಧರಿಸಿ ಟಾಕುಟೀಕಾಗಿ ತಿರುಗಾಡಲಾರಂಭಿಸಿದರು. ಪಡ್ಡೆ ಹೈಕಳಿಗೆ ಖುಷಿಯೋ ಖುಷಿ. ನಾಟ್ಕ ನೋಡಲೆಂದು ಬರುವ ಹುಡುಗಿಯರನ್ನು ಚುಡಾಯಿಸುತ್ತಾ, ರಾತ್ರಿಗೆ ಬರುವ ಸ್ತ್ರೀಪಾತ್ರಧಾರಿಗಳ ಬಗ್ಗೆ ಏನೇನೋ ಕಲ್ಪಿಸಿಕೊಳ್ಳುತ್ತಾ ಹರಟೆ ಹೊಡೆಯತೊಡಗಿದರು.

ಎಷ್ಟ್ ಬ್ಯಾಗ ರಾತ್ರಿಯಾದೀತಪ್ಪ, ನಾಟ್ಕ ಸುರುವಾದೀತಪ್ಪ ಎಂದು ಚಡಪಡಿಸುತ್ತಿದ್ದರು ಗೌಡರು. ಅವರಿಗೆ ಹೇಳಲಾರದಷ್ಟು ಸಂತಸ. ತಾವು ಮಾಡಿದ್ದ ಪ್ಲಾನು ಸಕ್ಸಸ್ಸಾದ್ರೆ ನಾನೇ ಪುಣ್ಯವಂತ ಅಂದ್ಕೊಂಡ್ರು. ಕಾಟನ ಮನೆಯಲ್ಲಂತೂ ನಂಟರು ತುಂಬಿಹೋಗಿದ್ದರು. ಕಾಟನಿಗಂತೂ ಎಲ್ಲರನ್ನೂ ಮಾತಾಡಿಸಿ ಬಂದವರ ಬೇಕು ಬೇಡಗಳನ್ನು ವಿಚಾರಿಸಿ ಸುಸ್ತಾಗಿ ಹೋಗಿದ್ದ. ನಾಟಕ ಸಮೀಪಿಸುತ್ತಿದ್ದಂತೆಯೇ ಅವನಿಗೆ ಹೆದರಿಕೆಯಾಗುತ್ತಿತ್ತು. ಆದರೂ ಏನೋ ತೀರ್ಮಾನಿಸಿದವನಂತೆ ಓಡಾಡುತ್ತಿದ್ದ. ಸುಬ್ಬಿಗಂತೂ ಈ ನಾಟ್ಕವೂ ಬೇಡ, ಬಂದವರಿಗೆಲ್ಲಾ ಬೇಯಿಸುವುದೂ ಬ್ಯಾಡ ಎನ್ನುವಂತಾಗಿತ್ತು. ನಾಲ್ಕೈದು ದಿನದಿಂದ ಈ ಕೆಲಸವೇ ಆಗಿ ಸುಸ್ತಾಗಿ ಹೋಗಿದ್ದಳು. ಆದರೂ ಅವಳಿಗೆ ಒಂದು ನಿಶ್ಚಿಂತೆ, ಏನೋ ಆಸೆ. ಈ ರಾತ್ರಿ ಆ ಎಲ್ಲಾ ಸಮಸ್ಯೆಗೆ ಪರಿಹಾರ ಸಿಗುತ್ತದೆಂಬ ಕನಸು ಅವಳಲ್ಲಿತ್ತು.

ಊರಿಗೆ ಊರೇ ರಂಗಸ್ಥಳದ ಮುಂದೆ ಕಲ್ಲುಬೀಳದಷ್ಟು ಜಾಗ. ಮೈಸೂರಿನಿಂದ ಬಂದ ಹೆಂಗಸರನ್ನು ಊಟಕ್ಕೆ ಕರೆಯುವಲ್ಲಿ ಪಾತ್ರಧಾರಿಗಳಲ್ಲೇ ಪೈಪೋಟಿ ನಡೆದಿತ್ತು. ಕೊನೆಗೂ ನಾಟಕ ಶುರುವಾಗಿ ಸೂತ್ರಧಾರಿ ಬಂದು ಎಲ್ಲರಿಗೂ ಕಥೆ ವಿವರಿಸಿ, ನರ್ತಕಿಯೊಂದಿಗೆ ನಾಟ್ಯವಾಡಿ ರಂಜಿಸಿದ. ಜನರಿಂದ ''ಒನ್ಸ್ ಮೋರ್'' ಕೇಳಿಬರತೊಡಗಿತು. ಪಾಂಡವರು-ಕೌರವರ ಮಧ್ಯೆ ಜಗಳ. ಪಾಂಡವರಿಂದ ರಾಜಸೂಯ ಯಾಗ, ಕೌರವರ ಮತ್ಸರ, ಜೂಜಾಟಕ್ಕೆ ಆಹ್ವಾನ ಹೀಗೆ ಕಥೆ ಸಾಗಿತು...

ನಾಟಕದ ಮೇಷ್ಟ್ರು ಇಮ್ಮಡಿ ಉತ್ಸಾಹದಿಂದ ಹಾರ್ಮೋನಿಯಂ ಬಾರಿಸುತ್ತಿದ್ದರು. ದುಶ್ಯಾಸನ ದ್ರೌಪದಿಯ ಅಂತಃಪುರಕ್ಕೆ ಬರುವಾಗ ಹಾಡುವ ಕಂದದ ನುಡಿಯನ್ನು ಬಾರಿಸುತ್ತಿದ್ದಂತೆ ಯಾರೋ ಬಂದು ಕಿವಿಯಲ್ಲಿ ಏನೋ ಹೇಳಿದರು. ಜನರೆಲ್ಲಾ ಎದ್ದೂ ಎದ್ದೂ ಪಾತ್ರದ ನಿರೀಕ್ಷೆ ಮಾಡುತ್ತಿದ್ದಾರೆ. ''ಒನ್ಸ್ ಮೋರ್'' ಕೇಳಿಬರುತ್ತಿದೆ. ದ್ರೌಪದಿ ಪಾತ್ರಧಾರಿ ಸಖಿಯರೊಂದಿಗೆ ಸಂವಾದಿಸುತ್ತಿದ್ದಾಳೆ. ಮೇಷ್ಟ್ರುಗೆ ಆ ಮಾತು ಕೇಳಿ ಏನು ಮಾಡಬೇಕೆಂಬುದೇ ತೋಚದಂತಾಯಿತು. ಹಾಕಿದ ಗುಂಡೆಲ್ಲಾ ಸರ್ರನೆ ಇಳಿದಂತಾಗಿ ಜೇಬಲ್ಲಿ ಇಟ್ಟಿದ್ದ ಬಾಟ್ಲನ್ನ ತೆಗೆದು ಜನರೆದುರೇ ಗಟಗಟನೆ ಕುಡಿದು ರಂಗಸ್ಥಳದ ಒಳಕ್ಕೆ ನುಗ್ಗಿದರು.

ಇದ್ದಕ್ಕಿದ್ದಂತೆ ನಾಟ್ಕ ನಿಂತಿದ್ದು ಯಾಕೆಂದು ಜನ ಕೂಗ ಲಾರಂಭಿಸಿದರು. ಒಳ ಬಂದ ಮೇಷ್ಟ್ರು ''ಬೇಗ್ನೆ ಹುಡ್ಕುರ್ಲಾ, ಎಲ್ಹೋದ ಆ ಬಡ್ಡಿ ಹೈದ'' ಎಂದರು. ಹುಡುಕಾಟ - ತಡಕಾಟ ಎಲ್ಲಾ ಮುಗಿಯಿತು. ದುಶ್ಯಾಸನ ಪಾತ್ರಧಾರಿಯ ಸುಳಿವೇ ಕಾಣಲಿಲ್ಲ. ಬಣ್ಣ ಹಾಕುವವನು ಈಗ್ತಾನೆ ಬ್ಯಾರೆ ಡ್ರಸ್ ಹಾಕ್ದೆ. ಒಳ್ಳೆಯ ಕತ್ತಿ ಕೊಟ್ಟೆ ಎಂದ.

ಒಳ ಬಂದ ಪಟೇಲರಿಗೆ ಆಘಾತವಾದಂತಾಯ್ತು. ಸ್ಟೇಜ್ ಮ್ಯಾನೇಜರ್ನ ನೋಡಿ ಅಂದ್ರು. ಎಲ್ ಹುಡ್ಕುದ್ರು ಸ್ಟೇಜ್ ಮ್ಯಾನೇಜ್ರು ಸುಳಿವೇ ಇರ್ಲಿಲ್ಲ. ಮೈಕ್ ಮುಂದೆ ಬಂದ ಪಟೇಲ್ರು ''ಪ್ರೇಕ್ಷಕ್ರು ದೊಡ್ ಮನಸ್ಸ ಮಾಡ್ಬೇಕು. ಪಾತ್ರಧಾರಿಗಳು ಅರ್ಜೆಂಟಾಗಿ ಕೆರೆಕಡೆ ಹೋಗವ್ರೆ...'' ಎನ್ನುತ್ತಾ ದುಶ್ಯಾಸನ ಪಾತ್ರಧಾರಿ ಕಾಟೆಗೌಡ್ರು ಎಲ್ಲಿದ್ರೂ ಸ್ಟೇಜ್ ಮ್ಯಾಕೆ ಬರಬೇಕು ಎಂದು ಕೂಗಾಕುದ್ರು.

ಪಟೇಲರ ಮಾತು ಕೇಳಿದ ಜನ ಗೊಳ್ಳೆಂದು ನಕ್ಕರು. ಇಬ್ರೂ ಎಲ್ಲೊಂಟೋದ್ರು ? ಪಟೇಲ್ರಿಗೆ ಚಿಂತೆ ಹತ್ತಿತು. ಏನಾದ್ರೂ ಅಪಾಯ ಸಂಭವಿಸ್ತೆ ಎಂದುಕೊಳ್ಳುತ್ತಾ ಕತ್ತಲಲ್ಲೇ ಹೆಜ್ಜೆ ಇಟ್ರು.

ಗಡಿಯಾರದ ಮುಳ್ಳು ಎರಡರತ್ತಾ ಹೊರಳುತ್ತಿರುವುದನ್ನು ಕಂಡ ಗೌಡರು ದಿಗ್ಗನೆದ್ದು ಕುಳಿತರು. ತಮ್ಮ ಆಸೆಗೆ ಅವಕಾಶ ಬಂತು ಎಂದುಕೊಂಡು ಕಾಟನ ಮನೆಯತ್ತ ಹೆಜ್ಜೆ ಇಟ್ಟರು. ಹೊಸ ಮದುವೆಯ ಗಂಡಿನ ಉತ್ಸಾಹ ಅವರಲ್ಲಿ ಮನೆಮಾಡಿತ್ತು.

ಇತ್ತ ಜನರನ್ನು ಸಂತೈಸಲು ಡ್ಯಾನ್ಸ್ ಆರಂಭವಾಯಿತು. 'ಬಾ... ಬೇಗ ಮನ ಮೋಹನ' ಹಾಡಿಗೆ, ಹಾಡಿನ ನೃತ್ಯಕ್ಕೆ ಎಲ್ಲರೂ ತಲೆ ತೂಗುತ್ತಿದ್ದಂತೆ ಊರೊಳಗಿಂದ ಕೆಟ್ಟ ಕೂಗು ತೂಗಿ ಬಂದು ಎಲ್ಲರನ್ನೂ ಬೆಚ್ಚಿ ಬೀಳಿಸಿತು. ಧ್ವನಿ ಬಂದ ಕಡೆಗೆ ಮೊದಲು ಒಬ್ಬರ ನಂತರ ಒಬ್ಬರು ಕೊನೆ ಕೊನೆಗೆ ದಂಡು ದಂಡಾಗಿ ಜನ ಓಡತೊಡಗಿದರು. ಗೌಡರು ನಡುಗುತ್ತಾ ನಿಂತಿದ್ದರು. ಪಟೇಲರು ಅವರನ್ನು ಹಿಡಿದಿದ್ದರು. ದೃಶ್ಯ ಕಂಡ ಜನ ಅವಾಕ್ಕಾಗಿ ನಿಂತುಬಿಟ್ಟರು. ರಕ್ತದ ಮಡು ಅಲ್ಲಿ ಹರಿಯುತ್ತಿತ್ತು. ಬಕ್ಕೇಶಪ್ಪ- ಸುಬ್ಬಿಯರ ಚೇತನಗಳು ತಲೆ ಕಡಿದ ಕುರಿಗಳು ಒದ್ದಾಡುವಂತೆ ಒದ್ದಾಡಿ ಬಿದ್ದಿದ್ದವು. ಕೈಯಲ್ಲಿ ಕತ್ತಿ, ತಲೆಯಲ್ಲಿ ಕಿರೀಟ, ನಾಟ್ಕದ ಡ್ರಸ್ಸಿನಿಂದ ಮಹಾಭಾರತದ ದುಶ್ಯಾಸನನನ್ನೂ ಮೀರಿಸುವಂತೆ ಕಾಣುತ್ತಿದ್ದ ಕಾಟನ ದೇಹ ಮನೆಯ ಮುಂದಿನ ಸೂರ್ಕಟ್ಟಿನಲ್ಲಿ ತೂಗಾಡುತ್ತಿತ್ತು. ಅವನು ಹಿಡಿದಿದ್ದ ಖಡ್ಗದಿಂದ ಹನಿಹನಿಯಾಗಿ ರಕ್ತ ಭೂಮಿಗೆ ತೊಟ್ಟಿಕ್ಕುತ್ತಿತ್ತು.

**ಬಲ್ಲೇನಹಳ್ಳಿ ಮಂಜುನಾಥ್**
ಮೈಸೂರು ಮಿತ್ರ ಪತ್ರಿಕಾ ಪ್ರತಿನಿಧಿ, ಕೆ. ಆರ್. ಪೇಟೆ, ಬಲ್ಲೇನಹಳ್ಳಿ ಅಂಚೆ
ಬೂಕನಕೆರೆ ಮಾರ್ಗ, ಮಂಡ್ಯಜಿಲ್ಲೆ - ೫೭೧೮೧೨

# ಹಸಿವಿಗೊಂದು ಅಳತೆಗೋಲು !

ಜಿ. ಎನ್. ಕೆಂಪಯ್ಯ

ವಿಶ್ವದಲ್ಲಿ ಅತಿವೇಗವಾಗಿ ಬೆಳವಣಿಗೆ ಹೊಂದುತ್ತಿರುವ ಅರ್ಥವ್ಯವಸ್ಥೆಗಳಲ್ಲಿ ತಾನು ಎರಡನೆಯದೆಂದು ಬೀಗುತ್ತಿರುವ ಭಾರತವು ಹಸಿವನ್ನು ಹೋಗಲಾಡಿಸುವಲ್ಲಿ ಇನ್ನೂ ಬಹಳ ದೂರ ಕ್ರಮಿಸಬೇಕಾಗಿದೆ. ಇಲ್ಲಿನ ಜನರಲ್ಲಿ ಅಪೌಷ್ಟಿಕತೆ ಬಹಳವಾಗಿ ಕಾಡುತ್ತಿದೆ. ಇತ್ತೀಚಿನ 'ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ'ಯ ಪ್ರಕಾರ ೬ರಿಂದ ೩೫ ತಿಂಗಳ ನಡುವಿನ ಶೇ. ೭೯.೨ರಷ್ಟು ಮಕ್ಕಳು ಹಾಗೂ ಶೇ. ೫೮ರಷ್ಟು ಗರ್ಭಿಣಿ ಸ್ತ್ರೀಯರು ರಕ್ತಹೀನತೆಯಿಂದ ಬಳಲುತ್ತಿದ್ದಾರೆ. ೩ ವರ್ಷದ ಒಳಗಿನ ಮಕ್ಕಳಲ್ಲಿ ಶೇ. ೩೮ರಷ್ಟು ಮಕ್ಕಳ ಬೆಳವಣಿಗೆ ಕುಂಠಿತವಾಗಿದೆ. ಶೇ. ೪೬ರಷ್ಟು ಮಕ್ಕಳು ಕಡಿಮೆ ತೂಕ ಹೊಂದಿದ್ದಾರೆ. ಭಾರತದ ಪ್ರತಿ ಮೂರು ಮಹಿಳೆಯರಲ್ಲಿ ಒಬ್ಬರು ಮತ್ತು ಶೇ. ೨೮ರಷ್ಟು ಪುರುಷರು ಕಡಿಮೆ ತೂಕ ಹೊಂದಿದ್ದಾರೆ. ಪ್ರಪಂಚದ ೫ ವರ್ಷದ ಒಳಗಿನ ಕಡಿಮೆ ತೂಕದ ಮಕ್ಕಳಲ್ಲಿ ಶೇ. ೪೦ರಷ್ಟು ಮಕ್ಕಳು ಭಾರತದಲ್ಲಿದ್ದಾರೆ. ತಾಯಂದಿರ ಮರಣ ಪ್ರಮಾಣ ೪೫೦ ಇದೆ. ಹಾಗೆಯೇ ಶಿಶುಮರಣ ದರ ೬೪ರಷ್ಟಿದೆ. ಇಷ್ಟೆಲ್ಲಾ ಅವಾಂತರಗಳು ಹಸಿವಿನಿಂದಾಗುತ್ತಿವೆ

ಬಡತನ ಒಂದು ವಿಶ್ವವ್ಯಾಪಿ ಸಮಸ್ಯೆ. ಅದು ಬಡ ರಾಷ್ಟ್ರಗಳನ್ನೂ ಬಿಟ್ಟಿಲ್ಲ, ಶ್ರೀಮಂತ ರಾಷ್ಟ್ರಗಳನ್ನೂ ಬಿಟ್ಟಿಲ್ಲ. ಆದರೆ ಅದರ ಸ್ವರೂಪ ಮಾತ್ರ ಬೇರೆ ಬೇರೆ.

ಬಡ ರಾಷ್ಟ್ರಗಳಲ್ಲಿ ಬಡತನವೆಂದರೆ ''ಜನರ ಜೀವನ ನಿರ್ವಹಣೆಗೆ ಕನಿಷ್ಠ ಅಗತ್ಯಗಳಾದ ಊಟ, ಬಟ್ಟೆ, ವಸತಿ, ಆರೋಗ್ಯ, ಶಿಕ್ಷಣ ಮುಂತಾದ ಸೌಲಭ್ಯಗಳನ್ನು ಪಡೆಯಲಾಗದ ಸ್ಥಿತಿ.'' ಇಂತಹ ಬಡತನವನ್ನು 'ನಿರಪೇಕ್ಷ ಅಥವಾ ಕಟ್ಟಾ ಬಡತನ' ಎನ್ನುತ್ತಾರೆ. ಏಷ್ಯಾ, ಆಫ್ರಿಕಾ ಹಾಗೂ ದಕ್ಷಿಣ ಅಮೆರಿಕಾದಲ್ಲಿನ ಮುಂದುವರಿಯುತ್ತಿರುವ ರಾಷ್ಟ್ರಗಳಲ್ಲಿ ಈ ರೀತಿಯ ಬಡತನ ಕಂಡುಬರುತ್ತಿದೆ. ಈ ರಾಷ್ಟ್ರಗಳಲ್ಲಿ ಬಹಳಷ್ಟು ಬಡಜನರು ಆಹಾರ, ಬಟ್ಟೆ, ವಸತಿ ಸೌಲಭ್ಯಗಳಿಲ್ಲದೆ ತೀರ ಕಳಪೆ ಜೀವನವನ್ನು ನಡೆಸುತ್ತಿದ್ದಾರೆ. ಆರೋಗ್ಯ ಸೌಲಭ್ಯಗಳನ್ನು ಪಡೆಯಲಾಗದೆ ರೋಗ-ರುಜಿನಗಳಿಂದ ನರಳುತ್ತಿದ್ದಾರೆ. ಶಿಕ್ಷಣವಿಲ್ಲದೆ ಅಂಧಕಾರದಲ್ಲಿ ಪ್ರಾಣಿಗಳಂತೆ ಬದುಕು ಸಾಗಿಸುತ್ತಿದ್ದಾರೆ.

ಶ್ರೀಮಂತ ರಾಷ್ಟ್ರಗಳಲ್ಲಿ ಬಡತನವೆಂದರೆ 'ಸಾಪೇಕ್ಷ ಬಡತನ'. ಇಲ್ಲದೆಯೂ ಇರುವಂಥ ಸನ್ನಿವೇಶ. ಅಂದರೆ ಇದು ಆದಾಯದ ಭಾರಿ ಅಸಮಾನತೆಯನ್ನು ಸೂಚಿಸುವ ಬಡತನವಾಗಿದೆ. ಹೆಚ್ಚು ಆದಾಯ ಹೊಂದಿದವರಿಗೆ ಹೋಲಿಸಿದರೆ ಕಡಿಮೆ ಆದಾಯ ಹೊಂದಿದವರು ಉತ್ತಮ ಜೀವನಮಟ್ಟ ಹೊಂದಿದ್ದರೂ ತುಲನಾತ್ಮಕವಾಗಿ ಬಡವರೆನಿಸುತ್ತಾರೆ. ಉದಾಹರಣೆಗೆ, ಮೂರು ಕಾರುಗಳನ್ನು ಹೊಂದಿರುವ ಕುಟುಂಬದ ಎದುರು ಒಂದು ಕಾರನ್ನು ಹೊಂದಿರುವ ಕುಟುಂಬ ತುಲನಾತ್ಮಕವಾಗಿ ಬಡತನದಲ್ಲಿದೆ ಎಂದು ಭಾವಿಸಲಾಗುತ್ತದೆ. ಇಂತಹ ಬಡತನ ಉತ್ತರ ಅಮೆರಿಕಾ ಹಾಗೂ ಯೂರೋಪಿನ ಶ್ರೀಮಂತ ರಾಷ್ಟ್ರಗಳಲ್ಲಿ ಕಂಡುಬರುತ್ತದೆ.

ಭಾರತದಲ್ಲಿರುವ ಬಡತನ ನಿರಪೇಕ್ಷ ಬಡತನವಾಗಿದೆ. ಇಲ್ಲಿನ ೧೧೦ ಕೋಟಿ ಜನಸಂಖ್ಯೆಯಲ್ಲಿ ಸುಮಾರು ೨೫ ಕೋಟಿಯಷ್ಟು ಜನರು ಎರಡು ಹೊತ್ತಿನ ಊಟವಿಲ್ಲದೆ, ಮಾನಮುಚ್ಚಲು ಸಾಕಷ್ಟು ಬಟ್ಟೆಯಿಲ್ಲದೆ, ತಲೆಮೇಲೊಂದು ಸೂರಿಲ್ಲದೆ, ನಕ್ಷತ್ರಗಳನ್ನು ಎಣಿಸುತ್ತಾ ಬದುಕು ಸಾಗಿಸುವವರಾಗಿದ್ದಾರೆ.

**ಬಡತನದ ಗುರುತಿಸುವಿಕೆ :** ಬಡತನವನ್ನು ಗುರುತಿಸುವುದಾದರೂ ಹೇಗೆ? ಇದು ಕಷ್ಟಸಾಧ್ಯವಾದ ಕೆಲಸ. ಬಡತನವನ್ನು ಗುರುತಿಸಲು 'ಬಡತನ ರೇಖೆ' ಎಂಬ ಒಂದು ಮಾನದಂಡವನ್ನು ಬಳಕೆಗೆ ತರಲಾಗಿದೆ. ಬಡವರನ್ನು ಬಡವರಲ್ಲದವರಿಂದ ಬೇರ್ಪಡಿಸುವ ವಿಭಜಕ ಬಿಂದುವನ್ನು 'ಬಡತನ ರೇಖೆ' ಎಂದು ಕರೆಯಲಾಗುತ್ತದೆ.

'ಬಡತನ ರೇಖೆ'ಯನ್ನು ಬೇರೆ ಬೇರೆ ರಾಷ್ಟ್ರಗಳಲ್ಲಿ ಬೇರೆ ಬೇರೆ ಅಂಶಗಳ ಆಧಾರದ ಮೇಲೆ ಗುರುತಿಸಲಾಗುತ್ತಿದೆ. ಕೆಲವು ರಾಷ್ಟ್ರಗಳಲ್ಲಿ ವ್ಯಕ್ತಿಯ ಆದಾಯವನ್ನು ಗಣನೆಗೆ ತೆಗೆದುಕೊಂಡು ಬಡತನ ರೇಖೆಯನ್ನು ಗುರುತಿಸಿದರೆ, ಮತ್ತೆ ಕೆಲವು ರಾಷ್ಟ್ರಗಳಲ್ಲಿ ಜನರ ಅಗತ್ಯ ವಸ್ತುಗಳ ಅನುಭೋಗದ ಪ್ರಮಾಣವನ್ನು ಗಣನೆಗೆ ತೆಗೆದುಕೊಂಡು ಬಡತನ ರೇಖೆಯನ್ನು ಗುರುತಿಸಲಾಗುತ್ತಿದೆ.

ಭಾರತದಲ್ಲಿ ಯೋಜನಾ ಆಯೋಗವು ಬಡತನ ರೇಖೆಯನ್ನು ಜನರು ಅನುಭೋಗಿಸುವ ಆಹಾರದ ಪೌಷ್ಟಿಕಾಂಶದ ಆಧಾರದ ಮೇಲೆ ಗುರುತಿಸಿ ವ್ಯಾಖ್ಯಾನಿಸಿದೆ. ಅದರಂತೆ 'ದಿನವೊಂದಕ್ಕೆ ನಗರ ಪ್ರದೇಶಗಳಲ್ಲಿ ೨೧೦೦ ಕ್ಯಾಲೊರಿಗಳು ಹಾಗೂ ಗ್ರಾಮೀಣ ಪ್ರದೇಶದಲ್ಲಿ ೨೪೦೦ ಕ್ಯಾಲೊರಿಗಳಷ್ಟು ಆಹಾರ ಪಡೆಯಲಾಗದವರು ಬಡವರು.' ಈ ವ್ಯಾಖ್ಯಾನವು ಕೇವಲ ಆಹಾರದ ಅನುಭೋಗದ ಪ್ರಮಾಣವನ್ನು ಮಾತ್ರ ಆಧಾರವಾಗಿಟ್ಟುಕೊಂಡಿದ್ದು, ಮಾನವನ ಇತರೆ ಅಗತ್ಯಗಳಾದ ಬಟ್ಟೆ, ವಸತಿ, ಶಿಕ್ಷಣ, ಆರೋಗ್ಯ ಮುಂತಾದುವುಗಳನ್ನು ಕಡೆಗಣಿಸಿದೆ. ಆದುದರಿಂದ ಭಾರತದ ಯೋಜನಾ ಆಯೋಗ ಗುರುತಿಸಿರುವ 'ಬಡತನ ರೇಖೆ'ಯನ್ನು 'ಹಸಿವಿನ ರೇಖೆ' ಎಂದು ಕರೆಯುವುದು ಸೂಕ್ತವೆನಿಸಿದೆ.

**ಹಸಿವಿನ ಅಳತೆಗೋಲು :** 'ಬಡತನಕೆ ಉಂಬುವ ಚಿಂತೆ' ಎಂಬಂತೆ ಬಡವರ ಸಮಸ್ಯೆಯೆಂದರೆ ಅದು ಹಸಿವಿನ ಸಮಸ್ಯೆ. ಹಸಿವು ಪ್ರಪಂಚದ ಜ್ವಲಂತ ಸಮಸ್ಯೆಗಳಲ್ಲಿ ಒಂದು. ಹಸಿವನ್ನು ಈ ಭೂಮಿಯ ಮೇಲಿಂದ ಸಂಪೂರ್ಣವಾಗಿ ಹೋಗಲಾಡಿಸುವುದು ವಿಶ್ವದ ಮುಂದಿರುವ ಗುರಿ. ಹಾಗಾದರೆ ಹಸಿವಿನ ಪ್ರಮಾಣವನ್ನು ಅಳತೆ ಮಾಡಲು ಸಾಧ್ಯವೆ ?

ವಿಶ್ವದಲ್ಲಿರುವ ಹಸಿವಿನ ಪ್ರಮಾಣವನ್ನು ಅಳೆಯಲು ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರಯತ್ನಗಳಾಗುತ್ತಿವೆ. 'ಅಂತರರಾಷ್ಟ್ರೀಯ ಆಹಾರ ನೀತಿಯ ಸಂಶೋಧನಾ ಸಂಸ್ಥೆ'ಯು (IFPRI) ಹಸಿವಿನ ಮಾಪನಕ್ಕಾಗಿ ಅಳತೆಗೋಲೊಂದನ್ನು ರೂಪಿಸಿದೆ. ಇದಕ್ಕೆ 'ವಿಶ್ವ ಹಸಿವಿನ ಸೂಚಿ' (Global Hunger Index – GHI) ಎಂದು ಕರೆಯಲಾಗಿದೆ. ಈ ಸೂಚಿಯನ್ನು ಜನರ ಅಪೌಷ್ಟಿಕತೆಯ ಪ್ರಮಾಣ, ೫ ವರ್ಷದ ಒಳಗಿನ ಕಡಿಮೆ ತೂಕದ ಮಕ್ಕಳ ಪ್ರಮಾಣ ಮತ್ತು ೫ ವರ್ಷದ ಒಳಗಿನ ಮಕ್ಕಳ ಮರಣ ಪ್ರಮಾಣ ಈ ಮೂರು ಘಟಕಾಂಶಗಳ ಆಧಾರದ ಮೇಲೆ ರೂಪಿಸಲಾಗಿದೆ.

೨೦೦೭ರ 'ವಿಶ್ವ ಹಸಿವಿನ ಸೂಚಿ' (GHI)ಯ ಆಧಾರದ ಮೇಲೆ ತಯಾರಿಸಲಾದ ೧೧೮ ರಾಷ್ಟ್ರಗಳ ಪಟ್ಟಿಯಲ್ಲಿ ಭಾರತದ ಸ್ಥಾನ ೯೪ನೆಯದು. ಅದರ GHI ೦.೪೯೬ ಇದೆ. ಈ ಪಟ್ಟಿಯಲ್ಲಿ ನಮ್ಮ ನೆರೆಹೊರೆಯ ರಾಷ್ಟ್ರಗಳಾದ ಚೀನಾ ಮತ್ತು ಪಾಕಿಸ್ತಾನ ಭಾರತಕ್ಕಿಂತ ಮೇಲಿವೆ. ಅಂದರೆ ಅವು ಕ್ರಮವಾಗಿ ೪೭ ಮತ್ತು ೮೮ನೇ ಸ್ಥಾನವನ್ನು ಪಡೆದಿವೆ. ಕ್ಯೂಬಾದಂತಹ ಸಣ್ಣ ದೇಶ ಹಸಿವನ್ನು ಹೋಗಲಾಡಿಸುವಲ್ಲಿ ಗರಿಷ್ಠ ಪ್ರಗತಿ ಸಾಧಿಸಿದೆ. ಪಟ್ಟಿಯಲ್ಲಿ ಮೊದಲ ಸ್ಥಾನ ಪಡೆದಿರುವ ಅದರ ವಿಶ್ವ ಹಸಿವಿನ ಸೂಚಿ ೦.೯೭೧ ಆಗಿದೆ. ವಿಶ್ವದ ಪ್ರತಿ ೭ ಜನರಲ್ಲಿ ಒಬ್ಬ ಪ್ರತಿದಿನ ಊಟವಿಲ್ಲದೆ ಮಲಗುತ್ತಿದ್ದಾನೆ. ಇಂತಹವರ ಸಂಖ್ಯೆ ಸುಮಾರು ೮೫೪ ಮಿಲಿಯನ್‌ಗಳಷ್ಟಿವೆ.

ವಿಶ್ವದಲ್ಲಿ ಅತಿವೇಗವಾಗಿ ಬೆಳವಣಿಗೆ ಹೊಂದುತ್ತಿರುವ ಅರ್ಥವ್ಯವಸ್ಥೆಗಳಲ್ಲಿ ತಾನು ಎರಡನೆಯದೆಂದು ಬೀಗುತ್ತಿರುವ ಭಾರತವು ಹಸಿವನ್ನು ಹೋಗಲಾಡಿಸುವಲ್ಲಿ ಇನ್ನೂ ಬಹಳ ದೂರ ಕ್ರಮಿಸಬೇಕಾಗಿದೆ. ಇಲ್ಲಿನ ಜನರಲ್ಲಿ ಅಪೌಷ್ಟಿಕತೆ ಬಹಳವಾಗಿ ಕಾಡುತ್ತಿದೆ. ಇತ್ತೀಚಿನ 'ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ'ಯ ಪ್ರಕಾರ ೬ರಿಂದ ೩೫ ತಿಂಗಳ ನಡುವಿನ ಶೇ. ೭೯.೨ರಷ್ಟು ಮಕ್ಕಳು ಹಾಗೂ ಶೇ. ೫೮ರಷ್ಟು

ಗರ್ಭಿಣಿ ಸ್ತ್ರೀಯರು ರಕ್ತಹೀನತೆಯಿಂದ ಬಳಲುತ್ತಿದ್ದಾರೆ. ೩. ವರ್ಷದ ಒಳಗಿನ ಮಕ್ಕಳಲ್ಲಿ ಶೇ. ೩೮ರಷ್ಟು ಮಕ್ಕಳ ಬೆಳವಣಿಗೆ ಕುಂಠಿತವಾಗಿದೆ. ಶೇ. ೪೬ರಷ್ಟು ಮಕ್ಕಳು ಕಡಿಮೆ ತೂಕ ಹೊಂದಿದ್ದಾರೆ. ಭಾರತದ ಪ್ರತಿ ಮೂರು ಮಹಿಳೆಯರಲ್ಲಿ ಒಬ್ಬರು ಮತ್ತು ಶೇ. ೨೮ರಷ್ಟು ಪುರುಷರು ಕಡಿಮೆ ತೂಕ ಹೊಂದಿದ್ದಾರೆ. ಪ್ರಪಂಚದ ೫ ವರ್ಷದ ಒಳಗಿನ ಕಡಿಮೆ ತೂಕದ ಮಕ್ಕಳಲ್ಲಿ ಶೇ. ೪೦ರಷ್ಟು ಮಕ್ಕಳು ಭಾರತದಲ್ಲಿದ್ದಾರೆ. ತಾಯಂದಿರ ಮರಣ ಪ್ರಮಾಣ ೪೫೦ ಇದೆ. ಹಾಗೆಯೇ ಶಿಶುಮರಣ ದರ ೬೪ರಷ್ಟಿದೆ. ಇಷ್ಟೆಲ್ಲಾ ಅವಾಂತರಗಳು ಹಸಿವಿನಿಂದಾಗುತ್ತಿವೆ.

**ಏಕೆ ಹೀಗೆ ? :** ''ಭಾರತದ ಅರ್ಥವ್ಯವಸ್ಥೆ ಇತ್ತೀಚೆಗೆ ಶೇ. ೯ರ ದರದ ಬೆಳವಣಿಗೆಯನ್ನು ದಾಖಲಿಸುತ್ತಿದೆ. ಬಂಡವಾಳ ಹೂಡಿಕೆ ಅಗಾಧವಾಗಿ ಹೆಚ್ಚುತ್ತಿದೆ. ಷೇರು ಮಾರುಕಟ್ಟೆ ಉಚ್ಛ್ರಾಯ ಸ್ಥಿತಿಯನ್ನು ತಲುಪಿದೆ. ಐ.ಟಿ. ಮತ್ತು ಬಿ.ಟಿ.ಗಳು ಅಬ್ಬರಿಸುತ್ತಿವೆ. ಭಾರತ ಪ್ರಕಾಶಿಸುತ್ತಿದೆ. ಇದೆಲ್ಲಾ ಜಾಗತೀಕರಣದ ಫಲ'' ಎಂದು ಅಧಿಕಾರಸ್ಥರು ಹಾಗೂ ನೀತಿ ನಿರೂಪಕರು ಹೆಮ್ಮೆಯಿಂದ ಬೀಗುತ್ತ ಹೇಳುತ್ತಿರುವಾಗಲೇ ಬಡತನವೆಂಬ ಭೂತ, ಹಸಿವೆಂಬ ಮಾರಿ ಒಳಗೊಳಗೇ ಕ್ಯಾನ್ಸರ್ ಹುಣ್ಣಿನಂತೆ ಆವರಿಸುತ್ತಿದೆ. ಹೀಗೇಕೆ, ಎಂಬುದು ನಮ್ಮನ್ನೆಲ್ಲಾ ಕಾಡುವ ಪ್ರಶ್ನೆ.

* ಜಾಗತೀಕರಣ ಆದಾಯದ ಭಾರಿ ಅಸಮಾನತೆಯನ್ನು ಸೃಷ್ಟಿಮಾಡಿದೆ. ಶ್ರೀಮಂತರ ಆದಾಯ ಹಲವು ಪಟ್ಟು ಹೆಚ್ಚುತ್ತಿದ್ದರೆ, ಬಡವರ ಬದುಕು ತುತ್ತು ಅನ್ನಕ್ಕೂ ಗತಿಯಿಲ್ಲದಾಗುತ್ತಿದೆ.
* ಜಾಗತೀಕರಣ ಜಾರಿಯ ನಂತರ ಅತಿ ಹೆಚ್ಚು ಜನರು ಆಶ್ರಯಿಸಿರುವ ಕೃಷಿ ಕ್ಷೇತ್ರ ಶೋಚನೀಯ ಸ್ಥಿತಿ ತಲುಪಿದೆ. ಕೃಷಿ ಉತ್ಪಾದನೆ ಕುಂಠಿತವಾಗುತ್ತಿದೆ. ಬೆಲೆ ಕುಸಿತದಿಂದ ಅನ್ನದಾತನ ನೈಜ ಆದಾಯ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದೆ. ಇದು ಬಡತನ ಮತ್ತು ಹಸಿವಿನ ನಿವಾರಣೆಗೆ ಅಡಚಣೆಯಾಗುತ್ತಿದೆ. ಕೃಷಿ ಆಶ್ರಯಿಸಿರುವ ಇತರೆ ಕಸುಬುದಾರರು ನಿರಾಶ್ರಿತರಾಗುತ್ತಿದ್ದಾರೆ.
* ಕಾರ್ಪೊರೇಟ್ ವಲಯದಲ್ಲಿ ಕೌಶಲ್ಯಹೊಂದಿದ ಕಾರ್ಮಿಕರು ಮಾತ್ರ ಉತ್ತಮ ಕೂಲಿ ಮತ್ತು ಇತರೆ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ, ನಿಜ. ಆದರೆ ಅಪಾರ ಸಂಖ್ಯೆಯಲ್ಲಿರುವ ಕೌಶಲ್ಯರಹಿತ ಹಾಗೂ ಅರೆ ಕೌಶಲ್ಯಹೊಂದಿದ ಕಾರ್ಮಿಕರ ಕೂಲಿ ಅತ್ಯಂತ ಕಡಿಮೆ ಇದ್ದು, ಕನಿಷ್ಠ ಜೀವನ ನಿರ್ವಹಣೆಗೂ ಸಾಕಾಗುತ್ತಿಲ್ಲ.
* ಶೈಕ್ಷಣಿಕ ಗುಣಮಟ್ಟ ಹಾಗೂ ಸೌಲಭ್ಯಗಳಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳ ನಡುವೆ ಅಗಾಧ ಕಂದಕ ಸೃಷ್ಟಿಯಾಗುತ್ತಿದೆ. ಇದು ಆದಾಯ ಹಾಗೂ ಅವಕಾಶ ಲಭ್ಯತೆಯಲ್ಲಿ ಅಸಮಾನತೆಯನ್ನು ಹೆಚ್ಚಿಸುತ್ತಿದೆ.
* ಕೆಲವು ಕೆಳಜಾತಿಗಳು, ಜನಾಂಗೀಯ ಅಲ್ಪಸಂಖ್ಯಾತರು ಶೈಕ್ಷಣಿಕ ಅವಕಾಶಗಳು ಮತ್ತು ಶ್ರಮ ಮಾರುಕಟ್ಟೆಯಲ್ಲಿ ತಾರತಮ್ಯಕ್ಕೆ ಗುರಿಯಾಗುತ್ತಿದ್ದಾರೆ.



* ಭಾರತದ ಕೆಲ ಭಾಗಗಳಲ್ಲಿ ಕುಟುಂಬದ ಪುರುಷರು ಮೊದಲು ಊಟ ಮಾಡುವುದು, ನಂತರ ಮಹಿಳೆಯರು ಉಳಿದದ್ದನ್ನು ಊಟ ಮಾಡುವುದು ರೂಢಿಯಲ್ಲಿದೆ. ಇದು ತಾಯಂದಿರ ಹಾಗೂ ಮಕ್ಕಳ ಅಪೌಷ್ಟಿಕತೆಗೆ ಕಾರಣವಾಗಿದೆ.
* ಇತ್ತೀಚೆಗೆ, ಸಮಾಜದ ಮಧ್ಯಮ ಮತ್ತು ಕೆಳವರ್ಗದ ಕುಟುಂಬಗಳಲ್ಲಿ ಬದುಕಿನ ಅಗತ್ಯ ವಸ್ತುಗಳಿಗೆ ಬದಲಾಗಿ ಐಷಾರಾಮದ ವಸ್ತುಗಳ ಬಯಕೆ ಹೆಚ್ಚುತ್ತಿದೆ. ಬದುಕಿನ ಮೂಲಭೂತ ಅಗತ್ಯಗಳನ್ನು ಕಡೆಗಣಿಸಲಾಗುತ್ತಿದೆ.

ಇಷ್ಟೆಲ್ಲಾ ಆದರೂ ದೇಶದ ಎಲ್ಲ ಮಕ್ಕಳಿಗೂ ಏಕರೂಪದ ಶಿಕ್ಷಣ ಮತ್ತು ಆರೋಗ್ಯ ಸೌಲಭ್ಯಗಳು ದೊರಕುವಂತಾದರೆ, ರೈತನ ಉತ್ಪನ್ನಗಳಿಗೆ ನ್ಯಾಯೋಚಿತ ಬೆಲೆ ದೊರಕಿಸಿಕೊಡುವ ವ್ಯವಸ್ಥೆ ಜಾರಿಗೆ ತಂದು, ಅರ್ಥವ್ಯವಸ್ಥೆಯ ಬೆನ್ನೆಲುಬಾದ ಕೃಷಿಗೆ ಭದ್ರತೆಯೊದಗಿಸಿದರೆ, ಅಸಂಘಟಿತ ಕಾರ್ಮಿಕ ವಲಯಕ್ಕೆ ನ್ಯಾಯೋಚಿತ ಸೌಲಭ್ಯಗಳು ದೊರಕುವಂತಾದರೆ, ಮಾನವ ಮತ್ತು ನಿಸರ್ಗ ಸಂಪನ್ಮೂಲಗಳನ್ನು ದಕ್ಷವಾಗಿ ಬಳಸಿಕೊಳ್ಳುವಂತಾದರೆ ಭಾರತ ಜಾಗತಿಕ ಸ್ಪರ್ಧೆಯನ್ನು ಎದುರಿಸುವಂತಾಗಿ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಸುಧಾರಿಸಬಹುದು. ಇಲ್ಲದಿದ್ದರೆ ಅತಿದೊಡ್ಡ ಕೃಷಿದೇಶ ಅನ್ನಕ್ಕಾಗಿ ಅನ್ಯದೇಶಗಳ ಮುಂದೆ ಕೈಚಾಚಿ ನಿಲ್ಲಬೇಕಾಗಬಹುದು.

ಜಿ. ಎಸ್. ಕೆಂಪಯ್ಯ
ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು
ದಂಡಿನಶಿವರ, ತುರುವೇಕೆರೆ ತಾಲ್ಲೂಕು, ತುಮಕೂರು ಜಿಲ್ಲೆ



ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅನನ್ಯ ಕೊಡುಗೆ, ಅನೇಕ ಜನಪರ ಹೋರಾಟಗಳಿಗೆ ಮುಂದಾಳತ್ವ, ಪ್ರಗತಿಪರ ವಿಚಾರಧಾರೆ, ರಾಜಿ ಮಾಡಿಕೊಳ್ಳದಂತಹ ಸೈದ್ಧಾಂತಿಕ ಗಟ್ಟಿತನ, ಇತ್ಯಾದಿ ವಿಶೇಷ ಗುಣಗಳ ಆಗರವಾಗಿದ್ದ ಶ್ರೀ ಶಾಂತರಸ ಅವರು ಏಪ್ರಿಲ್ ೧೩ರಂದು ಕಾಲಾತೀತರಾದರು. 'ಹೊಸತು' ಆರಂಭದ ದಿನಗಳಿಂದ ಪತ್ರಿಕೆಯನ್ನು ಪೋಷಿಸುವುದರಲ್ಲಿ ಮತ್ತು ಪ್ರಚಾರ ಮಾಡುವಲ್ಲಿ ಶಾಂತರಸರು ಆಸಕ್ತಿ ವಹಿಸಿದ್ದರು. ಅವರ ಕೆಲವು ಲೇಖನಗಳು, ಗಝಲ್‌ಗಳು ಮತ್ತು ಪತ್ರಗಳು ಪತ್ರಿಕೆಯಲ್ಲಿ ಬೆಳಕು ಕಂಡಿದ್ದವು.

'ಉರಿದ ಬದುಕು' ಎಂಬ ಅವರ ಕಥಾಸಂಕಲನವನ್ನು ನವಕರ್ನಾಟಕ ಪ್ರಕಾಶನವು ಹೊರತರಲು ಸಹಕಾರ ನೀಡಿದ್ದ ಮಾನ್ಯ ಶಾಂತರಸರು ಖ್ಯಾತ ವಿಚಾರವಾದಿಗಳು, 'ಹೊಸತು' ಮತ್ತು ನವಕರ್ನಾಟಕ ಪ್ರಕಾಶನ ಶ್ರೀ ಶಾಂತರಸರಿಗೆ ವಿನಮ್ರ ಗೌರವ ಸಲ್ಲಿಸುತ್ತವೆ.

### ವಾಲ್ಮೀಕಿಗೆ ಮೊದಲೇ ಕಥೆ ಇತ್ತು

ಆದರ್ಶ ರಾಜನಾದವನು ಹೇಗಿರಬೇಕೆಂಬ ಬಗ್ಗೆ ಹಲವು ಕಲ್ಪನೆಗಳಿದ್ದು ಆ ಕಲ್ಪನೆಗಳಂತೆ ರಾಮನೆಂಬ ಕಥಾನಾಯಕನ ಪಾತ್ರವನ್ನು ಹಲವು ಬಗೆಯಾಗಿ ಚಿತ್ರಿಸಿದ ಮತ್ತು ಲಿಖಿತ ರೂಪದಲ್ಲಿರದ ಹಲವು ರಾಮಕಥೆಗಳಿದ್ದುವು ಎಂದು ರಾಮಾಯಣ ಕುರಿತು ಅಧ್ಯಯನ ನಡೆಸಿದ ಮೇಧಾವಿಗಳ ಮತ. ರಾಮಪೂಜಕರ ಪರಂಪರೆ ಯಂತೆಯೂ ಕಥೆ ವಾಲ್ಮೀಕಿಗೆ ಮೊದಲೇ ಇತ್ತು. ರಾಮಾಯಣವನ್ನು ಸ್ತುತಿಸುವ ಹಲವು ಸ್ತೋತ್ರಗಳಿದ್ದು ಅವುಗಳ ಪೈಕಿ ಬುಧಕೌಶಿಕ ಮುನಿ ರಚಿಸಿದ ರಾಮರಕ್ಷಾ ಸ್ತೋತ್ರದಲ್ಲಿನ ಒಂದು ಪ್ರಮುಖ ಶ್ಲೋಕ ಹೀಗಿದೆ:

ಕೂಜಂತಮ್ ರಾಮ ರಾಮೇತಿ ಮಧುರಮ್ ಮಧುರಾಕ್ಷರಮ್
ಆರುಹ್ಯ ಕವಿತಾ ಶಾಖಾಮ್ ವಂದೇ ವಾಲ್ಮೀಕಿ ಕೋಕಿಲಮ್

ಎಂದರೆ ರಾಮಾಯಣವೆಂಬ ವೃಕ್ಷದ ರೆಂಬೆಯೊಂದರ ಮೇಲೆ ಕುಳಿತು ಅತಿಮಧುರವಾದ ರಾಮನಾಮವನ್ನು ಜಪಿಸುತ್ತಿರುವ ವಾಲ್ಮೀಕಿ ಎಂಬ ಕೋಗಿಲೆಗೆ ವಂದಿಸುತ್ತೇನೆ. ಕೋಗಿಲೆಗಿಂತ ಮೊದಲೇ ಮರ ಇತ್ತು, ಎಂದರೆ ವಾಲ್ಮೀಕಿಗೆ ಮೊದಲೇ ಕಥೆ ಇತ್ತು. ಕೆಲವು ವರ್ಷಗಳಿಂದ ಅಶ್ವಯುಜ ಪೌರ್ಣಮಿಯನ್ನು (ಅಕ್ಟೋಬರ್ ೧೪, ೨೦೦೮) ಪಂಚಾಂಗಗಳಲ್ಲಿ ವಾಲ್ಮೀಕಿ ಜಯಂತಿ ಎಂದು ಗುರ್ತಿಸಲಾಗುತ್ತಿದೆ. ಇದಕ್ಕೆ ಆಧಾರವೇನೆಂದು ತಿಳಿಯದು. ಇವರಿಗೆ ಅವನು ಯಾವ ಕಾಲದವನು ಎಂಬುದು ಗೊತ್ತಿಲ್ಲ. ಅಷ್ಟೇಕೆ? ಇತ್ತೀಚಿನವನೆನ್ನಲಾದ ಕಾಳಿದಾಸನ ಕಾಲದ ಬಗ್ಗೆ ಸಹ ವಿವಾದಗಳಿವೆ.

ಪ್ರಾಚೀನ ಸಂಸ್ಕೃತ ಕೃತಿಗಳ ಕುರಿತ ಯಾವುದೇ ಗಂಭೀರ ಚರ್ಚೆಯಲ್ಲಿ ಪಾಶ್ಚಾತ್ಯ ಸಂಶೋಧಕರಾದ ಮಾರಿಸ್ ವಿಂಟರ್‌ನಿಟ್ಜ್ ಮತ್ತು ಎ. ಬಿ. ಕೀಥ್‌ರವರ ಹೆಸರುಗಳು ಬಾರದಿರದು. ಇವರಿಬ್ಬರೂ ವಾಲ್ಮೀಕಿ ಕ್ರಿ. ಪೂ. ಮೂರನೇ ಶತಮಾನದವನೆಂದು ನಿರ್ಣಯಿಸಿದ್ದಾರೆ. ಭಾರತೀಯ ಪಂಡಿತರು ಇವರನ್ನು ಉಲ್ಲೇಖಿಸುತ್ತಾರೆಯೇ ಹೊರತು ತಮ್ಮದೇ ಸ್ವತಂತ್ರ ಸಂಶೋಧನೆ ಮಾಡಿಲ್ಲ, ಎಂದರೆ ವಾಲ್ಮೀಕಿ ರಾಮಾಯಣ ಭಗವಾನ್ ಬುದ್ಧರ ಕಾಲದ ನಂತರದ್ದು ಎಂಬುದನ್ನು ಈ ಲೇಖನದ ಮುಂದಿನ ಭಾಗದಲ್ಲಿ ವಿವರಿಸಿದ್ದೇನೆ. ಈ ವಿಶ್ಲೇಷಣೆಯಿಂದ ಕೋಪಿಸಿಕೊಳ್ಳುವವರೂ ಉಂಟು.

### ಹಲವಾರು ರಾಮಕಥೆಗಳು

ಬುದ್ಧ ಮತ್ತು ಮಹಾವೀರರು ಸಮಕಾಲೀನರು. ಇವರು ಸ್ಥಾಪಿಸಿದ ಅವೈದಿಕಮತಗಳಿಗೆ ಅಲ್ಲಿ



# ರಾಮಾಯಣ ನಿಜ ಭ್ರಮೆ ಎಷ್ಟು?

■ ಪಿ. ಎಸ್. ಶ್ರೀಧರಮೂರ್ತಿ



ಒಬ್ಬ ಮಾನವ ಸಹಜ ಗುಣಗಳನ್ನು ಹೊಂದಿದ್ದ, ಆದರೆ ಕೆಲವೊಂದು ಮೌಲ್ಯಗಳಿಗೂ ಕಟ್ಟುಪಾಡುಗಳಿಗೂ ಬದ್ಧನಾಗಿದ್ದವನು ಎಂದು ರಾಮನನ್ನು ಪರಿಗಣಿಸಿದಾಗಲೇ ರಾಮಾಯಣದ ಸೊಗಸನ್ನು ಸವಿಯಲು ಸಾಧ್ಯ ಎಂದು ರಾಮಾಯಣ ಕುರಿತ ಇಂಗ್ಲಿಷ್ ಪ್ರವಚನಗಳಿಗೆ ಹೆಸರಾಗಿದ್ದ ವಿ. ಎಸ್. ಶ್ರೀನಿವಾಸ ಶಾಸ್ತ್ರಿಗಳು ಒತ್ತಿಹೇಳುತ್ತಿದ್ದರು. ಅವರ ಇಂಗ್ಲಿಷ್ ವಾಗ್ವೈಖರಿಗೆ ಮನಸೋತ ಬ್ರಿಟಿಷರು ಅವರನ್ನು ಸಿಲ್ವರ್ ಟಂಗ್ ಎಂದು ಕರೆಯುತ್ತಿದ್ದರು. ರೈಟ್ ಆನರಬಲ್ ಎಂಬ ಬಿರುದನ್ನೂ ನೀಡಿದ್ದರು. ರಾಮ ಕ್ಷತ್ರಿಯ. ವಾಲ್ಮೀಕಿ ರಾಮಾಯಣದ ಪ್ರಕಾರ ರಾಮ ಮಾಂಸಾಹಾರವನ್ನು ಸೇವಿಸುತ್ತಿದ್ದುದುಂಟು. ಖ್ಯಾತ ಕನ್ನಡ ಸಾಹಿತಿ ಮಾಸ್ತಿ ವೆಂಕಟೇಶ ಅಯ್ಯಂಗಾರರು ಅವನ ಮಾಂಸಾಹಾರ ಪ್ರಿಯತೆಯನ್ನು ೧೯೨೨ರಷ್ಟು ಹಿಂದೆಯೇ ಬರೆದ 'ವಾಲ್ಮೀಕಿ' ಎಂಬ ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ.

ಚಾತುರ್ವರ್ಣ್ಯದ ಕ್ರೂರ ಕಟ್ಟಳೆಗಳಿಲ್ಲದ ಕಾರಣ ಜನ ಆಕರ್ಷಕರಾಗಿ, ವೈದಿಕ ಧರ್ಮದ ಪ್ರಭಾವ ಕುಗ್ಗಿ ಯಜ್ಞ, ಯಾಗ, ಹವನ, ಹೋಮಗಳ ಪ್ರಾಶಸ್ತ್ಯ ಕಳೆದುಹೋಗಿದ್ದ ಕಾಲದಲ್ಲಿ, ವರ್ಗ-ವರ್ಣಗಳ ಭೇದವಿಲ್ಲದೆ ಅವರವರ ಪ್ರತಿಭೆ, ಸಾಧನೆಗಳನ್ನಾಧರಿಸಿ ವೈದಿಕ ವ್ಯವಸ್ಥೆಯಲ್ಲಿ ಮಾನ್ಯತೆ ಉಂಟೆಂಬ ಸಂದೇಶ ಸಾರುವುದು ಅನಿವಾರ್ಯವಾಯಿತು. ಈ ಸಂದಿಗ್ಧ ಸನ್ನಿವೇಶದಲ್ಲಿ ಮತ್ತು ಸಂದರ್ಭದಲ್ಲಿ ಜಾನಪದದಲ್ಲಿ ಪ್ರಚಲಿತವಿದ್ದ ರಾಮಕಥೆಯನ್ನು ಜೈನರೂ ಬೌದ್ಧರೂ ತಮ್ಮ ತಮ್ಮ ಸಿದ್ಧಾಂತ, ನಂಬಿಕೆಗಳಿಗೆ ಮಾನ್ಯತೆ ದೊರಕಿಸಿಕೊಳ್ಳಲು ಬಳಸಿಕೊಂಡಿದ್ದರು. ಅಂತೆಯೇ ವೈದಿಕರೂ ತಮ್ಮ ನಿಲುವು, ಸಿದ್ಧಾಂತಗಳಿಗೆ ತಕ್ಕಂತೆ ರಾಮಕಥೆಯನ್ನು ಮಾರ್ಪಡಿಸಿಕೊಂಡರು ಎಂದು ಡಾ॥ ಸುಕುಮಾರ್ ಸೇನರೂ, ಆಂಧ್ರ ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರ್ ದಿ॥ ಕೆ. ಆರ್. ಶ್ರೀನಿವಾಸ ಅಯ್ಯಂಗಾರರೂ, ಧಾರವಾಡದ ಸಿದ್ಧಾಂತಾಚಾರ್ಯ ಕೆ. ಭುಜಬಲಿ ಶಾಸ್ತ್ರಿಗಳೂ ವಿಶ್ಲೇಷಿಸಿದ್ದಾರೆ. ಶಾಸ್ತ್ರಿಗಳು ೧೯೫೧ರಲ್ಲಿ ಪದ್ಮಪುರಾಣವನ್ನು ಪರಿಷ್ಕರಿಸಿ ಪ್ರಕಟಿಸಿದರು. ಈ ರಾಮಕಥೆಯಲ್ಲಿ ರಾಮನಿಗೆ ಪದ್ಮನೆಂಬ ಹೆಸರೂ ಇದೆ.

'ಅಭಿಧಮ್ಮವಿಭಾಷಾ' ಎಂಬ ಬೌದ್ಧ ಗ್ರಂಥದಲ್ಲಿ ರಾಮಕಥೆ ಸಾವಿರದ ಇನ್ನೂರು ಶ್ಲೋಕಗಳಲ್ಲಿ ಹೇಳಲ್ಪಟ್ಟಿದೆ. ಜೈನರದೇ ಆದ ಬೇರೆ ಬೇರೆ ರೀತಿಯಲ್ಲಿರುವ ಆರು ರಾಮಕಥೆಗಳಿವೆ. ರವಿಷೇಣ, ಹೇಮಚಂದ್ರ, ವಿಮಲಸೂರಿ, ಸ್ವಯಂಭು, ಗುಣಭದ್ರ, ಮತ್ತು ಪುಷ್ಪದಂತ, ಇವನ್ನು ರಚಿಸಿದ ಕವಿಗಳು. ಇವುಗಳಲ್ಲಿ ಪ್ರಮುಖವಾದುದು ಆಚಾರ್ಯ ರವಿಷೇಣರು ಸಂಸ್ಕೃತದಲ್ಲಿ ಬರೆದ 'ಪದ್ಮಪುರಾಣಂ'. ಕೆಲವು ಕಥೆಗಳಲ್ಲಿ ಸೀತೆ ರಾಮನ ತಂಗಿ; ಕಲವೆಡೆ ಅವಳು ರಾವಣನ ಮಗಳು. ಎಲ್ಲ ರಾಮಕಥೆಗಳಿಗೂ ವಾಲ್ಮೀಕಿ ರಾಮಾಯಣವೇ ಮೂಲವಲ್ಲ. ವೈದಿಕ ಪರಂಪರೆಯನ್ನು ಎತ್ತಿಹಿಡಿದ ಮೊಟ್ಟಮೊದಲ ಶ್ರೇಷ್ಠ ಸಂಸ್ಕೃತ ರಾಮಾಯಣ ಎಂಬ ಕಾರಣಕ್ಕಾಗಿ ವೈದಿಕರಿಗೆ ವಾಲ್ಮೀಕಿ ರಾಮಾಯಣ ಆದಿಕಾವ್ಯ ಎನಿಸಿತು. ಈ ಕೃತಿಯನ್ನು ವೈದಿಕ ಪರಂಪರೆಗೆ ಸೇರಿದ ಚ್ಯವನ ಮಹರ್ಷಿ ಮೊದಲು ಬರೆದನೆಂತಲೂ ಅನಂತರ ಇದನ್ನು ವಾಲ್ಮೀಕಿ ಪರಿಷ್ಕರಿಸಿದನೆಂತಲೂ ಒಂದು ವಾದವಿದ್ದು ಆ ಬಗ್ಗೆ ಖ್ಯಾತ ವಿಮರ್ಶಕರೂ, ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯರೂ ಆಗಿದ್ದ ಡಾ॥ ಸುನೀತಿ ಕುಮಾರ್ ಚಟರ್ಜಿ ದೀರ್ಘವಾಗಿ ಚರ್ಚಿಸಿದ್ದಾರೆ. ವಾಲ್ಮೀಕಿಯ ನಂತರವೂ ವೈದಿಕ ಪರಂಪರೆಯಲ್ಲಿ ಹಲವು ಕೃತಿಗಳು ಬಂದಿವೆ. ಹೀಗೆ ಬಂದ ಮೊದಲ ಕೃತಿಯ ಹೆಸರು ರಾಘವಚರಿತ.

**ರಾಜಾಜಿ ಹೇಳಿರುವುದೇನು ?**

ರಾಮನ ಐತಿಹಾಸಿಕತೆಯನ್ನು ಪ್ರಶ್ನಿಸುವವರಿಗೆ ಮತ್ತು ರಾಮನಲ್ಲಿ ದೋಷಗಳನ್ನು ಹುಡುಕುವವರಿಗೆ ಪರಂಪರೆಯ ಅರಿವು ಇಲ್ಲವೆಂದೂ, ಸ್ವಾಭಿಮಾನ ಶೂನ್ಯರಾದ ತಿಳಿಗೇಡಿಗಳೆಂದೂ, ಅವರೆಲ್ಲ ದೇಶಾಭಿಮಾನವಿಲ್ಲದ ಎಡಪಂಥೀಯರೆಂದೂ ಮಾಧ್ಯಮಗಳಲ್ಲಿ ಖಂಡನೆ ನಡೆದಿದೆ. ಇಪ್ಪತ್ತನೇ ಶತಮಾನದಲ್ಲಿ ರಚಿಸಲ್ಪಟ್ಟ ರಾಮಾಯಣ ಕುರಿತ ಕೃತಿಗಳಲ್ಲೆಲ್ಲ ಅತ್ಯಂತ ಜನಪ್ರಿಯವೆನಿಸಿದ ಮತ್ತು ಅತಿ ಹೆಚ್ಚಿನ ಭಾಷಾಂತರಗಳನ್ನೂ ಪುನರ್ಮುದ್ರಣಗಳನ್ನೂ ಕಂಡ ತಮ್ಮ ಕೃತಿಯಲ್ಲಿ ರಾಜಾಜಿಯವರು, ''ರಾಮಾಯಣವನ್ನು ಇತಿಹಾಸವೆಂದಾಗಲಿ ಜೀವನ ಚರಿತ್ರೆ ಎಂದಾಗಲಿ ತಿಳಿಯಬಾರದು; ಅದು ಪುರಾಣ ವಾಙ್ಮಯದ (ಮೈಥಾಲಜಿ) ಒಂದು ಭಾಗವಷ್ಟೆ... ವಾಲ್ಮೀಕಿಯ ಕಾವ್ಯದಲ್ಲಿ ರಾಮನನ್ನು ಒಬ್ಬ ಶ್ರೇಷ್ಠ ಮತ್ತು ಆದರ್ಶ ವ್ಯಕ್ತಿಯಾಗಿ ಚಿತ್ರಿಸಲಾಗಿದೆಯೇ ಹೊರತು ದೇವರ ಅವತಾರವಾಗಿರಲಿಲ್ಲ'' ಎಂದಿದ್ದಾರೆ.




ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ ಶ್ರೀ ಸುಗತ ಶ್ರೀನಿವಾಸರಾಜು ರಚಿಸಿರುವ 'ಕೀಪಿಂಗ್ ಫೇಯ್ತ್ ವಿಥ್ ದಿ ಮದರ್‌ಟಂಗ್' ಇಂಗ್ಲಿಷ್ ಕೃತಿಯ ಲೋಕಾರ್ಪಣೆ ಸಮಾರಂಭ ೨೯ ಮಾರ್ಚ್ ೨೦೦೮ರಂದು ಬೆಂಗಳೂರಿನ ಚಿತ್ರಕಲಾ ಪರಿಷತ್ ಆವರಣದಲ್ಲಿ ನಡೆಯಿತು. ಬ್ರಿಟಿಷ್ ಲೇಖಕ ಮತ್ತು ಅಂಕಣಕಾರ ಜೆರೆಮಿ ಸೀಬ್ರೂಕ್ ಪುಸ್ತಕ ಅನಾವರಣಗೊಳಿಸಿದರು. ತಮಿಳು ಲೇಖಕ ಅಶೋಕ ಮಿತ್ರನ್ ಮತ್ತು ಯುನೆಸ್ಕೋಗೆ ಭಾರತದ ಮಾಜಿ ರಾಯಭಾರಿ ಚಿರಂಜೀವಿ ಸಿಂಗ್ ಮುಖ್ಯ ಅತಿಥಿಗಳಾಗಿದ್ದರು. ಭಾರತೀಯ ಇತಿಹಾಸ ಸಂಶೋಧನಾ ಮಂಡಳಿಯ ಮಾಜಿ ಅಧ್ಯಕ್ಷ ಪ್ರೊ॥ ಎನ್. ಶೆಟ್ಟರ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಲೇಖಕ ಸುಗತ ಶ್ರೀನಿವಾಸರಾಜು, ನವಕರ್ನಾಟಕದ ಶ್ರೀ ಆರ್. ಎಸ್. ರಾಜಾರಾಮ್ ಮತ್ತು ಶ್ರೀ ಸಿ. ಆರ್. ಕೃಷ್ಣರಾವ್ ಹಾಗೂ ಸಾಹಿತ್ಯಾಸಕ್ತರು ಭಾಗವಹಿಸಿದ್ದರು.

ರಾಮಾಯಣದ ಕಥೆ ವಾಲ್ಮೀಕಿಯ ಸೃಷ್ಟಿ ಅಲ್ಲವೆಂದು ರಾಜಾಜಿ ಸಹ ಹೇಳಿದ್ದಾರೆ. ಜನಪದದಿಂದ ವಾಲ್ಮೀಕಿ ಕಥೆಯನ್ನು ಸಂಗ್ರಹಿಸಿದನೆಂದೂ, ನಾರದನಿಂದ ವಾಲ್ಮೀಕಿಗೆ ಕಥೆ ತಿಳಿಯಿತೆಂದೂ, ಜತೆಗೆ ಚತುರ್ಮುಖ ಬ್ರಹ್ಮನು ವಾಲ್ಮೀಕಿಗೆ ಈ ಕಥಾಜ್ಞಾನವನ್ನು ಆಶೀರ್ವದಿಸಿದನೆಂದೂ ರಾಜಾಜಿ ಬರೆದಿದ್ದಾರೆ. ಗರ್ಭಿಣಿ ಸೀತೆಯನ್ನು ರಾಮ ಅಡವಿ ಪಾಲು ಮಾಡಿದ ಬಗ್ಗೆ ಬರೆಯುತ್ತ, ''...ನನ್ನ ಮನಸ್ಸು ಈ ಕೃತ್ಯವನ್ನು ಪ್ರತಿಭಟಿಸುತ್ತದೆ; ...ಇದು ನಮ್ಮ ಮಹಿಳೆಯರ ನಿರಂತರ ಹಾಗೂ ಅನಿವಾರ್ಯ ಕಾರ್ಪಣ್ಯವನ್ನು ಪ್ರತಿಬಿಂಬಿಸುತ್ತದೆ'' ಎಂದಿದ್ದಾರೆ.

ಎಲ್ಲ ಮಾನವ ಸಹಜ ಗುಣಗಳನ್ನು ಹೊಂದಿದ್ದ, ಆದರೆ ಕೆಲವೊಂದು ಮೌಲ್ಯಗಳಿಗೂ ಕಟ್ಟುಪಾಡುಗಳಿಗೂ ಬದ್ಧನಾಗಿದ್ದವನು ಎಂದು ರಾಮನನ್ನು ಪರಿಗಣಿಸಿದಾಗಲೇ ರಾಮಾಯಣದ ಸೊಗಸನ್ನು ಸವಿಯಲು ಸಾಧ್ಯ ಎಂದು ರಾಮಾಯಣ ಕುರಿತ ಇಂಗ್ಲಿಷ್ ಪ್ರವಚನಗಳಿಗೆ ಹೆಸರಾಗಿದ್ದ ವಿ. ಎಸ್. ಶ್ರೀನಿವಾಸ ಶಾಸ್ತ್ರಿಗಳು ಒತ್ತಿ ಹೇಳುತ್ತಿದ್ದರು. ಅವರ ಇಂಗ್ಲಿಷ್ ವಾಗ್ವೈಖರಿಗೆ ಮನಸೋತ ಬ್ರಿಟಿಷರು ಅವರನ್ನು ಸಿಲ್ವರ್ ಟಂಗ್ ಎಂದು ಕರೆಯುತ್ತಿದ್ದರು. ರೈಟ್ ಆನರಬಲ್ ಎಂಬ ಬಿರುದನ್ನೂ ನೀಡಿದ್ದರು. ರಾಮ ಕ್ಷತ್ರಿಯ, ವಾಲ್ಮೀಕಿ ರಾಮಾಯಣದ ಪ್ರಕಾರ ರಾಮ ಮಾಂಸಾಹಾರವನ್ನು ಸೇವಿಸುತ್ತಿದ್ದುದುಂಟು. ಖ್ಯಾತ ಕನ್ನಡ ಸಾಹಿತಿ ಮಾಸ್ತಿ ವೆಂಕಟೇಶ ಅಯ್ಯಂಗಾರರು ಅವನ ಮಾಂಸಾಹಾರ ಪ್ರಿಯತೆಯನ್ನು ೧೯೨೨ರಷ್ಟು ಹಿಂದೆಯೇ ಬರೆದ 'ವಾಲ್ಮೀಕಿ' ಎಂಬ ತಮ್ಮ ಗ್ರಂಥದಲ್ಲಿ ವಿವರಿಸಿದ್ದಾರೆ. ವಾಲ್ಮೀಕಿಯ ರಾಮ ಮದ್ಯ (ಸೋಮರಸ ಇತ್ಯಾದಿ) ಸೇವಿಸುತ್ತಿದ್ದುದಾಗಿ, ರಾಮಾಯಣ ಕುರಿತು ಎರಡು ವಿಶ್ಲೇಷಣಾತ್ಮಕ ಗ್ರಂಥಗಳನ್ನು ಬರೆದ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯರೂ, ಆಂಧ್ರಪ್ರಭ ದಿನ ಪತ್ರಿಕೆಯ ಸಂಪಾದಕರೂ ಆಗಿದ್ದ ದಿ॥ ನಾರ್ಲ ವೆಂಕಟೇಶ್ವರ ರಾಯರು ತಮ್ಮ ಗ್ರಂಥದಲ್ಲಿ ವಿವರಿಸಿದ್ದಾರೆ. ಅವರ ಒಂದು ಗ್ರಂಥಕ್ಕೆ ಅಕಾಡೆಮಿಯ ಪ್ರಶಸ್ತಿಯೂ ಲಭಿಸಿದೆ.

ಚೆನ್ನೈನ ಸಂಸ್ಕೃತ ಕಾಲೇಜಿನ ದಿ॥ ಪ್ರೊ॥ ಸಿ. ಆರ್. ಶ್ರೀನಿವಾಸ ಅಯ್ಯಂಗಾರರು ವಾಲ್ಮೀಕಿ ರಾಮಾಯಣವನ್ನು ತಮಿಳಿಗೆ ಭಾಷಾಂತರಿಸಿ ೧೯೫೫ರಷ್ಟು ಹಿಂದೆಯೇ ಎರಡು ಸಲ ಪ್ರಕಟಿಸಿದ್ದರು. ಸೀತೆ ರಾಮನ ಪಟ್ಟದ ರಾಣಿಯಾಗಿದ್ದಳು. ಆದರೆ ಅವನಿಗೆ ಇತರ ಪತ್ನಿಯರೂ ಇದ್ದರು. ವಾಲ್ಮೀಕಿ ರಾಮಾಯಣದಲ್ಲಿ 'ರಾಮನ ಪತ್ನಿಯರು' ಎಂಬ ಮಾತು ಹಲವೆಡೆ ಉಂಟೆಂದು ಇವರು ಬರೆದಿದ್ದಾರೆ. ಇದೇ ಮಾತು ನಾರ್ಲರವರ ಗ್ರಂಥದಲ್ಲೂ ಬಂದಿದೆ. ಈ ಮೇಧಾವಿಗಳ್ಯಾರೂ ಎಡಪಂಥೀಯರಲ್ಲ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

## ವಾಲ್ಮೀಕಿಯರ ಕಾಲ

'ಪ್ರಾಚೀನ' ಇತಿಹಾಸದ ಮೂರು ಆಧಾರಗಳೆಂದರೆ ಶಿಲಾಶಾಸನಗಳು (ಎಪಿಗ್ರಫಿ), ಓಲೆಗರಿಗಳು (ಪೇಲಿಯಾಗ್ರಫಿ) ಮತ್ತು ನಾಣ್ಯಗಳು (ನೂಮಿಸ್‌ಮ್ಯಾಟಿಕ್ಸ್). ಈವರೆಗೆ ಲಭಿಸಿರುವ ಅತ್ಯಂತ ಪ್ರಾಚೀನ ಓಲೆಗರಿಗಳೆಂದರೆ ಅಶೋಕನ ಕಾಲದವು. ಎಂದರೆ ಕ್ರಿ. ಪೂ. ಮೂರನೇ ಶತಮಾನದವು. ಅದಕ್ಕೂ ಪೂರ್ವದಲ್ಲಿ ಓಲೆಗರಿಗಳನ್ನು ಬರಹಕ್ಕೆ ಬಳಸುವ ವಿದ್ಯೆ ತಿಳಿದಿರಲಿಲ್ಲವೆಂದು ಇತಿಹಾಸಜ್ಞರ ಅಭಿಮತ. ವಾಲ್ಮೀಕಿಯೇ ಬರೆದಿರಬಹುದಾದ ಓಲೆಗರಿಗಳು ಎಲ್ಲೂ ಲಭ್ಯವಿಲ್ಲ. ಕ್ರಿ.ಪೂ. ಮೂರನೇ ಸಹಸ್ರಮಾನದಲ್ಲಿ (ಮಿಲೆನಿಯಮ್) ಎಂದರೆ ಕ್ರಿ. ಪೂ. ೩೦೦೦ದಿಂದ ೨೦೦೦ ವರ್ಷಗಳ ಕಾಲಾವಧಿಯಲ್ಲಿ ಅಭಿಜಾತ ಸಂಸ್ಕೃತ ಭಾಷೆ ಇನ್ನೂ ಅಸ್ತಿತ್ವಕ್ಕೆ ಬಂದಿರಲಿಲ್ಲ. ಪ್ರಾಕೃತ, ಪಾಳಿ, ಕನ್ನಡ, ತಮಿಳು ಮೊದಲಾದ ದ್ರಾವಿಡ ಭಾಷೆಗಳು ಭಾರತದಲ್ಲೂ, ಅರಬ್ಬಿ, ಪರ್ಶಿಯನ್ ಭಾಷೆಗಳು ಆರ್ಯರ ನೆಲೆಯಾಗಿದ್ದ ಮಧ್ಯ ಏಷ್ಯಾದಲ್ಲೂ ರೂಢಿಯಲ್ಲಿದ್ದಿರಬೇಕು. ಆ ಭಾಷೆಗಳು ಆಗಿನ ಭಾರತೀಯ ಭಾಷೆಗಳೊಡನೆ ಸಂಪರ್ಕ ಪಡೆದಾಗ ಆ ಸಂಸ್ಕಾರದಿಂದ ಭಾರತದಲ್ಲಿ ಹುಟ್ಟಿದ, ಸಂಸ್ಕರಿಸಲ್ಪಟ್ಟ-ಪರಿಷ್ಕರಿಸಲ್ಪಟ್ಟ ಭಾಷೆಯೇ ಅಭಿಜಾತ ಸಂಸ್ಕೃತ. ಯಾವುದೇ ಕಾಲಘಟ್ಟದಲ್ಲೂ ಸಂಸ್ಕೃತ ಜನಸಾಮಾನ್ಯರ ಭಾಷೆಯಾಗಿದ್ದುದಿಲ್ಲ.

ಸಂಸ್ಕೃತದ ಉಗಮ ಮತ್ತು ಬೆಳವಣಿಗೆಗಳ ಆಳ ಅಧ್ಯಯನ ನಡೆಸಿದ ಪ್ರೊ॥ ಹಾಪ್ಕಿನ್ಸ್ ಮತ್ತು ಹರ್ಮನ್ ಯಾಕೋಬಿ ಎಂಬ ಜರ್ಮನಿಯ ಸಂಶೋಧಕರು ವಾಲ್ಮೀಕಿ ರಾಮಾಯಣದ ಭಾಷೆಯ ಪ್ರಬುದ್ಧತೆ, ಸರಳತೆಗಳನ್ನು ಅಭ್ಯಸಿಸಿ, ಅವನ ಕೃತಿ, ಸಂಸ್ಕೃತ ಭಾಷೆಯ ಬೆಳವಣಿಗೆ ಪರಿಪಕ್ವತೆಯನ್ನು ಮುಟ್ಟಿದ ಕಾಲದಲ್ಲಿ ರಚನೆಯಾಗಿದ್ದಿರಬೇಕು ಎಂದು ನಿರ್ಣಯಿಸಿದ್ದಾರೆ.

## ಮೂರು ಪಾಠಗಳು

ವಾಲ್ಮೀಕಿ ರಾಮಾಯಣ ರಾಮಪಟ್ಟಾಭಿಷೇಕದೊಡನೆ ಮುಕ್ತಾಯಗೊಂಡಿದ್ದು, ಇಡೀ ಉತ್ತರಕಾಂಡ ಅನಂತರ ಸೇರಿಸಲ್ಪಟ್ಟಿತು ಎಂಬ ಬಗ್ಗೆ ವಿದ್ವಾಂಸರಲ್ಲಿ ಭಿನ್ನಮತವಿಲ್ಲ. ಹೀಗೆ ಸೇರಿಸಲ್ಪಟ್ಟ ಭಾಗಕ್ಕೆ ಪ್ರಕ್ಷಿಪ್ತ (ಇಂಟರ್‌ಪೋಲೇಶನ್) ಎನ್ನುತ್ತಾರೆ. ಹಲವು ವಿದ್ವಾಂಸರ ಪ್ರಕಾರ ಇಡೀ ಬಾಲಕಾಂಡವೂ ಪ್ರಕ್ಷಿಪ್ತವೇ. ಉತ್ತರಕಾಂಡದ ಕಥೆಯನ್ನು ನಿರೂಪಿಸುವ ಪ್ರಮುಖ ಕೃತಿ ಎಂದರೆ ಭವಭೂತಿಯ ಉತ್ತರರಾಮ ಚರಿತ. ವಾಲ್ಮೀಕಿ ರಾಮಾಯಣ ಎಂದೇ ತಿಳಿಯಲ್ಪಟ್ಟಿರುವ ಬೇರೆ ಬೇರೆ ಪಠ್ಯಗಳಿವೆ. ವಿಂಧ್ಯಪರ್ವತದ ದಕ್ಷಿಣ ಭಾಗದಲ್ಲಿ ಪ್ರಚಲಿತವಿರುವ ಪಠ್ಯವನ್ನು ಕಟಕ ಎಂಬಾತನು ಪರಿಷ್ಕರಿಸಿದ. ಇದಕ್ಕೆ ದಾಕ್ಷಿಣಾತ್ಯ ಪಾಠ ಮತ್ತು ಮುಂಬೈ ಪಾಠ (ಬಾಂಬೆ ಟೆಕ್ಸ್ಟ್) ಎಂಬ ಹೆಸರುಗಳಿವೆ. ವಿಂಧ್ಯದ ಆಚೆ ಪೂರ್ವೋತ್ತರ ಭಾಗದಲ್ಲಿ ಪ್ರಚಲಿತವಿರುವ ಪಾಠಕ್ಕೆ ಬಂಗಾಳಿ ಪಾಠ ಮತ್ತು ಗೌಡೀಯ ಪಾಠವೆಂಬ ಹೆಸರುಗಳಿವೆ. ಪಶ್ಚಿಮೋತ್ತರ ಭಾಗದಲ್ಲಿ ರೂಢಿಯಲ್ಲಿರುವ ಪಠ್ಯಕ್ಕೆ ಕಾಶ್ಮೀರಿ ಹಾಗೂ ಲಾಹೋರ್ ಪಾಠಗಳೆಂಬ ಹೆಸರುಗಳಿವೆ. ಈ ಮೂರು ಪ್ರಮುಖ ಪಠ್ಯಗಳಲ್ಲದೆ ಇತರ ಪಾಠಗಳೂ ಇದ್ದು ಅವನ್ನು ಪಠಿಸಿರುವವರು ತಮ್ಮಲ್ಲಿರುವುದೇ ಮೂಲ ಸಂಸ್ಕೃತ ವಾಲ್ಮೀಕಿ ರಾಮಾಯಣ ಎಂದು ವಾದಿಸುತ್ತಾರೆ.

ಈ ಎಲ್ಲಾ ಪಾಠಗಳಲ್ಲೂ ಸರಿ ಸುಮಾರು ೨೪೦೦೦ ಶ್ಲೋಕಗಳಿವೆ. ಮೇಲ್ಕಂಡ ಮೂರು ಪ್ರಮುಖ ಪಾಠಗಳನ್ನೂ ಪಠಿಸಿ ಹೋಲಿಸಿ, ವಿಶ್ಲೇಷಿಸಲು ಸುಮಾರು ಹತ್ತು ವರ್ಷ ಪೂರ್ಣಾವಧಿ ಕಾಲ ಬೇಕಾಗುತ್ತದೆ. ಇಂಥ ದುಸ್ತರ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡವರೆಂದರೆ ಜರ್ಮನಿಯ ಹರ್ಮನ್ ಯಾಕೋಬಿ, ಜರ್ಮನಿಯ ಮಾರಿಸ್ ವಿಂಟರ್‌ನಿಟ್ಸ್ ಮತ್ತು ಮಹಾರಾಷ್ಟ್ರದ ಸಿ.ವಿ. (ಚಿಂತಾಮಣಿ ವಿನಾಯಕ) ವೈದ್ಯ ಎಂಬ ಮೂವರು ವಿದ್ವಾಂಸರು. ಇವರುಗಳ ಸಂಶೋಧನ ಗ್ರಂಥಗಳಲ್ಲಿ ಹೊಂದಾಣಿಕೆ ಇದ್ದು, ಇವರುಗಳು ದೃಢಪಡಿಸಿರುವ ಅಂಶಗಳಲ್ಲಿ ಮುಖ್ಯವಾದುವು ಕೆಳಕಂಡಂತಿವೆ :

ಪ್ರತಿ ಪಾಠದಲ್ಲೂ ಬೇರೆ ಬೇರೆ ರೂಪದಲ್ಲಿರುವ ಸುಮಾರು ೮೦೦೦ ಶ್ಲೋಕಗಳು ಎಂದರೆ ಇಡೀ ಪಠ್ಯದ ಮೂರನೇ ಒಂದು ಭಾಗದಷ್ಟು ಇವೆ. ಒಂದು ಪಠ್ಯದಲ್ಲಿ ಕಂಡುಬರುವ ಎಷ್ಟೋ ಶ್ಲೋಕಗಳು ಮಾತ್ರವಲ್ಲದೆ ಇಡೀ ಸರ್ಗ(ಅಧ್ಯಾಯ)ಗಳೇ ಉಳಿದೆರಡರಲ್ಲಿ ಇಲ್ಲ. ಒಂದೇ ರೂಪದಲ್ಲಿರುವ ಎಷ್ಟೋ ಶ್ಲೋಕಗಳು ಒಂದೊಂದು ಪಾಠದಲ್ಲಿ ಒಂದೊಂದು ಕಡೆ ಇವೆ. ಒಂದೇ ಪ್ರಸಂಗಕ್ಕೆ ಸಂಬಂಧಿಸಿದ ಶ್ಲೋಕಗಳು ಬೇರೆ ಬೇರೆ ಪಾಠಗಳಲ್ಲಿ ಬೇರೆ ಬೇರೆ ಕಡೆ ಇವೆ. ಭಾಷಾ ಸಾಮರಸ್ಯದ ಕೊರತೆ, ಮಂಡನೆಯ ಶೈಲಿಯಲ್ಲಿ ವ್ಯತ್ಯಾಸ, ಮಧ್ಯೆ ಮಧ್ಯೆ ನುಸುಳಿ ಬರುವ ಅಸಂಗತ ವಿಚಾರಗಳು ಇತ್ಯಾದಿಗಳನ್ನು ಪರಿಶೀಲಿಸಿ ಹೇಳುವುದಾದರೆ, ಮೂಲ ಸಂಸ್ಕೃತ ವಾಲ್ಮೀಕಿ ರಾಮಾಯಣ ಎನಿಸಿಕೊಂಡಿರುವ ಎಂದರೆ ನಂಬಲ್ಪಟ್ಟಿರುವ ಕೃತಿಗಳಲ್ಲಿ ವಾಲ್ಮೀಕಿಯೇ ರಚಿಸಿದ್ದೆಂದು ಹೇಳಬಹುದಾದುದು ಕೇವಲ ಕಾಲುಭಾಗವಷ್ಟೇ. ಎಂದರೆ ವಾಲ್ಮೀಕಿಯ ಆದಿಕಾವ್ಯ ಅದರ ಮೂಲ ಸ್ವರೂಪದಲ್ಲಿ ಎಲ್ಲೂ ಲಭ್ಯವಿಲ್ಲ ಎಂದಾಯಿತು.

## ರಾಮಾಯಣದ ಮೌಲ್ಯಗಳ ಕಾಲಘಟ್ಟ

ಆರ್ಯರ ಆಗಮನಕ್ಕೆ ಮೊದಲಿನ, ಆರ್ಯೇತರ ಹಾಗೂ ವೈದಿಕ ಧರ್ಮದ ಉಗಮಕ್ಕೆ ಪೂರ್ವದ ಸಿಂಧೂ ಕಣಿವೆಯ ಸಂಸ್ಕೃತಿ, ಕ್ರಿ.ಪೂ. ಮೂರನೇ ಸಹಸ್ರಮಾನದ್ದು (ಮಿಲೆನಿಯಮ್) ಎಂದರೆ ಕ್ರಿ. ಪೂ. ೩೦೦೦ರಿಂದ ೨೦೦೦ದವರೆಗಿನ ಕಾಲಾವಧಿಗೆ ಸೇರಿದ್ದೆಂದು ಆರ್. ಸಿ. ಮಜುಮ್‌ದಾರ್ ಮತ್ತಿತರ ಇತಿಹಾಸಜ್ಞರ ಮತ. ಆರ್ಯರು ಹೊರಗಿನಿಂದ ಬಂದವರಲ್ಲ ಎಂಬ ಇತ್ತೀಚಿನ ಸಿದ್ಧಾಂತ ಹಿಂದುತ್ವದ ಅಜೆಂಡಾಕ್ಕೆ ಅನುಕೂಲವಾಗುವಂತೆ ಇತಿಹಾಸವನ್ನು ತಿರುಚುವ ದೊಡ್ಡದೊಂದು ಸಂಚಿನ ಭಾಗವಷ್ಟೇ. ಕಬ್ಬಿಣದ ಬಳಕೆ ತಿಳಿದಿದ್ದ ವೇದಕಾಲ ಕ್ರಿ. ಪೂ. ೨೦೦೦ದಿಂದ ೧೫೦೦ರವರೆಗೆ ಎಂದು ಮ್ಯಾಕ್ಸ್ ಮುಲ್ಲರ್ ನಿರ್ಣಯಿಸಿದ್ದಾನೆ. ನಗರಜೀವನ ತಿಳಿಯದ, ಗ್ರಾಮಜೀವನವನ್ನು ರೂಢಿಸಿಕೊಂಡಿದ್ದ ಆರ್ಯರು ಮೂಲಭಾರತೀಯರಾದ ದ್ರಾವಿಡರ ನಗರ ಇಲ್ಲವೆ ಪುರಗಳನ್ನು ನಾಶ ಮಾಡಿದರು. ಆರ್ಯರ ಮುಖಂಡ ಮತ್ತು ದೇವತೆ ಎನಿಸಿದ ಇಂದ್ರನ ಮತ್ತೊಂದು ಹೆಸರು ಪುರಂದರ ಎಂದು; ಎಂದರೆ ಪುರಗಳನ್ನು ನಾಶಗೊಳಿಸಿದವನು ಎಂದು. ಹೀಗೆ ನಾಶಗೊಂಡ ಎರಡು ಪುರಗಳಾದ ಕಂಪಿಲ ಮತ್ತು ಅಸಂಧಿವತ್ ಎಂಬ ಹೆಸರುಗಳ ಉಲ್ಲೇಖ ಋಗ್ವೇದದಲ್ಲಿದೆ.

ವೇದ ಧರ್ಮದ ಮೌಲ್ಯಗಳನ್ನು ಎತ್ತಿ ಹಿಡಿಯುವುದಕ್ಕಾಗಿ ರೂಪುಗೊಂಡ ಕಥೆ, ಪುರಾಣ, ಕಾವ್ಯಗಳಲ್ಲಿ ರಾಮಾಯಣ ಪ್ರಮುಖವಾದುದು. ಇವೆಲ್ಲವೂ ಪುರುಷನ ಹೆಚ್ಚುಗಾರಿಕೆಯನ್ನೂ ಮಹಿಳೆಯ ಅಧೀನತೆಯನ್ನೂ ಸಮರ್ಥಿಸುತ್ತವೆ. ಇವುಗಳಲ್ಲಿ ಸ್ತ್ರೀ ದೇವತೆಗಳಾದ ಸರಸ್ವತಿ, ಪೃಥ್ವಿ, ಅದಿತಿ ಮತ್ತು ಉಷಸ್ ಇವರುಗಳಿಗೆ ತೀರಾ ಕನಿಷ್ಠ ಮತ್ತು ಅಧೀನ ಸ್ಥಾನಗಳನ್ನು ನೀಡಲಾಗಿದೆ. ತದ್ವಿರುದ್ಧವಾಗಿ, ಸಿಂಧೂ ಕಣಿವೆಯ ಸಂಸ್ಕೃತಿಯಲ್ಲಿ ಮಾತೃದೇವತೆಗೆ ಪುರುಷಸಂಗಾತಿಗೆ ಸಮಾನವಾದ ಸ್ಥಾನ ಕಲ್ಪಿಸಲಾಗಿದೆ.

ಪಾತಿವ್ರತ್ಯ ಮಹಿಳೆಯ ಕರ್ತವ್ಯ; ಪರಮಧರ್ಮ. ವೈದಿಕ ಸಮಾಜಶಾಸ್ತ್ರದಲ್ಲಿ ಪತ್ನಿವ್ರತ (ಫಿಡೆಲಿಟಿ) ಎಂಬ ಮೌಲ್ಯವೇ ಇಲ್ಲ. ಪತ್ನೀವ್ರತ, ಈಗಿನ ಹಿಂದೂ ವಿವಾಹ ಕಾನೂನು ಅಂಗೀಕರಿಸಿರುವ ಮೌಲ್ಯ. ಸೀತೆಯ ಪಾತಿವ್ರತ್ಯ ಅಗ್ನಿಪರೀಕ್ಷೆಯಿಂದ ಸಾಬೀತಾದ ನಂತರವೂ ಅಗಸನೊಬ್ಬನ ಬೇಜವಾಬ್ದಾರಿ ಮಾತಿನ ನೆಪದಲ್ಲಿ ಅವಳನ್ನು ಗರ್ಭಿಣಿಯಾಗಿದ್ದಾಗ್ಯೂ ರಾಮ ಕಾಡುಪಾಲು ಮಾಡಿದ. ಅನಂತರವೂ ಮತ್ತೊಂದು ಸಂದರ್ಭದಲ್ಲಿ ಮತ್ತೆ ಶಂಕಿಸುತ್ತಾನೆ. ಈ ನಿರಂತರ ಮಾನಸಿಕ ಹಿಂಸೆಯಿಂದ ಪಾರು ಮಾಡೆಂದು ತಾನು ಎಲ್ಲಿಂದ ಬಂದಳೋ ಆ ಭೂಮಾತೆಯನ್ನು ಸೀತೆ ಪ್ರಾರ್ಥಿಸುತ್ತಾಳೆ. ಸೀತೆಯ ಆರ್ತನಾದಕ್ಕೆ ಮರುಗಿ ಭೂಮಿ ಬಿರುಕುಬಿಟ್ಟಾಗ ಅದರಲ್ಲಿ ಹಾರಿ ಬೀಳುತ್ತಾಳೆ. ಅವಳ ಜೀವನವಷ್ಟೇ ಅಲ್ಲ; ಅವಳ ಅಂತ್ಯವೂ ಒಂದು ದುರಂತ. ಸೀತೆಯ ಬದುಕನ್ನಷ್ಟೇ ಪರಿಶೀಲಿಸಿದಾಗ ಅವಳನ್ನು ಶಂಕಿಸಿ ಶಿಕ್ಷಿಸುವುದೇ ರಾಮನಿಗೊಂದು ಹವ್ಯಾಸವಾಗಿತ್ತೇನೋ ಎನಿಸದಿರದು. ಹೆಣ್ಣನ್ನು ಹೇಗೆ ನಡೆಸಿಕೊಳ್ಳಬಾರದು ಎಂಬುದಕ್ಕೆ ರಾಮ ಪ್ರಾಯಶಃ ಅತ್ಯುತ್ತಮ ಉದಾಹರಣೆ. ಮಹಿಳೆಯ ವಿಚಾರದಲ್ಲಿ ಅವಳ ಗಂಡನ ಮಾತೇ ಅಂತಿಮ ಎಂಬುದು ವೈದಿಕ ಸಂಸ್ಕೃತಿಯ ಮೌಲ್ಯ ಮತ್ತು ರಾಮಾಯಣದ ಸಂದೇಶ. ಇನ್ನು ಶಂಬೂಕನ ಪ್ರಕರಣ ರಾಮನಿಗೆ ಮನುವಾದ (ಮನುಸ್ಮೃತಿ ವಿವರಿಸಿರುವ ಚಾತುರ್ವರ್ಣ್ಯದ ನಿರ್ಬಂಧ–ಸ್ಯಾಂಕ್ಷನ್‌ಗಳು)ದಲ್ಲಿ ಇದ್ದ ಉತ್ಸಾಹ, ಆತುರಗಳಿಗೆ ನಿದರ್ಶನ. ವಾಲ್ಮೀಕಿ ರಾಮಾಯಣ, ಸಿಂಧೂ ಕಣಿವೆಯ ಕಾಲದ ನಂತರದ ಮೌಲ್ಯಗಳು ಶ್ರೇಷ್ಠವೆನಿಸಿಕೊಂಡ ಕಾಲಕ್ಕೆ ಸೇರಿದ್ದು ಎಂಬುದನ್ನು ರಾಮಕಥೆಯನ್ನು ಹೆಣೆದವರ ಎಣಿಕೆಯಲ್ಲಿ ಕಥೆ ಯಾವ ಕಾಲದಲ್ಲಿ ನಡೆದಂತೆ ನಿರೂಪಿಸತಕ್ಕದ್ದು ಎಂಬ ಬಗ್ಗೆ ಸ್ಪಷ್ಟ ಕಲ್ಪನೆ ಇತ್ತು ಎಂಬುದನ್ನು ಮೇಲ್ಕಂಡ ಅಂಶಗಳು ದೃಢಪಡಿಸುತ್ತವೆ.

ಜನನ ಮರಣಗಳ ಕುರಿತಂತೆ ನಿಖರ ಮಾಹಿತಿ ದೊರಕುವ ಭಾರತದ ಮೊಟ್ಟ ಮೊದಲ ಪ್ರಖ್ಯಾತ ಚಾರಿತ್ರಿಕ ವ್ಯಕ್ತಿ ಎಂದರೆ ಭಗವಾನ್ ಬುದ್ಧರು (ಕ್ರಿ. ಪೂ. ೫೬೩ರಿಂದ ೪೮೩, ಎಂದರೆ ಕ್ರಿ. ಪೂ. ೫ನೇ ಶತಮಾನ). ವಾಲ್ಮೀಕಿಯರ ಕಾಲ ಕ್ರಿ. ಪೂ. ೩ನೇ ಶತಮಾನ. ಎಂದರೆ ವೈದಿಕ ಧರ್ಮದ ಅರ್ಥಾತ್ ಚಾತುರ್ವರ್ಣ್ಯದ ಮೌಲ್ಯಗಳಿಗೆ ಮೊಟ್ಟಮೊದಲ ಭಾರೀ ಸವಾಲಾದ ಬುದ್ಧರ ಕಾಲಕ್ಕೆ ಎರಡು ಶತಮಾನಗಳ ನಂತರ ವಾಲ್ಮೀಕಿಯ ಕಾವ್ಯ ರಚನೆಯಾಯಿತು.

ಭಗವಾನ್ ಬುದ್ಧರು ವೈದಿಕ ಧರ್ಮವನ್ನು ತಿರಸ್ಕರಿಸಿದ್ದರು. ನಿರಾತಂಕವಾಗಿ ಸಿಗಬಹುದಾಗಿದ್ದ ಸಿಂಹಾಸನವನ್ನು ತಾವಾಗಿ ತೊರೆದರು. ಪತ್ನಿ, ಪುತ್ರರನ್ನು ಅರಮನೆಯಲ್ಲಿ ಉಳಿಸಿ ತಾವಷ್ಟೇ ಅರಣ್ಯಕ್ಕೆ ಹೋದರು. ಸ್ವಪ್ರೇರಣೆಯಿಂದ ದಾಂಪತ್ಯವನ್ನು ತೊರೆದರು. ಇವೆಲ್ಲಕ್ಕಿಂತ ಮುಖ್ಯವಾಗಿ ಶಾಸ್ತ್ರಗಳನ್ನೂ ಪುರೋಹಿತರನ್ನೂ ದೂರವಿಟ್ಟು ಬದುಕುವುದು ಹೇಗೆಂದು ಜನರಿಗೆ ತೋರಿಸಿಕೊಟ್ಟರು. ಇದೆಲ್ಲವೂ ಕಟ್ಟುಕಥೆಯಲ್ಲ; ಗಟ್ಟಿ ಇತಿಹಾಸ. ರಾಮ ಮತ್ತು ಬುದ್ಧ ಪರಸ್ಪರ ಆ್ಯಂಟಿ ಕ್ಲೈಮಾಕ್ಸ್! ವೈದಿಕರ ಧರ್ಮ ಮತ್ತು ಮೌಲ್ಯಗಳನ್ನು ಪರಿಣಾಮಕಾರಿಯಾಗಿ ತಿರಸ್ಕರಿಸಿದ ಐತಿಹಾಸಿಕ ಪುರುಷ ಬುದ್ಧರನ್ನು ಕಳೆಗೆಗೊಳಿಸಲು ತದ್ವಿರುದ್ಧ ಧೋರಣೆ ಹೊಂದಿದ್ದ ಒಬ್ಬ ಪುರಾಣಪುರುಷನನ್ನು ತಯಾರಿಸುವುದು

ವೈದಿಕರಿಗೆ ಅನಿವಾರ್ಯವಾದಾಗ, ರಾಮಾಯಣ ತಯಾರಾಯಿತು. ಭಗವಾನ್ ಬುದ್ಧರನ್ನು ಕಳಪೆಗೊಳಿಸುವ ನಿರಂತರ 'ಜಿಹಾದ್' ಅಥವಾ 'ಯಜ್ಞ' ವಿಫಲಗೊಂಡಾಗ ಬುದ್ಧರು ವಿಷ್ಣುವಿನ ಒಂದು ಅವತಾರ ಎನ್ನುತ್ತ ಬೌದ್ಧ ಪರಂಪರೆಯನ್ನೂ ಹೈಜಾಕ್ ಮಾಡುವ ತಂತ್ರಕ್ಕೆ ವೈದಿಕರು ಶರಣಾದರು. ಆದರೆ ಈ ತಂತ್ರವೂ ಫಲಿಸಲಿಲ್ಲ. ಬುದ್ಧ ವಿಷ್ಣುವಿನ ಅವತಾರವಾಗಿದ್ದಲ್ಲಿ ಬೌದ್ಧ ಮತದ ವಿರುದ್ಧ ಸಮರ ಸಾರಿದ ಆದಿಶಂಕರಾಚಾರ್ಯ ಯಾರ ಅವತಾರ ? ಗಾಂಧೀಜಿಯ ಅಹಿಂಸಾ ನೀತಿಯನ್ನು ಗೇಲಿ ಮಾಡಲು ವೈದಿಕರಿಗೆ ಭಗತ್ ಸಿಂಗ್ ಬೇಕಾಯಿತು. ಭಗತ್ ಸಿಂಗ್, ಮಾರ್ಕ್ಸ್‌ವಾದಿಯಾಗಿದ್ದುದು ಬಯಲಾದೊಡನೆ ಅವನು ಬೇಡವಾದ. ಯಾವುದೇ ಕಾಲದಲ್ಲಿ ವೈದಿಕರು ವಸ್ತುನಿಷ್ಠರಾಗಿದ್ದುದಿಲ್ಲ.

**ರಾಮಸೇತು ಎಂಬುದು ಕೇವಲ ಕಲ್ಪನೆ**

ಭಾರತ ಮತ್ತು ಶ್ರೀಲಂಕಾ ನಡುವಣ ಎಂದರೆ ಧನುಷ್‌ಕೋಟಿ ಮತ್ತು ತಲೈಮನ್ನಾರ್ ನಡುವೆ ಸಮುದ್ರ ತಳದಲ್ಲಿ ಕಾಣುವ ದಿಬ್ಬಕ್ಕೆ ಆ್ಯಡಮ್ಸ್ ಬ್ರಿಡ್ಜ್ ಎಂಬ ಅಧಿಕೃತ ಹೆಸರಿದೆ. ಕಳೆದ ಸುಮಾರು ನಲವತ್ತು ವರ್ಷಗಳಿಂದ ಶ್ರೀಲಂಕಾ ಎಂದು ಕರೆಯಲ್ಪಡುತ್ತಿರುವ ದ್ವೀಪದ ಮೊದಲ ಹೆಸರು ಸಿಲೋನ್ ಎಂದು. ಪೂರ್ವದಲ್ಲಿ ಇದು ಭಾರತದ ಭಾಗವಾಗಿದ್ದು ಕಡಲ ಕೊರೆತದಿಂದಾಗಿ ಸುಮಾರು ಒಂದು ಲಕ್ಷ ವರ್ಷಗಳ ಹಿಂದೆ ಭಾರತದಿಂದ ಬೇರ್ಪಡುವ ಪ್ರಕ್ರಿಯೆ ಆರಂಭವಾಯಿತು ಎಂದು ಭೂಗರ್ಭಶಾಸ್ತ್ರ (ಜಿಯಾಲಜಿ)ದ ಅಧ್ಯಯನ ತಿಳಿಸುತ್ತದೆ. ವಿಶ್ವದಲ್ಲಿ ಹಲವೆಡೆ ಹೀಗಾಗಿದೆ. ಈ ದೀರ್ಘಕಾಲದ ಕಡಲ ಕೊರೆತದ ನಂತರ ಈಗ ಅಲ್ಲಿ ಉಳಿದಿರುವ ಕಲ್ಲು ಬಂಡೆಗಳಿಂದ ಕೂಡಿದ ದಿಬ್ಬವೇ ಆ್ಯಡಮ್ಸ್ ಬ್ರಿಡ್ಜ್.

ವಾಸ್ತವವೇನು ? ಮಾನವ ಪ್ರಾಣಿ ವಿಕಾಸಹೊಂದಿ ಈಗಿರುವ ಸ್ವರೂಪಕ್ಕೆ ಸುಮಾರು ಒಂದು ಲಕ್ಷ ವರ್ಷಗಳ ಹಿಂದೆ ಬಂದು ಗುಹೆಗಳಲ್ಲಿ ವಾಸಿಸಲಾರಂಭಿಸಿದ ಎಂದು ಇತಿಹಾಸ ತಿಳಿಸುತ್ತದೆ. ಆ್ಯಡಮ್ಸ್ ಬ್ರಿಡ್ಜ್ ಎಂಬುದು ರಾಮ ಸೇತುವೆ ಎಂದು ಸಂಘಪರಿವಾರ ಪ್ರಚಾರ ಕೈಗೊಂಡಾಗ (೨೦೦೭ರ ಏಪ್ರಿಲ್-ಮೇ) ಸೇತುವೆಯನ್ನು ರಾಮ ಹದಿನೇಳು ಲಕ್ಷ ವರ್ಷಗಳ ಹಿಂದೆ ನಿರ್ಮಿಸಿದ ಎಂದು ಪ್ರತಿಪಾದಿಸಲಾಯಿತು. ಇದು ತೀರಾ ಬಾಲಿಶವೆನಿಸಿತೇನೋ. ಈ ಪ್ರತಿಪಾದನೆಯ ಪುನರಾವರ್ತನೆಯಾಗಲಿಲ್ಲ. ಆದರೆ ಈ ವರ್ಷ ಜನವರಿ ಮೂರನೇ ವಾರದಲ್ಲಿ ಮಹನೀಯರೊಬ್ಬರು, ಕ್ರಿ. ಪೂ. ೫೧೧೪ರಲ್ಲಿ (ಎಂದರೆ ಕ್ರಿ. ಪೂ. ೫೧ ಶತಮಾನಗಳ ಹಿಂದೆ) ರಾಮ ಜನಿಸಿದನೆಂದು ಸಂಶೋಧನೆಯಾಗಿದೆ ಎಂದು ಪ್ರಕಟಿಸಿದೊಡನೆ ಅದಕ್ಕೆ ಆದ್ಯತೆ ಮೇರೆಗೆ ಪ್ರಚಾರ ನೀಡಿ ಮಾಧ್ಯಮಗಳು ಪುಣ್ಯ ಪಡೆದುಕೊಂಡವು. ನಿಜವೇನೆಂದರೆ ಈಗಿನ ಅಯೋಧ್ಯೆ ಪ್ರದೇಶದಲ್ಲಿ ಮೊಟ್ಟಮೊದಲು ಜನ ವಾಸಿಸಲು ಆರಂಭಿಸಿದ್ದೇ ಕ್ರಿ. ಪೂ. ಏಳನೇ ಶತಮಾನದಲ್ಲಿ, ಎಂದರೆ ಇಂದಿಗೆ ೨೮೦೦ ವರ್ಷಗಳಷ್ಟು ಈಚೆಗೆ ಎಂದು ಪ್ರಾಚ್ಯವಸ್ತು ಸಂಶೋಧನ ಇಲಾಖೆ (ಆರ್ಕಿಯಾಲಜಿಕಲ್ ಸರ್ವೆ ಆಫ್ ಇಂಡಿಯಾ) ಆ ಪ್ರದೇಶದಲ್ಲಿ ನಡೆಸಿದ ಅಗೆತ (ಎಕ್ಸವೇಶನ್)ಗಳ ವರದಿ ತಿಳಿಸುತ್ತದೆ. 'ಇಂಡಿಯನ್ ಆರ್ಕಿಯಾಲಜಿ ಎ ರಿವ್ಯೂ'ವನ್ನು ನೋಡಿ.

**ಕೇಂದ್ರ ಸರ್ಕಾರದ ಎಡಬಿಡಂಗಿತನ**

ಪ್ರಾಚ್ಯ ವಸ್ತು ಸಂಶೋಧನೆ ಇಲಾಖೆಯಲ್ಲಿನ ಸಾಕ್ಷ್ಯಸಾಮಗ್ರಿಗಳನ್ನಾಧರಿಸಿ ಹೇಳುವುದಾದರೆ ರಾಮಾಯಣದ ಐತಿಹಾಸಿಕತೆಯ ಬಗ್ಗೆ ಸಾಕ್ಷ್ಯವಿಲ್ಲ ಎಂಬ ಸತ್ಯ ಸಂಗತಿಯನ್ನು ಒಳಗೊಂಡ ಪ್ರಮಾಣಪತ್ರ (ಅಫಿಡವಿಟ್)ವನ್ನು ಸರ್ಕಾರ ಸುಪ್ರೀಮ್ ಕೋರ್ಟಿನಿಂದ ಹಿಂದಕ್ಕೆ ಪಡೆದದ್ದು ಕೇಂದ್ರದ ಕಾಂಗ್ರೆಸ್ ನೇತೃತ್ವದ ಯುಪಿಎ ಸರ್ಕಾರದ ಮೊದಲನೇ ತಪ್ಪು. ಸತ್ಯವನ್ನು ದಾಖಲಿಸಿದ ಆ ಇಲಾಖೆಯ ಇಬ್ಬರು ಅಧಿಕಾರಿಗಳನ್ನು ಅಮಾನತ್ತಿನಲ್ಲಿ ಇರಿಸಿದ್ದು ಎರಡನೇ ತಪ್ಪು. ಕಾಂಗ್ರೆಸ್ಸಿಗರು ರಾಮಭಕ್ತರಲ್ಲ ಎಂದು ಸಂಘ ಪರಿವಾರ ಪ್ರಚಾರಮಾಡೀತು ಎಂಬ ಭಯವನ್ನುಳಿದು ಈ ಎಡಬಿಡಂಗಿ ನೀತಿಗೆ ಬೇರಾವ ಕಾರಣವೂ ಇರಲಿಲ್ಲ. ಕಾವ್ಯ, ಪುರಾಣಗಳಲ್ಲಿ ನಂಬಲಾಗದ ಮತ್ತು ಅವೈಜ್ಞಾನಿಕವಾದ ಎಷ್ಟೋ ಕಲ್ಪನೆಗಳೂ ಕಥೆಗಳೂ ಇವೆ. ಶಂಕರಾಚಾರ್ಯರು ಪರಕಾಯಪ್ರವೇಶ ಮಾಡಿದ ಕತೆ ಇದೆ. ಮುಂದಿನ ದಿನಗಳಲ್ಲಿ ಇಂಥ ಪ್ರಶ್ನೆಗಳು ತೀವ್ರ ಚರ್ಚೆಗೆ ಬಂದಲ್ಲಿ ಕೋಟ್ಯಂತರ ಹಿಂದುಗಳ ಭಾವನೆಗೆ ಧಕ್ಕೆ ಎಂಬ ಕಾರಣವೊಡ್ಡಿ ವೈಜ್ಞಾನಿಕ-ವೈಚಾರಿಕ ನಿಲುವುಗಳನ್ನು ತಳ್ಳಿಹಾಕಲು ಸರ್ಕಾರದ ಯಂತ್ರ ಬಳಕೆಯಾಗುವ ಸಾಧ್ಯತೆ ಹೆಚ್ಚಾಗಿದೆ ಎಂಬ ಆತಂಕವನ್ನು ಡಿಎಂಕೆ, ಕಮ್ಯುನಿಸ್ಟ್ ಪಕ್ಷಗಳು ಮತ್ತಿತರ ವಿಚಾರವಾದಿಗಳು ವ್ಯಕ್ತಪಡಿಸಿದರು. ರಾಮಾಯಣದ ಐತಿಹಾಸಿಕತೆ ಬಗ್ಗೆ ಮೌನ ವಹಿಸಿ ಪರಿಸರ ಕುರಿತ ಆತಂಕದ ಪ್ರಶ್ನೆಯನ್ನಷ್ಟೇ ಪ್ರಸ್ತಾಪಿಸಿ ಹೊಸ ಪ್ರಮಾಣಪತ್ರವನ್ನು ಫೆಬ್ರವರಿ ೨೯ರಂದು ಕೇಂದ್ರ ಸರ್ಕಾರ ಸುಪ್ರೀಮ್ ಕೋರ್ಟಿಗೆ ಸಲ್ಲಿಸಿತು.

ಪಿ. ಎಸ್. ಶ್ರೀಧರಮೂರ್ತಿ
೨೫, ಗಾಂಧಿಬಜಾರ್, ಬೆಂಗಳೂರು - ೫೬೦ ೦೦೪



## ಆ ಲೋಕ, ಈ ಲೋಕ

ಆ ಮುಗುಳು ನಗುವ ಹೂಗಳು
ಅವಕೆಲ್ಲಿ ಗೊತ್ತು ಬಾಡುವ ಪಾಡು
ಆ ತಾರೆಗಳ ದೀಪಗಳು
ಅವಕೇನು ಗೊತ್ತು ಆರುವ ಪರಿ
ಆ ಶೂನ್ಯ ಕಂಗಳು
ಅಲ್ಲೆಲ್ಲಿ ಮುತ್ತಂಥ ಕಣ್ಣೀರಿದೆ
ಆ ಜೀವ ತುಂಬಿರುವ ಶಯ್ಯೆಗಳು
ಅಲ್ಲೆಲ್ಲಿ ತಾಣ ಮೈಮರೆವ ಯಾತನೆಗೆ
ಆ ನೀಲ ಶೈಲದ ಮೋಡಗಳ ಸಾಲು
ಅದಕೆಲ್ಲಿ ಹನಿಯಾಗಿ ಉದುರುವಾಸೆ
ಆ ಅನಂತ ಋತುರಾಜ
ಅವನೆಲ್ಲಿ ನೋಡಿರುವ ಹೊರಳೋ ಹಾದಿ

ಅಂಥ ನಿನ್ನಯ ಲೋಕವು ಬೇಕೆ ?
ವೇದನೆಯಿಲ್ಲದ್ದು, ನಾಶವೆ ಹೊಂದದ್ದು
ಬೇಯುವ ಪರಿಯನು ಅರಿಯದ್ದು
ಸಾವಿನ ರುಚಿಯನು ಸವಿಯದ್ದು

ಕರುಣೆಯ ಕಾಣ್ಕೆಯ ತೆರದಲಿ
ಸಿಗಬಹುದೆ ಅಮರತ್ವದ ಆ ಸಿರಿ ಎನಗೆ
ಸುಡುಸುಡು ದೇವಾ ಬೇಡೆನಗದು
ಈ ಲೋಕದಿ ಮಣ್ಣಾಗುವ ಅಧಿಕಾರವೆ ಎನಗಿರಲಿ.

ಹಿಂದಿ ಮೂಲ : ಮಹಾದೇವಿ ವರ್ಮಾ
(೧೯೮೨ರ ಜ್ಞಾನಪೀಠ ಪುರಸ್ಕೃತೆ)
ಕನ್ನಡಕ್ಕೆ : ಡಾ|| ಮಾಧವಿ ಭಂಡಾರಿ

**ಕುವೆಂಪು ಸಂದರ್ಶನ** (ಪ್ರಚಾರ ಪುಸ್ತಕ ಮಾಲೆ) ಸಿ. ಪಿ. ಕೆ.
ಪುಟ : ೫೨ ಬೆಲೆ : ರೂ. ೫
ನಿರ್ದೇಶಕರು, **ಪ್ರಸಾರಾಂಗ**, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

**ಸಿ.ಪಿ.ಕೆ.** (ಆಧುನಿಕ ಬರಹಗಾರರು ಮಾಲಿಕೆ)
ಡಾ|| ಕೆ. ಎಸ್. ರತ್ನಮ್ಮ
ಪುಟ : ೮೦ ಬೆಲೆ : ರೂ. ೩೦
**ಚೇತನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್**, ನಂ. ೨೩೫೯, ಬಸವೇಶ್ವರ ರಸ್ತೆ, ೧೨ನೇ ಕ್ರಾಸ್, ಕೆ. ಆರ್. ಮೊಹಲ್ಲಾ, ಮೈಸೂರು - ೫೭೦ ೦೨೪

**ಬಾಪೂ ಗೀತಾಂಜಲಿ** (ಕವನ ಸಂಕಲನ) ಭಾವಜೀವಿ
ಪುಟ : ೮೦ ಬೆಲೆ : ರೂ. ೪೦
**ಗೀತಾ ಕುಟೀರ**, ನಂ. ೭೦, ರತ್ನವಿಲಾಸ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಕಾವ್ಯೋತ್ತರ** (ಕವನ ಸಂಕಲನ) ಹುರುಕಡ್ಲಿ ಶಿವಕುಮಾರ
ಪುಟ : ೬೮ ಬೆಲೆ : ರೂ. ೨೫
**ಆಹ್ವಾನ ಪ್ರಕಾಶನ**, ಬಸರಕೋಡು - ೫೮೩ ೨೨೮, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ

**ಮನೆಯೊಳಗೆ ಮನೆಯೊಡೆಯನಿಲ್ಲ** (ಕವನ ಸಂಕಲನ)
ನಿಜಲಿಂಗಪ್ಪ ಮೆಣಸಿಗಿ
ಪುಟ : ೫೦ ಬೆಲೆ : ರೂ. ೩೦
**ಗುರುಬಸವ ಪ್ರಕಾಶನ**, ಗುರುಸಂಗಮ ಮೊದಲನೇ ಮುಖ್ಯರಸ್ತೆ, ಸತ್ಯನಾರಾಯಣ ಪೇಟೆ, ೪ನೇ ಅಡ್ಡರಸ್ತೆ, ೬ನೇ ಬ್ಲಾಕ್, ಗಂಗಾವತಿ - ೫೮೩ ೨೨೭

**ತ್ರೈಲೋಕ್ಯ ಚಾಲುಕ್ಯ ಉತ್ಸವ - ೨೦೦೮** (ಸಂಸ್ಮರಣ ಸಂಪುಟ)
ಸಂಪಾದಕರು : ಪ್ರೊ|| ವಿಶ್ವನಾಥ ವಂಶಾಕೃತಮಠ
ಪುಟ : ೨೯೮ ಬೆಲೆ : ರೂ. ೨೦೦
**ಚಾಲುಕ್ಯ ಉತ್ಸವ ಸಮಿತಿ - ೨೦೦೮**, ಜಿಲ್ಲಾ ಆಡಳಿತ ಭವನ, ನವನಗರ, ಬಾಗಲಕೋಟೆ

**ಬ್ರಾಹ್ಮಣ್ಯದ ತಂತ್ರಗಳು** (ಲೇಖನ ಸಂಗ್ರಹ) ಜ. ಹೊ. ನಾ.
ಪುಟ : ೧೭೬ ಬೆಲೆ : ರೂ. ೮೦
**ಮಾನವ ಪ್ರಕಾಶನ**, ೨೦೬೪/ಎ, 'ಮಾನವ', ಉತ್ತರ ಬಡಾವಣೆ, ಹಾಸನ

**ಸಿಂಚನ** (ವೈಚಾರಿಕ ಬರಹಗಳ ಸಂಕಲನ)
ಬಿ. ಪಿ. ಶಿವಾನಂದ ರಾವ್
ಪುಟ : ೧೬೪ ಬೆಲೆ : ರೂ. ೮೦
**ಪಾಂಚಜನ್ಯ ಪಬ್ಲಿಕೇಷನ್ಸ್**, ನಂ. ೪೨೦/೨೮, ೬-೭ನೇ ಕ್ರಾಸ್ ನಡುವೆ, ಅಮರಜ್ಯೋತಿನಗರ, ಬೆಂಗಳೂರು - ೪೦

**ಮಣ್ಣು ಬಿಸುಪು** (ಕವನ ಸಂಕಲನ) ರೋಸಿ ಡಿ'ಸೋಜಾ
ಪುಟ : ೫೬ ಬೆಲೆ : ರೂ. ೩೦
**ಸಂಚಯ**, ನಂ. ೧೦೦, ೨ನೇ ಮೈನ್, ೬ನೇ ಬ್ಲಾಕ್, ೩ನೇ ಸ್ಟೇಜ್, ೩ನೇ ಫೇಸ್, ಬನಶಂಕರಿ, ಬೆಂಗಳೂರು - ೮೫

**ಪುಸ್ತಕಲೋಕದ ಅನನ್ಯರು ಮನೋಹರ ಗ್ರಂಥಮಾಲೆ**
ಸಂ.: ಶ್ರೀಧರ ಹೆಗಡೆ ಭದ್ರನ್
ಪುಟ : ೬೮

# ಸಾದರ ಸ್ವೀಕಾರ

**ಅಕ್ಷರ ಲೋಕದ ಅನನ್ಯರು ಅಕ್ಷರ ಪ್ರಕಾಶನ**
ವಿವಿಧ ಲೇಖಕರು
ಪುಟ : ೪೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಅಭಿನವ**, ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೪೦

**ಸುಗಂಧ** (ಕಥಾ ಸಂಕಲನ) ಬಿ. ಪಿ. ಶಿವಾನಂದ ರಾವ್
ಪುಟ : ೧೦೪ ಬೆಲೆ : ರೂ. ೫೦
**ಸಾಗರ್ ಪ್ರಕಾಶನ**, ನಂ. ೧೬೭೯, ೧೦ನೇ ಮುಖ್ಯರಸ್ತೆ, ೫ನೇ 'ಎ' ಅಡ್ಡರಸ್ತೆ, ಬನಶಂಕರಿ ೧ನೇ ಹಂತ, ೨ನೇ ಫೇಸ್, ಬೆಂಗಳೂರು - ೫೬೦ ೦೫೦

**ಕಾಲ ಕಾಯುವುದಿಲ್ಲ** (ಕವನ ಸಂಕಲನ)
ಸ್ಮಿತಾ ಅಮೃತ್‌ರಾಜ್
ಪುಟ : ೬೦ ಬೆಲೆ : ರೂ. ೪೦
**ಪ್ರಗತಿ ಪ್ರಕಾಶನ**, ರಥಬೀದಿ, ಸುಳ್ಯ - ೫೭೪ ೨೩೯

**ಶೇಷಗೀತೆ** (ಕಾವ್ಯ) ರವೀಂದ್ರನಾಥ ಠಾಕೂರ್
ಅನು : ಜಿ. ರಾಮನಾಥ ಭಟ್
ಪುಟ : ೧೯೨ ಬೆಲೆ : ರೂ. ೧೦೦
**ಶುಭೋದಯ ಪ್ರಕಾಶನ**, ನಂ. ೫೦೭, ೬೫ನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಒಂದಾಣೆ ಮಾಲೆಯ ಸಾಹಸಿ ಕುಡ್ಪಿ ವಾಸುದೇವ ಶೆಣೈ**
ಡಾ|| ಸಬಿಹಾ ಭೂಮಿಗೌಡ
ಪುಟ : ೫೨ ಬೆಲೆ : ರೂ. ೩೩
**ಜ್ಞಾನಗಂಗಾ ಪುಸ್ತಕ ಮಳಿಗೆ**, ಪ್ರವಾಸಿ ಮಂದಿರದ ಎದುರು, ದರ್ಬೆ, ಪುತ್ತೂರು - ೫೭೪ ೨೦೨ (ದ.ಕ.)

**ಚಿಂತನ ಧಾರೆ** ಡಾ|| ಸಿ. ಪಿ. ಕೃಷ್ಣಕುಮಾರ್
ಪುಟ : ೧೩೬ ಬೆಲೆ : ರೂ. ೬೦
**ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ**, ಸುಕ್ಷೇತ್ರ ಹಾರಕೂಡ - ೫೮೫ ೪೩೭

**ಗಾಂಧೀಜಿ ಮತ್ತು ಅಂಬೇಡಕರ**
ಮೂಲ ಮರಾಠಿ : ಗಂಗಾಧರ ಬಾಳಕೃಷ್ಣ ಸರದಾರ
ಅನು : ಅನಂತ ಕಲ್ಲೋಳ
ಪುಟ : ೧೬೦ ಬೆಲೆ : ರೂ. ೧೦೦
**ನಿಶಾಂತ ಪ್ರಕಾಶನ**, ೩೧೪ ರಾಯ್ ರಸ್ತೆ, ಟಿಳಕವಾಡಿ, ಬೆಳಗಾವಿ - ೫೯೦ ೦೦೬

**ತುಂಬಿ ಬಂದಡೆ ಪರಿಮಳ ಓಡಿತ್ತ ಕಂಡೆ** (ಲೇಖನಗಳು)
ಡಾ|| ಗುಂಡಣ್ಣ ಕಲಬುರ್ಗಿ
ಪುಟ : ೧೯೦ ಬೆಲೆ : ರೂ. ೨೨೦

**ಎಲ್ಲಿ ಹೋದಳು ಈಕೆ** (ಕವಿತೆಗಳು) ಗುಂಡಣ್ಣ ಕಲಬುರ್ಗಿ
ಪುಟ : ೧೧೬ ಬೆಲೆ : ರೂ. ೧೦೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸೌಜನ್ಯ ಪ್ರಕಾಶನ**, ಸೃಷ್ಟಿ ಈರಣ್ಣ ನಗರ, ಮೂಡಲಗಿ - ೫೯೧ ೩೧೨

**ಕನ್ನಡ ಭಿಕ್ಷು : ರಾಜರತ್ನಂ** ಜಿ. ಶ್ರೀನಿವಾಸರಾಜು
ಪುಟ : ೩೬ ಬೆಲೆ : ರೂ. ೧೫
**ಗಾಂಧಿ ಸಾಹಿತ್ಯ ಸಂಘ**, ೮ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

**ಮಗುವಿನ ಧ್ಯಾನದಲ್ಲಿ** (ಕವನ ಸಂಕಲನ)
ಡಾ|| ನಿಂಗಪ್ಪ ಮುದೇನೂರು
ಪುಟ : ೭೪ ಬೆಲೆ : ರೂ. ೮೦

**ಕರ್ನಾಟಕ ಅಭಿವೃದ್ಧಿಯ ಆಕೃತಿ** (ಲೇಖನ ಸಂಗ್ರಹ)
ಡಾ|| ಟಿ. ಆರ್. ಚಂದ್ರಶೇಖರ
ಪುಟ : ೧೩೦ ಬೆಲೆ : ರೂ. ೮೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪಲ್ಲವ ಪ್ರಕಾಶನ**, ಎಮ್ಮಿಗನೂರು, ಬಳ್ಳಾರಿ ಮಾರ್ಗ- ೫೮೩ ೧೧೩

**ಕವಿ : ಕವಿತೈಲ** (ಕವನ ಸಂಕಲನ)
ಡಾ|| ಅಶೋಕ ನರೋಡೆ
ಪುಟ : ೧೧೪ ಬೆಲೆ : ರೂ. ೬೦
**ಅಪೂರ್ವ ಪ್ರಕಾಶನ**, ನಂ. ೧೭, ಬಸವನಗರ, ಮಹಾಲಿಂಗಪುರ - ೫೮೭ ೩೧೨

**ಲೀಲಾಬಾಯಿ ಕಾಮತ್** (ಬದುಕು-ಬರೆಹ)
ಡಾ|| ಸಬಿಹಾ ಭೂಮಿಗೌಡ
ಪುಟ : ೪೮ ಬೆಲೆ : ರೂ. ೨೦

**ಅಕ್ಕಮಹಾದೇವಿ ದ್ವೈತ** (ಲೇಖನಗಳು) ವೀಣಾ ಬನ್ನಂಜೆ
ಪುಟ : ೧೬೮ ಬೆಲೆ : ರೂ. ೫೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಕನ್ನಡ ಸಾಹಿತ್ಯ ಪರಿಷತ್ತು**, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ಆಧುನಿಕ ಮತ್ತು ಪ್ರಾಚೀನ ಜಗತ್ತಿನ ಏಳು ಅದ್ಭುತಗಳು**
ಜಿ. ಎಂ. ಕೃಷ್ಣಮೂರ್ತಿ
ಪುಟ : ೮೦ ಬೆಲೆ : ರೂ. ೪೦

**ನಗೆ ಬುಗ್ಗೆಗಳು** ಕೈವಾರ ಗೋಪೀನಾಥ್
ಪುಟ : ೩೬ ಬೆಲೆ : ರೂ. ೨೦

**ಅಗೋಚರ ಶಕ್ತಿಯ ಅವತಾರಗಳು** (ಲೇಖನಗಳು)
ಕೈವಾರ ಗೋಪೀನಾಥ್
ಪುಟ : ೧೨೦ ಬೆಲೆ : ರೂ. ೭೦

**ಕಲ್ಪನೆಗಳ ಸುಳಿಯಲ್ಲಿ ಮತ್ತು ಇತರ ಪ್ರಬಂಧಗಳು**
ಕೈವಾರ ಗೋಪೀನಾಥ್
ಪುಟ : ೧೦೪ ಬೆಲೆ : ರೂ. ೬೦

**ಪ್ರೇತಾತ್ಮಗಳ ಸುಳಿಯಲ್ಲಿ ಮತ್ತು ಇತರ ಅನುವಾದಿತ ಕತೆಗಳು**
ಕೈವಾರ ಗೋಪೀನಾಥ್
ಪುಟ : ೧೦೦ ಬೆಲೆ : ರೂ. ೬೦
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಭಾಗ್ಯಲಕ್ಷ್ಮಿ ಪ್ರಕಾಶನ**, ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು - ೫೬೦ ೦೮೫

# ಪುಡಿಕಾಸಿಗಾಗಿ ದೇಶವೇ ಪುಂಡಿಪಲ್ಲೆ !

''**ಅಂ**ಕಲ್... ನಿಮಗೆ ಇವತ್ತಿನ ಬಸ್ ಪಾಸ ಬೇಕಾ... ತಗೊಳ್ಳಿ... ಪುಕ್ಕಟೆ ಬೆಂಗ್ಳೂರ ಸುತ್ತಾಡಿ ಬನ್ನಿ...''

ನನ್ನ ಖಾಸ ಪರಿಚಯದ ಎಮ್ಕಾಮ್ ವಿದ್ಯಾರ್ಥಿನಿ ನನಗೆ ಉಚಿತವಾಗಿ ಆ ದಿವಸದ ಡೇಲಿ ಬಸ್ಪಾಸ ಕಾಣಿಕೆ ಕೊಡಲು ಬಂದಳು. ಆಗಲೇ ಅವಳು ಬೆಳಿಗ್ಗೆ ಬೆಂಗ್ಳೂರು ಸುತ್ತಾಡಿ ಬಂದಿದ್ದಳು.

ನಾನೆಂದೆ – ''ಅಲ್ಲಮ್ಮಾ... ಇದು ನಿನ್ನ ಪಾಸು. ನಾಟ್ ಟ್ರಾನ್ಸಫರೆಬಲ್ ಅಲ್ವಾ... ?'' ಅಂದೆ.

ಅದಕ್ಕೆ ಆ ಹುಡುಗಿ – ''ಅಯ್ಯೋ... ಎಷ್ಟು ಅಂಜತೀರಿ ಅಂಕಲ್ ?... ಇದರ ಮೇಲಿ ಹೆಸರಿರೋದಿಲ್ಲಾ. ತೊಗೊಳ್ಳಿ. ಬೆಂಗ್ಳೂರ ಸುತ್ತಾಡಿ. ನೀವು ಎಲ್ಲಿಗಾದ್ರೂ ಹೋಗಿ ಬರಬಹುದು. ಒಂದು ಪೈಸಾನೂ ಕೊಡಬೇಕಾಗಿಲ್ಲಾ...''

ಈಗ ಭಂಡ ಭಾಷೆಯಿಂದ ಆ ಹುಡುಗಿಗೆ ಖಡಕ್ಕಾಗಿ ಹೇಳಿದೆ –

''ಅಲ್ಲಮ್ಮಾ... ನಿನ್ನ ಪಾಸು ನಾನು ಬಳಸೀದ್ರ... ಸರಕಾರಕ್ಕ ಈ ದುಡ್ಡು ನಷ್ಟ ಆಗತೈತೆಮ್ಮಾ... !''

ಕಿಲಕ್ಕಂತ ಆ ಕಿಲಾಡಿ ಕನ್ನೆ ನಕ್ಕಳು. ಥಟ್ಟಂತ ನನಗೆ ಚುಚುಗುಟ್ಟಿದಳು –

''ಅಂಕಲ್... ನೀವ್ಯಾಕ ಚಿಂತೀ ಮಾಡ್ತೀರಿ. ಸರಕಾರಕ್ಕ ಈ ರೂಪಾಯಿ ಏನ ಮಹಾ ?... ಹೋಗಿ... ಉಪಯೋಗಿಸಿ...''

ನಾನು ಆ ಹುಡುಗಿಯನ್ನು ಕೆಂಡಕಿಡಿಯಾಗಿ ನೋಡಿ ಕವಕ್ಕೆಂದೆ –

''ಇದೇನಮ್ಮಾ... ನಮ್ಮಂಥಾ ಎಜ್ಯುಕೇಟೆಡ್ಡುಗಳೇ ಸರಕಾರಕ್ಕ ಟಪಗಿ ಹಾಕೀದ್ರ ಹ್ಯಾಂಗ ?''

ಅವಳು ನನ್ನನ್ನು ಬಡ ಪ್ರಾಣಿಯ ತರಹ ಕಂಡು ಕವಗುಟ್ಟಿದಳು –

''ಅಯ್ಯೋ... ಸರಕಾರ ಅಂತೀರಾ ?... ಅದರಾಗ ಹಡಗಾ ನುಂಗೋರು ಇರ್ತಾರು. ಡ್ಯಾಮು ನುಂಗೋರು ಸಿಗ್ತಾರು. ಕೋಟಿಗಟ್ಟಲೆ ಗುಳುಂ ಮಾಡೋರು ಮಸ್ತ ಇರ್ತಾರು. ಇದೇನು ಮಹಾ ? ಆಫ್ಟರ್ ಆಲ್ ಮೂರು ನೋಟು ಅಲ್ವಾ ?''

ನಾನೂ ಒಂದು ಬಾಣಾ ಬಿಟ್ಟೆ... ''ಅಲ್ಲಮ್ಮಾ... ಸರಕಾರ ಅಂದ್ರ ಯಾರು ?... ನಾವೇ ತಾನೇ ?... ನಮಗs ನಾವು ಟಪಿಗಿ ಹಾಕೊಂಡರ ಹ್ಯಾಂಗ ?''

ಅವಳು... ''ಇದೊಂದ ಹೊಸಾದಾತು...'' ಎಂದು ವಕ್ರ ತುಟಿಯಿಂದ ಕೆಕ್ಕರಿಸಿ ಪಿಚಗರೆದು... ಜಾಗಾ ಖಾಲಿ ಮಾಡಿದಳು.

ನನ್ನ ಟೆಂಪರೇಚರ್ ಏರ್ತು. ಕೆಂಡಕಿಡಿಯಾದೆ. ಇಂಥಾ ಎಜ್ಯುಕೇಟೆಡ್ಡುಗಳೇ ಸರಕಾರಕ್ಕ ಸಲೀಸಾಗಿ ಕುಲಾಯಿ ಕಟ್ತಾರಲ್ಲಾ ಅಂತ ಒಳಗೊಳಗೇ ಕರಕರ ಹಲ್ಲು ಮಸೆದೆ. ನಮ್ಮ ದೇಶದ ಸಮಗ್ರ ಶಿಕ್ಷಣ ವ್ಯವಸ್ಥೆಯೇ ಡೊಗ್ಗಾಲು ಮಂಡಿ ಊರಿದ ಅನುಭವವಾಯಿತು. ಅಗತ್ಯಕ್ಕಿಂತ ಚೂರು ಹೆಚ್ಚಾಗಿಯೇ ನಾನು ಇಂಥ ಎಜ್ಯುಕೇಟೆಡ್ಡುಗಳ ಮೇಲೆ ದುಮುದುಮು ಉರಿದು, ಹೊಟ್ಟೆಯಲ್ಲಿ ಮುಳ್ಳು ರುಚ್ಚಿದೆ.

ಆ ರಾತ್ರಿ ಕೆಟ್ಟ ಕನಸು ಕಂಡೆ! ಶಿಕ್ಷಣ ದೇವಾಲಯದ ಮೇಲೆ ನಾಯಿಯೊಂದು ಬುಲು ಬುಲು ಉಚ್ಚಿ ಹೊಯ್ಯಿತು! ತಕ್ಷಣ ಎದ್ದು ಕುಂತೆ. ಮಧ್ಯರಾತ್ರಿ ಆಗಿತ್ತು. ಗಂಟಲೊಣಗಿತ್ತು. ಗಟಗಟ ನೀರು ಕುಡಿದೆ.

ನನ್ನ ಹೇಂತಿ ನನಗೆ ಬೈದಳು... ''ರೀ... ಏನ್ರೀ ಇದು... ನಡರಾತ್ರ್ಯಾಗ ದೆವ್ವ ಕುಂತಂಗ ಕುಂತ್ರೆಲ್ಲಾ. ಸುಮ್ಮ ಶಿವಾ ಅಂತ ಮಕ್ಕೊಳ್ರಿ...''

ನಾನು ಮತ್ತೆ ಶವಾಸನ ಹಾಕಿ ಮಲಗಿದೆ.

ಎರಡೇ ದಿನ ಕಳೆದಿತ್ತು. ನಾನೇ ಡೇಲಿ ಸಿಟಿ ಬಸ್ ಪಾಸ್ ಪಡೆದು ಬೆಂಗಳೂರ ಸುತ್ತಾಡಿ ಮಧ್ಯಾನ ವಾಪಸ್ಸು ಬರುತ್ತಿದ್ದೆ. ಆಗ ನನ್ನ ಪರಿಚಯದ ಒಬ್ಬ ರಿಟಾಯರ್ಡ ಆಫೀಸರ ನನ್ನೆದುರು ಬಂದು ಕೇಳಿದ –

''ಏನು... ನಿಮ್ಮ ಜೇಬಿನಲ್ಲಿ ಇವತ್ತಿನ ಪಾಸು ಮಡಿಕ್ಕೊಂಡೀರಾ ?''

ನಾನು – ''ಹೌದು'' ಅಂದೆ.

ಅವರೆಂದರು – ''ಹಾಗಾದ್ರೆ ಕೊಡಿ... ಪರವಾಗಿಲ್ಲಾ... ಬೇಕಾದ್ರೆ ಅರ್ಧಾ ಕಾಸು ನಿಮಗೆ ಕೊಡ್ತೇನೆ... ನಾನೂ ಸಿಟೀಲಿ ಹೊರಟಿರೋದು...''

ನಾನು ಆ ಆಫೀಸರನನ್ನು ಯದ್ವಾತದ್ವಾ ಬೈದೆ.

''ಏನ್ರೀ... ನಿಮ್ಮಂಥಾ ಸೀನಿಯರ್ ಅಧಿಕಾರಿಗಳೇ ಸರಕಾರಕ್ಕೆ ಗುಳುಂಗುಟಕ್ ಕಾಯಕಾ ಮಾಡೀದ್ರ ಹ್ಯಾಂಗ ?''



**ಪ್ರೊ॥ ಜಿ. ಎಚ್. ಹನ್ನೆರಡುಮಠ**

ಅವರು – ''ಅಯ್ಯೋ... ನಿಮಗ ವಸ್ತುಸ್ಥಿತಿ ಗೊತ್ತಿಲ್ವಾ ಸಾರ್? ಈಗ ಎಲ್ಲಾ ನಡೀತಿರೋದೆ ಹೀಗೆ... ಅರ್ಥಾ ಆಯ್ತಾ?''... ಅಂದರು.

ನಾನು ಕೆರಳಿದ ಕಪ್ಪೆಯಂತೆ ಗೊಟರಿದೆ –

''ಹೋಗ್ರಿ... ನೀವೂ ಹಣಾ ಕೊಟ್ಟು ಪಾಸ ತೊಗೊಳ್ರಿ. ನಿಮಗ ನ್ಯಾಯಾ – ಅನ್ಯಾಯಾ ಗೊತ್ತೇ ಇಲ್ವೇನ್ರೀ?''

ಅವರು ನನ್ನನ್ನು ಒಂದು ಗುಬ್ಬಿ ಮರಿಯಂತೆ ನೋಡಿ, ''ಎಂಥಾ ಮೂರ್ಖ ಈ ಪುಕ್ಕ ಪಡಪೋಶಿ...'' ಅನ್ನುವಂತೆ ತಮ್ಮ ತಲೆ ತಾವೇ ಝಾಡಿಸಿಕೊಂಡು ಹೊಂಟುಬಿಟ್ಟರು.

ನಿನ್ನೆ ಇನ್ನೊಂದು ಘಟನೆ ನಡೀತು!

ನನ್ನ ಸೌಭಾಗ್ಯಕ್ಕೆ ನಿನ್ನೆ ಬಸ್ಸಿನಲ್ಲೇ ನನ್ನ ಪಕ್ಕದ ಸೀಟಿನಲ್ಲೇ ಒಬ್ಬ ಹುಡುಗ ಸಿಕ್ಕಿದ. ಹೈಸ್ಕೂಲ ಓದುತ್ತಿದ್ದ ಹುಡುಗ. ಮಾತಿನಲ್ಲಿ ಚೆಣಿಗಿ ಹಾವಾಗಿದ್ದ. ಗಿಡಾ ಮಾತಾಡಿಸಿ ಬರುವ ಹುಡುಗ. ಆತ ನನ್ನನ್ನು ಮಾತಿಗೆ ಎಳೆದ –

''ಅಂಕಲ್... ನೀವು ಡೇಲಿ ಬಸ್ ಪಾಸ ಕೊಂಡಿದ್ದೀರಾ?''

ನಾನೆಂದೆ – ''ಹೌದಪ್ಪಾ... ಯಾಕೆ?''

ಆತ ಕೇಳಿದ – ''ಪೂರಾ ದುಡ್ಡು ಕೊಟ್ಟು ಕೊಂಡಿರಾ?''

''ಹೌದಪ್ಪಾ...'' ಎಂದೆ. ಈ ಮನುಷ್ಯ ಎಂಥಾ ದಡ್ಡಾ ಅನ್ನುವ ತರಹ ನನ್ನ ಕಡೆ ನೋಡಿ ಆ ಹುಡುಗ ಹೇಳಿದ –

''ಅಂಕಲ್... ನಿಮಗ ಗೊತ್ತೇ ಇಲ್ವಾ?... ಈ ಲಾಸ್ಟ ಸ್ಟಾಪಿನಲ್ಲಿ ಯಾರೂ ಪೂರಾ ಪಾಸಿಗೆ ಪೂರಾ ದುಡ್ಡು ಕೊಡೋದಿಲ್ಲಾ. ಬಸ್ ಇಳಿಯುತ್ತಿದ್ದ ಪ್ಯಾಸಿಂಜರ ಕೈಗೆ ಹತ್ರೂಪಾಯಿ ಇಟ್ಟು ಪಾಸ ಕೊಳ್ತಾರೆ. ಕೊಟ್ಟೋರಿಗೂ ಲಾಭಾ. ಕೊಂಡೋರಿಗೂ ಲಾಭಾ. ಕಡಿಮೆ ದುಡ್ನಲ್ಲಿ ಬೆಂಗ್ಳೂರ ಸುತ್ತೋ ಅವಕಾಶ. ಕೊಂಚ ಬುದ್ಧಿ ಉಪಯೋಗಿಸಬೇಡವೇ ಅಂಕಲ್?''

ನಾನು... ಪೆಚಕಲ್ ಆಗಿ... ನನ್ನ ದಡ್ಡತನವನ್ನು ಇನ್ನಷ್ಟು ದೊಡ್ಡದು ಮಾಡಿ ಆ ಹುಡುಗನಿಗೆ ಕೇಳಿದೆ –

''ನನಗೆ ಗೊತ್ತೇ ಇದ್ದಿಲ್ಲಪ್ಪಾ... ನೀವೆಲ್ಲಾ ವಿದ್ಯಾರ್ಥಿಗಳು ಹೀಗೇನಾ ಮಾಡೋದು?''

ಆ ಹೈಸ್ಕೂಲ ಹುಡುಗನಿಗೆ ಅಭಿಮಾನ ಉಕ್ಕಿ ಬಂತು. ಪಟಪಟ ಅಳ್ಳು ಹುರಿದಂತೆ ಹೇಳಿದ –

''ಅಂಕಲ್... ಈ ಲಾಸ್ಟ ಸ್ಟಾಪಲ್ಲಿ ನಡೆಯೂದೆ ಹೀಗೆ. ಬೆಳಗಿನ ಡ್ಯೂಟಿ ಮುಗಿಸಿ ಮದ್ಯಾಣ ಊಟದ ಟಾಯಿಮ್ಮಿಗೆ ಬಂದೋರು ಬಸ್ ಇಳಿಯುತ್ತಿದ್ದಂಗೆ... ಅರ್ಧಾ ಹಣಕ್ಕೆ ತಮ್ಮ ಪಾಸ ಮಾರಿಬಿಡ್ತಾರೆ. ಸರಿ... ಅಷ್ಟರಲ್ಲಿ ಹೋಲ್ ಬೆಂಗಳೂರ ಸಿಟಿ ಸುತ್ತಾಡಿ ಬರಬೋದು. ಆಮೇಲೆ ಕೇಳಿ...''

''ಏನಪ್ಪಾ...?''

''ಮದ್ಯಾನಾ ಎರಡು ಗಂಟೆಗೆ ವಾಪಸ್ಸು ಬರೋರು ತಮ್ಮ ಪಾಸು ಕಾಲು ಹಣಕ್ಕೆ ಮಾರ್ತಾರೆ. ಇಗಾ ಇಲ್ಲಿ ನೋಡಿ... ಈ ಪಾಸು ಹಿಂಗೇ ಕೊಂಡಿರೋದು ನಾನು...''

ನಾನು ಅಚ್ಚರಿಯಿಂದ – ಕುರಿ ಬ್ಯಾ ಅಂದಂತೆ ಬಾಯ್ಬಿಟ್ಟು ಕೇಳಿದೆ –

''ಏನಪ್ಪಾ... ಇದೆಲ್ಲಾ ಮೋಸದ ಮಾರಾಟಾ ಫಿಕ್ಸಾ ಇಲ್ಲಿ?''

''ಹೂಂ ಅಂಕಲ್!... ಬಸ್ ಇಳಿತಾನೇ ನೋಡಿ ಜನಾ ನಿಮ್ಮ ಪಾಸ ಪಡಿಯೋಕೆ ಕ್ಯೂ ನಿಂತಿರ್ತಾರೆ...''

''ಇಲ್ಲಪ್ಪಾ... ಯಾರಾದ್ರೂ ನೋಡೀದ್ರೇ?''

''ಅಯ್ಯೋ... ಈ ಕಾಲದಲ್ಲಿ ಎಲ್ರೂ ನಾವೇ ತಾನೇ! ನಮಗೆಲ್ಲಾ ಒಂದು ತಿಳುವಳಿಕೆ ಇರ್‍ತದೆ. ಯಾರೂ ಏನೂ ಅಂತ ಕೇಳೋಲ್ಲಾ. ಈ ಸೆಕೆಂಡ ವ್ಯವಹಾರದಲ್ಲಿ ನಾವೆಲ್ಲಾ ಫಸ್ಟ ಕಣ್ರಿ! ನೀವು ಬಸ್ ಇಳೀತಾನೆ ನಿಮ್ಮ ಕೈಲಿರೋ ಪಾಸ್ ಸುಮ್ನೆ ಚಾಚಿ ಹಿಡೀರಿ. ಯಾರಾದ್ರೂ ಹತ್ರೂಪಾಯಿ ನೋಟ ನಿಮ್ಮ ಕೈಲಿ ಇಕ್ತಾರೆ. ಆಯ್ತು... ಅಷ್ಟು ಲಾಭಾ ನಮ್ಗೆ...''

''ಅಯ್ಯೋ ದುಷ್ಟಾ... ನೀನು ವಿದ್ಯಾರ್ಥಿಯಾಗಿದ್ದು ರಾಷ್ಟ್ರದ್ರೋಹದ ಇಂಥಾ ಖತರನಾಕ ಕೆಲಸಾ ಮಾಡ್ತೀಯಾ... ಲೋಫರ್... ಸಾಲಿಯಲ್ಲಿ ಯಾರೂ ನಿನಗೆ ಹಿಂಗ ಮಾಡಬಾರ್ದು ಅಂತ ಹೇಳಲಿಲ್ಲವಾ?'' – ಅಂತ ಅವನಿಗೆ ನಾನು ಕೇಳಲು ಹೋದೆ. ನನ್ನ ಬಾಯಿ ಬಿಚ್ಚಲೇ ಇಲ್ಲ! ಸುಡುಸುಡು ಚಾ ಕುಡಿದವರಂತೆ ಲೋಚಗುಟ್ಟಿದೆ... ಅಷ್ಟೇ!!

ಇಂದು ಇನ್ನೊಂದು ವಿಶೇಷ ಘಟನೆ ನಡೆಯಿತು!

ನನ್ನೆದುರಿಗೆ ನನಗಿಂತ ಹತ್ತು ವರ್ಷ ಹಿರಿಯರೊಬ್ಬರು, ಅಧ್ಯಾತ್ಮವಾದಿಗಳು, ಸಾತ್ವಿಕ ಸಂಪನ್ನರು ಬಂದರು. ಅವರು ತೇಜಸ್ವಿಗಳು. ತುಂಬಿದ ವ್ಯಕ್ತಿತ್ವ. ಅವರು ನಕ್ಕರೆ ಕಮಲ ಅರಳುತ್ತಿದ್ದವು. ನುಡಿದರೆ ಕಾರಂಜಿ ಪುಟಿಯುತ್ತಿತ್ತು. ಅಂಥಾ ತಾಯಿ ರೂಪದ ತಪಸ್ವಿಗಳು ಅವರು.

ಅವರು ನನ್ನ ಪರಿಚಯದವರಾಗಿದ್ದರಿಂದ ನನ್ನ ಎದುರಿಗೆ ತಟಕ್ಕನೇ ನಿಂತು ಕೈಚಾಚಿ ಹೇಳಿದರು –

''ತೊಗೊಳ್ಳಿ... ಈ ಗಿಫ್ಟು...''

ನನ್ನ ಕೈಯಲ್ಲಿ ತಮ್ಮ ಆ ದಿನ ಆಗಲೇ ಉಪಯೋಗಿಸಿದ್ದ ಡೇಲಿ ಬಸ್ ಪಾಸ ಇಟ್ಟು ಹೇಳಿದರು –

''ನಂಗೇನೂ ಕಾಸು ಕೊಡಬೇಡಿ... ಇದು ನಿಮಗೆ ಪ್ರಜೆಂಟು. ಇನ್ನೂ ಹನ್ನೆರಡು ತಾಸು ಈ ಸಿಟೀಲಿ ನೀವು ಸಲೀಸಾಗಿ ಸುತ್ತಾಡಬಹುದು. ತೊಗೊಳ್ಳಿ... ಉಪಯೋಗಿಸಿ... ಪರವಾಗಿಲ್ಲಾ...''

ಹಿರಿಯರಾದ ಅವರಿಗೆ ನಾನು ಬಯ್ಯಲಿಲ್ಲ. ಕೆಂಡಕಿಡಿ ಆಗಲಿಲ್ಲ. ಅವರ ಬಗ್ಗೆ ಕೆಟ್ಟದ್ದೂ ಅನಿಸಲಿಲ್ಲ... ಒಳ್ಳೇದೂ ಅನಿಸಲಿಲ್ಲ.

ವಿಚಿತ್ರವೆಂದರೆ ಆ ಡೇಲಿ ಬಸ್ ಪಾಸ್ ಸುಂದರಿ ನನಗೆ ಆಕರ್ಷಕವಾಗಿ ಕಣ್ಣು ಹೊಡೆದಳು!

ಒಂದು ಸೆಕೆಂಡಿನಲ್ಲಿ ನಾನು ಆ ಸುರಸುಂದರಿಯ ಪಾದದಲ್ಲಿ ಜಾರಿಬಿದ್ದು ಅವಳ ಪಾದಕ್ಕೆ ಮುತ್ತಿಡುತ್ತಿದ್ದ ಅನುಭವ ಆಯಿತು!

ಮೋಸ-ವಂಚನೆ ಸಾರ್ವತ್ರಿಕ ಸಹಜ ಸತ್ಯವಾಗಿತ್ತು!!

**ಪ್ರೊ॥ ಜಿ. ಎಚ್. ಹನ್ನೆರಡುಮಠ**
'ಮಾವು ಮಲ್ಲಿಗೆ', ಯೋಗ ಭವನ : ಇಂದ್ರಪ್ರಸ್ಥ
ನ್ಯಾಶನಲ್ ಪಾರ್ಕ ರಸ್ತೆ,
ಗೊಟ್ಟಿಗೆರೆ ಅಂಚೆ, ಬೆಂಗಳೂರು - ೮೩

# ಮಂಗಳಕ್ಕೊಂದು ಪುಷ್ಪಗುಚ್ಛ



ಸಂಜೆಯ ಆಕಾಶದಲ್ಲಿ ಬೆಳಗುತ್ತಿದ್ದ ಮಂಗಳಗ್ರಹ ಈಗ ಕುಂದಿದೆ. ಮಿಥುನದ ಪುನರ್ವಸು ನಕ್ಷತ್ರದಷ್ಟೇ ಮಂಕಾಗಿಬಿಟ್ಟಿರುವ ಇದನ್ನು ಆ ನಕ್ಷತ್ರದ ಸಹಾಯದಿಂದಲೇ ಗುರುತಿಸಬಹುದು. ತಿಂಗಳ ಮೊದಲಲ್ಲಿ ಪುನರ್ವಸುವಿನ ಪಕ್ಕಕ್ಕೆ ಕಾಣುವ ಮಂಗಳ ಕ್ರಮೇಣ ಅದರಿಂದ ದೂರ ಸರಿಯುವುದನ್ನು ಬರಿಗಣ್ಣಿನಿಂದಲೇ ಗುರುತಿಸಬಹುದು. ೧೦ರಂದು ಚಂದ್ರ ಮಂಗಳವನ್ನು ಮರೆಮಾಡುವ ಘಟನೆ – ಆಚ್ಛಾದನೆ – ನಡೆಯಲಿದೆ. ಇದರ ವೈಶಿಷ್ಟ್ಯವೆಂದರೆ ನಮಗೆ ಇದು ಕಾಣುತ್ತದೆ. ಆದ್ದರಿಂದ ದೂರದರ್ಶಕ ದುರ್ಬೀನುಗಳನ್ನು ಸಜ್ಜುಮಾಡಿಟ್ಟುಕೊಳ್ಳಿ. ಅದಿಲ್ಲದಿದ್ದರೆ ತೊಂದರೆಯಿಲ್ಲ. ಬರಿಗಣ್ಣಿಂದ ಆಸ್ವಾದಿಸಲು ಯಾವುದೇ ಉಪಕರಣ ಬೇಕಿಲ್ಲ. ಇಂದಿನ ಡಿಜಿಟಲ್ ಯುಗದಲ್ಲಿ ದೊರಕುತ್ತಿರುವ ವೈವಿಧ್ಯಮಯ ಕ್ಯಾಮರಾಗಳಿಂದ ಯಾವುದೇ ಪೂರ್ವಸಿದ್ಧತೆ ಇಲ್ಲದೆ ಚಿತ್ರೀಕರಿಸುವುದೂ ಸಾಧ್ಯವಿದೆ. ಮಂಗಳವನ್ನು ಆಲಿಂಗಿಸಿ ಮುಂದೆ ಸರಿಯುವ ಚಂದ್ರ ಕ್ರಮೇಣ ಪ್ರಕಾಶಮಾನವಾಗುತ್ತದೆ. ಆದ್ದರಿಂದ ಮಂಗಳದ ಆಸುಪಾಸನ್ನು ನಿಖರವಾಗಿ ಗಮನಿಸಿಕೊಳ್ಳುವುದು ಉಚಿತ. ಹುಣ್ಣಿಮೆಯ ಮುಂದಿನ ದಿನಗಳಲ್ಲಿ ಚಂದ್ರ ಸಂಜೆಯ ಹೊತ್ತು ತಡವಾಗಿ ಉದಯಿಸುವಾಗ ಪುನಃ ಮಂಗಳದತ್ತ ದೃಷ್ಟಿ ಹರಿಸಿ. ಬರಿಗಣ್ಣಿಗೂ ಕಾಣುವ ವ್ಯತ್ಯಾಸವನ್ನು ಗಮನಿಸಿ. ಹದಿನೈದು ದಿನಗಳ ಹಿಂದೆ ಮಂಗಳನ ಪಕ್ಕ ಯಾವುದೇ ನಕ್ಷತ್ರ ಇರಲಿಲ್ಲವೆನ್ನಿಸುತ್ತಿತ್ತು. ಈಗ ಏನೋ ಇದೆ ಎಂಬ ಅಂಶ ತಿಳಿಯುತ್ತದೆ. ದುರ್ಬೀನು ಮತ್ತು ದೂರದರ್ಶಕದಿಂದ ಇದನ್ನು ಮತ್ತೆ ಮತ್ತೆ ಗಮನಿಸಿ. ೨೧ರಿಂದ ೨೩ರ ಅವಧಿಯಲ್ಲಿ ಮಂಗಳನ ಸುತ್ತ ನಕ್ಷತ್ರಗಳು ಗುಂಪು ಕಟ್ಟಿಕೊಂಡ ಹಾಗೆ ಕಾಣುತ್ತದೆ. ಇದೇ ಪ್ರೆಸಿಪಿ ಎಂಬ ಹೆಸರಿನ ನಕ್ಷತ್ರ ಗುಚ್ಛ. ಬೀ ಹೈವ್ - ಜೇನುಗೂಡು ಎಂಬ ಹೆಸರೂ ಅಲ್ಲದೆ ಎಂ ೪೪ ಎಂಬ ಸಂಖ್ಯೆಯೂ ಇದಕ್ಕೆ ಸಂದಿದೆ. ಕಟಕರಾಶಿಯ ಮುಖ್ಯ ಆಕರ್ಷಣೆ ಈ ಗುಚ್ಛ. ಇದನ್ನು ಪ್ರಕಾಶಮಾಲಿನ್ಯವಿಲ್ಲದ ಸ್ಥಳಗಳಿಂದ ಬರಿಗಣ್ಣಿನಿಂದಲೇ ನೋಡಬಹುದು. ಈಗ ಅಂದರೆ ಮಂಗಳ ಅದರ ಮೂಲಕ ಹಾದುಹೋಗುವಾಗ ಗುರುತಿಸಿಟ್ಟುಕೊಳ್ಳಬಹುದು. ಹೀಗೆ ಪುಷ್ಪಗುಚ್ಛದಂತಹ ಈ ಗುಚ್ಛದ ಮಾಲಾರ್ಪಣೆ ಆದಮೇಲೆ ಕ್ರಮೇಣ ಮಂಗಳ ದಿಗಂತದ ಅಂಚಿಗೆ ಸರಿಯುತ್ತದೆ. ಸಂಧ್ಯಾಪ್ರಕಾಶದಲ್ಲಿ ಬೆರೆಯತೊಡಗುತ್ತದೆ. ಎರಡು ತಿಂಗಳಾದ ಮೇಲೆ ಸಂಜೆಯ ಆಕಾಶಕ್ಕೆ ವಿದಾಯ ಹೇಳುವುದರ ಸುಳಿವು ಇದು.

ಸಂಜೆಯಲ್ಲಿ ಕಾಣುವ ಇನ್ನೊಂದು ಗ್ರಹ ಶನಿ. ಸಿಂಹರಾಶಿಯ ಮಘಾ ನಕ್ಷತ್ರದ ಬಳಿ ಕಾಣುವ ಇದನ್ನು ಗುರುತಿಸುವುದೇನೂ ಕಷ್ಟವಿಲ್ಲ. ದೂರದರ್ಶಕದ ಮೂಲಕ ನೋಡಿದಾಗ ಉಂಗುರಗಳ ಓರೆಕೋನದ ವಿವರ ಸಿಗುತ್ತದೆ. ಕಳೆದ ಕೆಲವು ವರ್ಷಗಳಿಂದ ಪ್ರದರ್ಶನಕ್ಕೆ ಇಟ್ಟಂತೆ ಕಾಣುತ್ತಿದ್ದ ಉಂಗುರಗಳು ಈಗ ಓರೆಯಾಗುತ್ತಿವೆ. ದೂರದರ್ಶಕ ಇರುವವರು ಈ ವಿವರಗಳನ್ನು ಚಿತ್ರೀಕರಿಸಬಹುದು; ಅಥವಾ (ಕೈಯಲ್ಲಿ) ಚಿತ್ರ ರಚಿಸಿ ತಾರೀಖು ಸಮೇತ ದಾಖಲು ಮಾಡಿಟ್ಟುಕೊಳ್ಳಬಹುದು.

*ಮಂಗಳದ ಆಚ್ಛಾದನೆಯ ವಿವರಗಳು*

*ಸಂಜೆ ಕತ್ತಲಾಗುವಾಗಲೇ ಮಂಗಳ - ಚಂದ್ರ ಪಕ್ಕ ಪಕ್ಕ ಕಾಣುತ್ತವೆ*

*ಆಚ್ಛಾದನೆಯ ಆರಂಭ ೨೦:೦೩ / ಮುಕ್ತಾಯ ೨೧:೨೪ — ಬೆಂಗಳೂರಿಗೆ ಅನ್ವಯ*

*ಬೇರೆ ಬೇರೆ ಊರುಗಳಲ್ಲಿ ಕೆಲವು ನಿಮಿಷ ವ್ಯತ್ಯಾಸವಾಗುವುದು.*

ಉಳಿದ ಗ್ರಹಗಳಲ್ಲಿ ಗುರು, ಶುಕ್ರ ಬೆಳಗಿನ ಜಾವ ಕಾಣುತ್ತವೆ. ಗುರು ಧನುರಾಶಿಯಲ್ಲಿದೆ. ಸಾಕಷ್ಟು ಪ್ರಕಾಶಮಾನವಾಗಿರುವ ಇದನ್ನು ಸುಲಭವಾಗಿ ಗುರುತಿಸಬಹುದು. ತಿಂಗಳ ಮೊದಲ ಅರ್ಧದಲ್ಲಿ ಚಂದ್ರನ ಬೆಳಕು ಕಡಿಮೆ ಇದ್ದಾಗ ಗುರುಗ್ರಹದ ಸಹಾಯದಿಂದ ಧನು, ವೃಶ್ಚಿಕರಾಶಿಗಳನ್ನು ಗುರುತಿಸಿ, ತನ್ಮೂಲಕ ಆಕಾಶಗಂಗೆಯ ವೈಭವವನ್ನು ಸವಿಯಬಹುದು. ಶುಕ್ರ ಕ್ರಮೇಣ ದಿಗಂತದ ಅಂಚಿಗೆ ಸರಿಯುತ್ತದೆ. ತಿಂಗಳ ಕೊನೆಗೆ ಕಾಣದಾಗುತ್ತದೆ. ಬರುವ ತಿಂಗಳಲ್ಲಿ ಸೂರ್ಯನ ಹಿಂಬದಿಯಲ್ಲಿ ಹಾದು ಸಂಜೆಯ ಆಕಾಶಕ್ಕೆ ಬರಲಿರುವ ಸನ್ನಾಹ ಇದು.

ತಿಂಗಳ ಮೊದಲರ್ಧದಲ್ಲಿ ಸಂಜೆಯ ಪಶ್ಚಿಮದ ಕೆಂಪಿನಲ್ಲಿ ಕರಗಿಹೋಗುವಂತೆ ಕಾಣುವ ಚುಕ್ಕೆಯೇ ಬುಧ. ದಿಗಂತದಿಂದ ಸುಮಾರು ೧೩ ಡಿಗ್ರಿ ಎತ್ತರದಲ್ಲಿ ಕಾಣುವ ಅವಕಾಶ ೧೩ರ ಸಂಜೆ ದೊರಕಲಿದೆ. ಅದಕ್ಕೆ ಮುನ್ನ ತೆಳ್ಳನೆಯ ಚಂದ್ರ ಅದನ್ನು ಹಾದುಹೋಗುವ ಸಂದರ್ಭವನ್ನು ಬಳಸಿಕೊಂಡು ಆ ಚುಕ್ಕೆಯೇ ಬುಧ ಎಂಬುದನ್ನು ಖಚಿತಪಡಿಸಿಕೊಳ್ಳಿ.

ಆಕಾಶಗಂಗೆಯ ನೋಟ ಮಹಾವ್ಯಾಧದ ಭಾಗದ ದೃಶ್ಯ ಮಾತ್ರ ಲಭ್ಯವಿದೆ. ಸಪ್ತರ್ಷಿ ಮಂಡಲ, ದಕ್ಷಿಣದ ಕಿನ್ನರ (ಸೆಂಟಾರಸ್) ಇವುಗಳನ್ನು ನೋಡುವ ಅವಕಾಶ ಇದೆ.

ಹ್ಯಾಲೀ ಧೂಮಕೇತುವಿನ ತುಣುಕುಗಳ ಉಲ್ಕಾ ವೃಷ್ಟಿ ತಿಂಗಳ ಮೊದಲ ವಾರ ಗರಿಷ್ಠವಾಗಲಿದೆ. ಬೆಳಗಿನ ಹೊತ್ತು ಓಡುವ 'ಜಾಗಿಂಗರು' ಮಧ್ಯೆ ಮಧ್ಯೆ ಆಕಾಶದತ್ತ ನೋಡುತ್ತಿದ್ದಲ್ಲಿ ಉಲ್ಕೆಗಳ ನೋಟ ಲಭ್ಯವಾಗುವುದು. ಈ ಉಲ್ಕೆಗಳೆಲ್ಲಾ ಕುಂಭರಾಶಿಯಿಂದ ಹೊರಟಂತೆ ಕಾಣುವುದರಿಂದ ಇದಕ್ಕೆ ಈಟಾ-ಅಕ್ವಾರಿಡ್ಸ್ ಎಂಬ ಹೆಸರಿದೆ. ಈಟಾ ಎಂಬುದು ನಕ್ಷತ್ರ ಸಂಖ್ಯೆ. ಅಮಾವಾಸ್ಯೆಯಂದು ಗರಿಷ್ಠ ಮುಟ್ಟುವುದರಿಂದ ಚಂದ್ರನ ಬೆಳಕಿನ 'ಕಾಟ' ವಿಲ್ಲ.

ಅಮಾವಾಸ್ಯೆಯಂದು ಚಂದ್ರ-ಭೂಮಿ ಅಂತರ ಕನಿಷ್ಠ ಇರುವುದರಿಂದ ಅಂದಿನ ಉಬ್ಬರ ಉಳಿದ ಅಮಾವಾಸ್ಯೆಗಳಿಗಿಂತ ಜೋರು ಎನ್ನಬಹುದು.

ಹುಣ್ಣಿಮೆಯ ಚಂದ್ರ ಅತಿದೊಡ್ಡದಾಗಿ, ಪ್ರಕಾಶಮಾನವಾಗಿ ಕಂಡಿತ್ತು ಎಂಬ ಗುಲ್ಲು ಡಿಸೆಂಬರ್‌ನಲ್ಲಿ ಎದ್ದಿದ್ದುದು ನೆನಪಿರಬೇಕು. ಈ ಹುಣ್ಣಿಮೆಯ ಚಂದ್ರ ಭೂಮಿಯಿಂದ ಗರಿಷ್ಠ ದೂರದಲ್ಲಿರುತ್ತದೆ. ಹಾಗಾದರೆ ಈ ಹುಣ್ಣಿಮೆಯ ಚಂದ್ರ ಮಂಕಾಗಿರುತ್ತದೆಯೇ ? ಚಿಕ್ಕದಾಗಿ ಕಾಣುತ್ತದೆಯೇ ? ಪರೀಕ್ಷಿಸಿ ನೋಡಿ.

**ಖಗೋಳ ದಿನಚರಿ**

| | | |
|---|---|---|
| ಮೇ | ೩ | ಶನಿಗ್ರಹದ ಹಿನ್ನಡೆ ಮುಕ್ತಾಯ |
| | ೫ | ಅಮಾವಾಸ್ಯೆ, ಚಂದ್ರ-ಭೂಮಿ ಅಂತರ ಕನಿಷ್ಠ<br>ಈಟಾ ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ |
| | ೬ | ಬುಧ-ಚಂದ್ರ ಜೋಡಿ |
| | ೯ | ಗುರುಗ್ರಹದ ಹಿನ್ನಡೆ ಆರಂಭ |
| | ೧೦ | ಬುಧ-ರೋಹಿಣಿ ಜೋಡಿ, ಮಂಗಳಗ್ರಹದ ಆಚ್ಛಾದನೆ<br>ರಾತ್ರಿ ೨೦:೦೩ರಿಂದ ೯:೧೪ರವರೆಗೆ |
| | ೧೧ | ಚಾಂದ್ರಮಾಸದ ಮೊದಲ ಪಾದ |
| | ೧೨ | ಚಂದ್ರ-ಮಘ-ಶನಿ ಇವುಗಳ ಪುಟ್ಟ ತ್ರಿಕೋಣ |
| | ೧೩ | ಬುಧಗ್ರಹದ ಗರಿಷ್ಠ ಕೋನೋನ್ನತಿ |
| | ೧೯ | ಹುಣ್ಣಿಮೆ, ಚಂದ್ರ-ಭೂಮಿ ಅಂತರ ಗರಿಷ್ಠ, ಚಂದ್ರ – ಜ್ಯೇಷ್ಠಾ ಜೋಡಿ |
| | ೨೪ | ಚಂದ್ರ-ಗುರು ಜೋಡಿ |
| | ೨೭ | ಚಾಂದ್ರಮಾಸದ ಕೊನೆಯ ಪಾದ |


ಡಾ|| ಬಿ. ಎಸ್. ಶೈಲಜಾ

ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್, ಬೆಂಗಳೂರು

## ಎನ್.ಬಿ.ಟಿ.ಯ ಇತ್ತೀಚಿನ ಪ್ರಕಟಣೆಗಳು

### ಜನಪ್ರಿಯ ಸಮಾಜ ವಿಜ್ಞಾನ

**ಘನತೆಯೊಂದಿಗೆ ಅಭಿವೃದ್ಧಿ**
*ಅಮಿತ್ ಭಾದುರಿ ಅನು : 'ರಾಹು'* **ಪುಟ : 136 ರೂ. 45.00**
ಸಂಪೂರ್ಣ ಉದ್ಯೋಗದ ಸಮರ್ಥನೆ

**ಉದ್ಯೋಗ ಖಾತರಿ ಕಾಯಿದೆ**
*ನಿಖಿಲ್ ಡೇ, ಜ್ಯಾನ್ ಡ್ರೆಝ್,*
*ರೀತಿಕಾ ಖೇರಾ ಅನು : ಎಸ್. ಸೇತುರಾವ್* **ಪುಟ : 56 ರೂ. 12.00**
ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯಿದೆ ಬಗ್ಗೆ ಮಾಹಿತಿ

**ಕೋಮುವಾರು ಸಮಸ್ಯೆ : ಒಂದು ವರದಿ**
*ಅನು : ಈಶ್ವರಚಂದ್ರ* **ಪುಟ : 232 ರೂ. 65.00**
ಕಾನ್‌ಪುರ ಗಲಭೆ ವಿಚಾರಣಾ ಸಮಿತಿಯ ವರದಿ

### ಜನಪ್ರಿಯ ವಿಜ್ಞಾನ

**ಮುಂದಾನೊಂದು ಕಾಲದ ಕಥೆಗಳು**
*ಸಂ : ರಾಜಶೇಖರ ಭೂಸನೂರಮಠ* **ಪುಟ : 128 ರೂ. 50.00**
ಹದಿಮೂರು ವೈಜ್ಞಾನಿಕ ಕಥೆಗಳ ಸಂಕಲನ

**ಶಕ್ತಿ**
*ಎ. ಕೆ. ಬಕ್ಷಿ ಅನು : ಅಡ್ಯನಡ್ಕ ಕೃಷ್ಣಭಟ್ಟ* **ಪುಟ : 96 ರೂ. 60.00**
ಶಕ್ತಿಯ ಪ್ರಾಮುಖ್ಯತೆ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ

### ಇತರ ಮಾಲಿಕೆಗಳ ಪುಸ್ತಕ

**ಶ್ರೀ ಕನಕದಾಸರು**
*ಬಸವರಾಜ ನಾಯ್ಕರ್* **ಪುಟ : 114 ರೂ. 45.00**
ಕನಕದಾಸರ ಜೀವನ ಮತ್ತು ಕೃತಿಯ ಪರಿಚಯ

**ಬೆಳಕು ಚೆಲ್ಲುವ ಹುಡುಗಿ**
*ಟಿ. ಪದ್ಮನಾಭನ್ ಅನು : ಡಾ|| ಅಶೋಕಕುಮಾರ್* **ಪುಟ : 146 ರೂ. 65.00**
ಮಲಯಾಳಂ ಭಾಷೆಯ ಕಥಾ ಸಂಕಲನ

**ಸಿಂಹ ಹಾರುತ್ತಿದ್ದ ಕಾಲದಲ್ಲಿ**
*ನಿಕ್ ಗ್ರೀವ್ಸ್ ಅನು : ಕೃಷ್ಣಮೂರ್ತಿ ಚಂದರ್* **ಪುಟ : 140 ರೂ. 120.00**
ಆಫ್ರಿಕಾ ಪುರಾಣದ ಮೂವತ್ತು ಪ್ರಾಣಿ ಕಥೆಗಳು

### ಮಕ್ಕಳ ಪುಸ್ತಕ

**ಚಿನ್ನಾರಿ ಮುತ್ತ**
*ಎಚ್. ಎಸ್. ವೆಂಕಟೇಶಮೂರ್ತಿ* **ಪುಟ : 76 ರೂ. 35.00**
ಹಳ್ಳಿಗಾಡ ಹುಡುಗ ಕ್ರೀಡಾತಾರೆಯಾದ ಕಥೆ

**ಮಕ್ಕಳು ನೀಡಿದ ಶಿಕ್ಷೆ**
*ನಾ. ಡಿಸೋಜ* **ಪುಟ : 48 ರೂ. 19.00**
ಪರಿಸರ ಸಂರಕ್ಷಣೆ ಬಗ್ಗೆ ನಾಟಕ

**ಸೂರ್ಯ ಬಂದ**
*ವೈದೇಹಿ* **ಪುಟ : 64 ರೂ. 50.00**
ರಾಕ್ಷಸನ ಸೆರೆಯಿಂದ ಸೂರ್ಯನನ್ನು ಬಿಡಿಸುವ ಮಕ್ಕಳ ನಾಟಕ

**ಮತ್ತೆ ಬಂತು ಚಂಪು**
*ಆನಂದ ಪಾಟೀಲ* **ಪುಟ : 40 ರೂ. 35.00**
ಚಂಪು ಎಂಬ ನಾಯಿಮರಿ ಕಥೆ

**ಚೋರಿಮ್‌ನ ಸೇತುವೆ**
*ಸುರೇಖಾ ಪನಂಡಿಕರ್ ಅನು: ಕ. ಸುಧಾ ರಾವ್* **ಪುಟ : 80 ರೂ. 15.00**
ಬಾಲಕನೊಬ್ಬನ ಸಾಹಸ ಕಥೆ

### ಸೃಜನಶೀಲ ಕಲಿಕೆ

**ವಿಜ್ಞಾನ ಕಲಿಯೋಣ (ಸಂಪುಟ 1,2,3,4)** **ಪುಟ : 92, 168, 192, 160**
*ಇಂದುಮತಿ ರಾವ್, ಸಿ.ಎನ್.ಆರ್. ರಾವ್* **ರೂ. 160, 285, 320, 270**
ವಿಜ್ಞಾನದ ಹಲವು ವಿಷಯಗಳ ಸರಳ ಮಾಹಿತಿ

**ಹತ್ತು ಪುಟಾಣಿ ಬೆರಳುಗಳು**
*ಅರವಿಂದ ಗುಪ್ತ ಅನು: ಎಚ್.ಎಸ್.ನಿರಂಜನ ಆರಾಧ್ಯ* **ಪುಟ : 128 ರೂ. 95.00**
ವಿಜ್ಞಾನಗಳ ಪರಿಕಲ್ಪನೆ ಹಾಗೂ ಚಟುವಟಿಕೆಗಳು

### ಸತತ ಶಿಕ್ಷಣ ಪುಸ್ತಕಮಾಲೆ

**ನಮ್ಮ ಸ್ವಾತಂತ್ರ್ಯದ ಕಥೆ**
*ವಿಪಿನ್ ಚಂದ್ರ ಅನು : ತಿಪ್ಪೇಸ್ವಾಮಿ* **ಪುಟ : 54 ರೂ. 12.00**
ಸ್ವಾತಂತ್ರ್ಯ ಹೋರಾಟದ ಸರಳ ನಿರೂಪಣೆ

**ಉತ್ತಮ ಭೋಜನ**
*ರೇಣು ಚೌಹಣ ಅನು : ಜಿ.ಆರ್. ರಂಗಸ್ವಾಮಯ್ಯ* **ಪುಟ : 40 ರೂ. 13.00**
ಉತ್ತಮ ಆಹಾರದ ಬಗ್ಗೆ ಸಂಕ್ಷಿಪ್ತ ಮಾಹಿತಿ


**ಪ್ರತಿ ಅಥವಾ ಮಾಹಿತಿಗಾಗಿ ಸಂಪರ್ಕಿಸಿ :**



**ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ**
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ - 110016
ದೂರವಾಣಿ : 26564020, 26564667
ಫ್ಯಾಕ್ಸ್ : 91-11-26851795
ಇ-ಮೇಲ್ : nbtindia@ndb.vsnl.net.in


ಎನ್.ಬಿ.ಟಿ. ಬುಕ್ ಕ್ಲಬ್ ಸದಸ್ಯರಾಗಿ ಶೇಕಡಾ 20 ರಿಯಾಯಿತಿಯಲ್ಲಿ ಪುಸ್ತಕ ಕೊಳ್ಳಿರಿ


**ದಕ್ಷಿಣ ಪ್ರಾದೇಶಿಕ ಕಾರ್ಯಾಲಯ**
ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಹಾಲ್ ನಂ. 1, ಬಿ.ಡಿ.ಎ.ಷಾಪಿಂಗ್ ಕಾಂಪ್ಲೆಕ್ಸ್
ಬನಶಂಕರಿ ಎರಡನೇ ಹಂತ, ಬೆಂಗಳೂರು - 560070
ದೂರವಾಣಿ - ಫ್ಯಾಕ್ಸ್ : 26711994
ಇ-ಮೇಲ್: nbtindiasro@vsnl.net.in

# ವಸಾಹತುಶಾಹಿ ಅನುಭವ

## ಒಂದು ಪ್ರತಿಕ್ರಿಯೆ

**ವಸಾಹತುಶಾಹಿ ಶಿಕ್ಷಣ ಕ್ರಮದಲ್ಲಿ ಶಾಲೆ ಮತ್ತು ಕಾಲೇಜುಗಳಲ್ಲಿ ಭಾರತೀಯರಿಗೆ ಯೂರೋಪಿನ ಚರಿತ್ರೆ, ಸಾಮಾಜಿಕ ತತ್ವಜ್ಞಾನ, ಹೊಸ ರೀತಿಯ ಪ್ರಭುತ್ವ ಇವುಗಳನ್ನು ಕಲಿಸಲಾಯಿತು. ಮೂಲತಃ ಇವು ಆಧುನಿಕ ಯೂರೋಪಿನ ಪಾಂಡಿತ್ಯಕ್ಕನುಸಾರವಾಗಿ ರೂಪುಗೊಂಡ ಪ್ರಕ್ರಿಯೆಗಳು. ಆಧುನಿಕ ಯೂರೋಪಿನ ಪಾಂಡಿತ್ಯವು ಎದುರಿಸುತ್ತಿದ್ದ ಸಮಸ್ಯೆಗಳು ಮತ್ತು ಅವುಗಳ ಸಮಸ್ಯೆಗಳು : ಶಿಕ್ಷಣದಲ್ಲಿನ ರೂಪು ರೇಷೆಗಳ ಮಾದರಿಗಳೇ ವಸಾಹತು ದೇಶಗಳಲ್ಲಿಯೂ ಮುಂದುವರೆಯಿತು. ಯಾವುದನ್ನು ಆಧುನಿಕ ಯೂರೋಪ್ ಶಿಕ್ಷಣ ಕ್ರಮದಲ್ಲಿ ಜ್ಞಾನವೆಂದು ಗುರುತಿಸಿತೋ ಅದು ಭಾರತೀಯರಲ್ಲಿ ಜ್ಞಾನರೂಪಗಳಾದವು. ಅದು ಚರಿತ್ರೆ, ವಿಜ್ಞಾನ, ಸಾಹಿತ್ಯದ ಅಧ್ಯಯನ ಕ್ರಮಗಳಲ್ಲಿಯೂ ಕಾಣಿಸಿಕೊಂಡಿತು. ಸಾಹಿತ್ಯವನ್ನು ಹೇಗೆ ಓದಬೇಕು ಮತ್ತು ಅದನ್ನು ಗ್ರಹಿಸುವ ವಿಧಾನ ಯಾವುದು ? ಯಾಕೆ ಸಾಹಿತ್ಯದಲ್ಲಿಯೂ ಹೊಸ ಜ್ಞಾನ ಜಗತ್ತಿನ ಪರಿಕರಗಳು ಬೇಕು ಎಂಬುದರಿಂದ ಪ್ರಾರಂಭವಾಗಿ 'ಸಾಮಾಜಿಕ ಜ್ಞಾನ' ಮತ್ತು ವೈಜ್ಞಾನಿಕ ಜ್ಞಾನವೆಂಬುದು ಭಿನ್ನವೆಂದು ಪ್ರತಿಪಾದಿಸಲಾಯಿತು. ಸಾಮಾಜಿಕ ಜ್ಞಾನವೆಂಬುದು ವಿಷಯನಿಷ್ಠವೆಂದೂ, ವೈಜ್ಞಾನಿಕ ಜ್ಞಾನ ವಸ್ತುನಿಷ್ಠವೆಂದೂ ಕಲಿಸಲಾಯಿತು. ವಸ್ತುನಿಷ್ಠತೆಯೆನ್ನುವುದು ಜ್ಞಾನ ಜಗತ್ತಿನ ಪರಮ ಶ್ರೇಷ್ಠತೆಯೆಂದೂ ಪ್ರತಿಪಾದಿಸಲಾಯಿತು. ಇದರಿಂದ ವಿಜ್ಞಾನ ಮತ್ತು ತಂತ್ರಜ್ಞಾನಗಳ ಕಲಿಕೆಯು ಶ್ರೇಷ್ಠ ಮತ್ತು ಅದುವೇ ವಸಾಹತು ರಾಷ್ಟ್ರಗಳಲ್ಲಿಯೂ 'ನಾಗರಿಕತೆ'ಯ ಕಾರಣಕ್ಕಾಗಿ ರೂಪಿಸಲ್ಪಡಬೇಕೆಂದು ಒಂದು ಐತಿಹ್ಯ ಕಟ್ಟಲಾಯಿತು. ಇದರ ಹಿಂದೆ ಇದ್ದ ವಸಾಹತುಶಾಹಿಯ ಕ್ರೌರ್ಯವನ್ನು ಕೂಡ ಮರೆಮಾಚಲಾಯಿತು.**

ಡಾ|| ಕೇಶವಶರ್ಮ ಕೆ.

ವಸಾಹತುಶಾಹಿ ಎನ್ನುವುದು ಆಧುನಿಕ ಯೂರೋಪಿನ ಮಾರುಕಟ್ಟೆಯ ವಿಸ್ತರಣೆ ಮತ್ತು ಯೂರೋಪಿನ ಅಧಿಕಾರ ವಿಸ್ತರಣೆಯ ಫಲ. ಯೂರೋಪ್ ವಸಾಹತು ರಾಷ್ಟ್ರಗಳಲ್ಲಿ ಹೊಸ ರೀತಿಯ ಉತ್ಪಾದನೆಯ ಸಂಬಂಧಗಳನ್ನು ತನ್ನ ಅಗತ್ಯಕ್ಕೆ ತಕ್ಕಂತೆ ರೂಪಿಸಿತು. ವಸಾಹತುಶಾಹಿ ಅನುಭವಕ್ಕಿಂತ ಪೂರ್ವದ ರಾಜಕೀಯ ಪ್ರಭುತ್ವದ ರೂಪಕ್ಕೂ – ವಸಾಹತುಶಾಹಿ ಅನುಭವದ ಅನಂತರದ ಪ್ರಭುತ್ವದ ರೂಪಕ್ಕೂ ವ್ಯತ್ಯಾಸವಿದೆ. ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ವಸಾಹತುಶಾಹಿ ರಾಷ್ಟ್ರಗಳಲ್ಲಿ ಬಂಡವಾಳವಾದದ ಪ್ರಭಾವವು ಆ ರಾಷ್ಟ್ರಗಳಿಗೆ ಉಂಟಾಯಿತು. ಬಂಡವಾಳವಾದ, ಯಂತ್ರ ನಾಗರಿಕತೆ, ರಾಜಕೀಯ ಪ್ರಭುತ್ವಗಳು ವಸಾಹತುಶಾಹಿ ರಾಷ್ಟ್ರಗಳ ಮೇಲೆ ಪರಿಣಾಮ ಬೀರಿತು. ಇದರಿಂದ – ಅಂದರೆ ಉತ್ಪಾದನೆಯ ವಿಧಿವಿಧಾನಗಳಲ್ಲಿ ಉಂಟಾದ ಪರಿವರ್ತನೆಯು ಸಮಾಜದ ಪಲ್ಲಟಕ್ಕೆ ಕಾರಣವಾಯಿತು. ವಸಾಹತುದೇಶಗಳ ಮೇಲಿನ ಪ್ರಾದೇಶಿಕ ಆಕ್ರಮಣವೂ ಕೇವಲ ಪ್ರಾದೇಶಿಕ ಆಕ್ರಮಣಕ್ಕೆ ಮಾತ್ರ ಕಾರಣವಾಗಿರದೆ ಅದು ಮಾರುಕಟ್ಟೆಯ ವಿಸ್ತರಣೆ, ಸಾಂಸ್ಕೃತಿಕ ವಿಸ್ತರಣೆಯ ಅಂಶಗಳನ್ನೂ ಒಳಗೊಂಡಿತ್ತು. ವಸಾಹತುಶಾಹಿ ಅನುಭವವೆನ್ನುವುದು ಈ ಕಾರಣದಿಂದ ಬರಿಯ ರಾಜಕೀಯ ಮತ್ತು ಆರ್ಥಿಕ ಪ್ರಭಾವಗಳಿಗೆ ಕಾರಣವಾಗಿರಲಿಲ್ಲ. ಅದು ವಸಾಹತು ದೇಶಗಳಲ್ಲಿ ನಿರ್ದಿಷ್ಟ ತಾತ್ವಿಕತೆಯನ್ನು ರೂಪಿಸಲು ಕಾರಣವಾಯಿತು. ಸಾಮಾಜಿಕ ಪರಿವರ್ತನೆಯಲ್ಲಿ ಒಂದು ಪ್ರಮುಖ ಪಾತ್ರವನ್ನು ವಸಾಹತು ಆಡಳಿತವು ಚಾಲ್ತಿಗೆ ತಂದಿತು. ಕೈಗಾರಿಕೀಕರಣದ ಅರ್ಥಶಾಸ್ತ್ರವು ವಸಾಹತುಶಾಹಿಯ ಪ್ರಭಾವ. ಇದಕ್ಕನುಗುಣವಾದ ವಸಾಹತು ಪ್ರಭುತ್ವ ರೂಪುಗೊಂಡಿತು. ಭಾರತದಲ್ಲಿ ಸ್ವಾತಂತ್ರ್ಯದ ಅನಂತರದ ಜೀವನ ಕ್ರಮವನ್ನು ವಸಾಹತೋತ್ತರ ಚಿಂತನೆಯ ಕ್ರಮವೆಂದೂ ಕರೆಯುತ್ತೇವೆ. ವಸಾಹತೋತ್ತರ ಚಿಂತನೆಯ ಕ್ರಮವೂ ಕೂಡ ಬೇರೆ ಬೇರೆ ಚಿಂತನಾಕ್ರಮಗಳ ಹಾದಿಯನ್ನು ಪಡೆದುಕೊಂಡಿದೆ. ಅದು 'ದೇಶಿವಾದ' 'ವಿಸ್ಮೃತಿಯ ಪರಿಕಲ್ಪನೆ' 'ಪರ್ಯಾಯ ಅಧ್ಯಯನ ಕ್ರಮಗಳು' ಇತ್ಯಾದಿ. ಇಲ್ಲಿ ವಸಾಹತು ಶಾಹಿ ಮತ್ತು ವಸಾಹತೋತ್ತರ ಚಿಂತನೆಗಳಿಗೆ ಮಾರ್ಕ್ಸ್‌ವಾದಿ ಪ್ರತಿಕ್ರಿಯೆಗಳ ಸ್ಥೂಲಚಿತ್ರಣವನ್ನು ಟಿಪ್ಪಣಿಗಳ ಮೂಲಕ ನೀಡಲಾಗಿದೆ. ವಸಾಹತುಶಾಹಿ ಅನುಭವ ಮತ್ತು ವಸಾಹತೋತ್ತರಕ್ಕೆ ಈ ದೃಷ್ಟಿಯಿಂದ ಬೇರೆ ಬೇರೆ ರೀತಿಯ ವ್ಯಾಖ್ಯಾನಗಳಿವೆ. ಆದರೆ ವಸಾಹತು ಶಾಹಿ ಅನುಭವದ ಸಂದರ್ಭದಲ್ಲಿ ಬ್ರಿಟಿಷ್ ಅಧಿಕಾರವು, ಯಜಮಾನಿಕೆಯ ಅಥವಾ ಅಧಿಕಾರರೂಪವಾದರೆ ಭಾರತವು ಆಳಿಸಿಕೊಳ್ಳುವ ರೂಪವಾಗಿದೆ. ಆದುದರಿಂದ ವಸಾಹತುಶಾಹಿ ಅನುಭವವೆಂದರೆ ಆಳುವ ಮತ್ತು ಆಳಿಸಿಕೊಳ್ಳುವ ವರ್ಗಗಳ ನಡುವಣ ಸಂವಾದ ಮತ್ತು ವಸಾಹತು ಅನುಭವದ ಸಂದರ್ಭ ಮತ್ತು ವಸಾಹತೋತ್ತರ ಸಂದರ್ಭ ಎರಡೂ ಅತ್ಯಂತ ಸಂಕೀರ್ಣ ರೂಪದ್ದಾಗಿದೆ. ವಸಾಹತು ಆಡಳಿತಕ್ಕೆ ಸಂಬಂಧಿಸಿದಂತೆ ಅದು ಬಂಡವಾಳದ ವಿಸ್ತರಣೆ ಮತ್ತು ಸಾಂಸ್ಕೃತಿಕ ವಿಸ್ತರಣೆ. ಅಂದರೆ ಅದು 'ವಸಾಹತು' ದೇಶವನ್ನು ತನ್ನ ಪ್ರಭುತ್ವದ ನೀತಿಗೆ ಅನುಸಾರವಾಗಿ ನೋಡಿತು. ವಸಾಹತುಶಾಹಿ ಆಡಳಿತವು ತನ್ನ ರಾಜಕೀಯ ನೀತಿಯಲ್ಲಿ ತನ್ನ ಪ್ರಭುತ್ವದಲ್ಲಿ ಏಕಕೇಂದ್ರಿತವಾದ ದೃಷ್ಟಿಕೋನ ಹೊಂದಿತ್ತು. ಅಂದರೆ ಒಂದು ಅರ್ಥದಲ್ಲಿ 'ಪ್ರಭುತ್ವದ ಏಕರೂಪಿಯಾದ ಚಿಂತನೆ'ಯು ದೇಶೀಯ ಆಡಳಿತ ಪದ್ಧತಿಯನ್ನು ನಿರಾಕರಿಸಿತು. ಇದನ್ನು ಬೇರೊಂದು ರೀತಿಯಲ್ಲಿ ವಿವರಿಸಬೇಕೆಂದರೆ – ಬ್ರಿಟಿಷ್ ಆಡಳಿತಕ್ಕಿಂತ ಪೂರ್ವದಲ್ಲಿದ್ದ 'ಪ್ರಭುತ್ವ'ದ ಪರಿಕಲ್ಪನೆ. ವಸಾಹತು ಆಡಳಿತದ ಅನಂತರ ರೂಪುಗೊಂಡ ಪ್ರಭುತ್ವದ ಪರಿಕಲ್ಪನೆಯು ಬೇರೆ. ಸ್ಥಳೀಯ ಅರಸೊತ್ತಿಗೆಯಲ್ಲಿದ್ದ ಕಾನೂನುಗಳು; ಅದರ ನಿಯಮಾವಳಿಗಳು; ಅದು ಆಡಳಿತವನ್ನು ನಡೆಸುತ್ತಿದ್ದ ಕ್ರಮಗಳು ಬೇರೆ. ಸ್ಥಳೀಯ ಆಡಳಿತದ ಸಂದರ್ಭದಲ್ಲಿದ್ದ ಎಲ್ಲಾ ಕಾಲಘಟ್ಟದಲ್ಲೂ, ಎಲ್ಲಾ ಅರಸೊತ್ತಿಗೆಯಲ್ಲಿಯೂ ಒಂದೇ ರೀತಿಯಲ್ಲಿ ಇರಲಿಲ್ಲ. ಒಂದು ಅರಸೊತ್ತಿಗೆಯಲ್ಲಿ ನ್ಯಾಯಪದ್ಧತಿ ಮತ್ತೊಂದು ಅರಸೊತ್ತಿಗೆಯ ನ್ಯಾಯಪದ್ಧತಿಗಳು ಬೇರೆ ಬೇರೆಯಾಗಿದ್ದವು. ಅರಸೊತ್ತಿಗೆ, ಧರ್ಮ, ಸಮಾಜ, ಆರ್ಥಿಕತೆ – ಈ ನಾಲ್ಕು ಅಂಶಗಳು ಜೊತೆ ಜೊತೆಯಲ್ಲಿ ಸಾಗುತ್ತಿದ್ದವು. ಆದರಿಂದಾಗಿ ವಸಾಹತುಪೂರ್ವದ ಸಾಂಸ್ಕೃತಿಕ ಸಂದರ್ಭದ ವಿಶ್ಲೇಷಣೆಯಲ್ಲಿ ಇವು ಪ್ರಧಾನಪಾತ್ರವನ್ನು ವಹಿಸಿದವು ಮತ್ತು ಅವಕ್ಕೆ ಬಿಡಿಸಲಾರದ ನಂಟು ಇದ್ದವು. ನಾವು ಈಗ ಸಾಮಾನ್ಯವಾಗಿ ವಸಾಹತು ಪೂರ್ವದ ಸನ್ನಿವೇಶ ಎಂದರೆ ಜಮೀನುದಾರಿ ಪದ್ಧತಿ ಎಂದು ಏನು ಸರಳೀಕರಿಸುತ್ತೇವೋ ಅದು ಸರಳೀಕರಣವಾದುದಾಗಿರಲಿಲ್ಲ ಎನ್ನುವುದನ್ನು ಗಮನಿಸಬೇಕು. ವಸಾಹತುಶಾಹಿ ಪ್ರಭುತ್ವವು ಈ ಮಾದರಿಯಾಗಿರಲಿಲ್ಲ. ಕೇಂದ್ರೀಕೃತ ರಾಜಕೀಯ ಪ್ರಭುತ್ವವನ್ನು ಮತ್ತು ಅದಕ್ಕೆ ತಕ್ಕ ರಾಜಕೀಯ ರಣನೀತಿಯನ್ನು ಅದು ಬಳಸಿಕೊಂಡಿತು. ಒಂದು ಕಡೆಯಿಂದ ಪ್ರಭುತ್ವದ ವಿಸ್ತರಣೆ – ಅದಕ್ಕೆ ತಕ್ಕ ಯೂರೋಪಿಯನ್ ಮಾದರಿಯ ನ್ಯಾಯ-ಕಾನೂನುಗಳ ವ್ಯವಸ್ಥೆ ಜಾರಿಗೆ ಬಂತು. ಉದಾಹರಣೆಗೆ, ಬ್ರಿಟಿಷ್ ಪ್ರಭುತ್ವವು ಜಾರಿಗೆ ತಂದ ಭೂಮಾಪನ ಪದ್ಧತಿ, ಶಿಕ್ಷಣನೀತಿ, ನ್ಯಾಯಾಂಗ ವ್ಯವಸ್ಥೆ (ಉದಾ : ಮ್ಯಾಜಿಸ್ಟ್ರೇಟ್ ಅಧಿಕಾರ) ವಸಾಹತುದೇಶಗಳಲ್ಲಿ ಪರಿವರ್ತನೆಯನ್ನು ತಂದಿತು. ಕೈಗಾರಿಕೆಗಳು, ತಂತ್ರಜ್ಞಾನ, ಹೊಸರೀತಿಯ ಸಂಪರ್ಕ ವ್ಯವಸ್ಥೆಗಳು ಮತ್ತೊಂದು ರೀತಿಯ ಬದಲಾವಣೆಗೆ ಕಾರಣವಾಯಿತು. ಬಂಡವಾಳಶಾಹಿ ಮಾದರಿಯ ಉತ್ಪಾದನೆಯು ಸಂಬಂಧವನ್ನು ಪರಿವರ್ತಿಸಿತು [illegible] ಮಾರುಕಟ್ಟೆಯನ್ನು [illegible] ಪರಿವರ್ತನೆಗೆ

ಕಾರಣವಾಯಿತು ಎನ್ನುವುದು ಮುಖ್ಯಅಂಶ. ವಸಾಹತೋತ್ತರ ಸಂದರ್ಭದಲ್ಲಿಯೂ ಕೆಲವು ಮುಖ್ಯ ಪ್ರಶ್ನೆಗಳಿದ್ದವು. ಅದು ಭಾರತೀಯ ಸಾಮಾಜಿಕ ಅಭಿವೃದ್ಧಿಯ ಸಮಸ್ಯೆ, ರಾಷ್ಟ್ರೀಯತೆಯ ಅನಂತರದ ಸಮಸ್ಯೆ ಹಾಗೆಯೇ ಜಾಗತಿಕ ಅರ್ಥಶಾಸ್ತ್ರವನ್ನು ಭಾರತವು ಒಳಗೊಳ್ಳಬೇಕಾದ ಸಂದರ್ಭ – ಹೀಗೆ ಇವು ಬೇರೆ ಬೇರೆ ರೀತಿಯಲ್ಲಿ ಎದುರಾಗಬೇಕಾಯಿತು. ವಸಾಹತೋತ್ತರ ಸಂದರ್ಭದಲ್ಲಿಯೂ ಜಾಗತಿಕೀಕರಣವೆನ್ನುವುದು ಮೂರನೆಯ ಜಗತ್ತಿನ ಮೇಲೆ ಪ್ರಭಾವ ಬೀರಿತು. ಜಾಗತೀಕರಣದ ಪ್ರಭಾವ ಮತ್ತು ವಸಾಹತುಶಾಹಿ ಅನುಭವದ ಪ್ರಭಾವ, ರಾಷ್ಟ್ರೀಯತಾವಾದಿ ಚಿಂತನೆ : ಒಂದು ದೇಶದ ಮೇಲೆ ಬಿದ್ದಾಗ ಆಗುವ ಅನುಭವ ಸಣ್ಣದಲ್ಲ. ಒಂದು ಸಾಮಾಜಿಕ ಜನಜೀವನದ ಮೇಲೆ ವಿಚಿತ್ರ ಪ್ರಭಾವ ಮತ್ತು ಬೇರೆ ಬೇರೆ ಆಮಿಷಗಳನ್ನು ಒಡ್ಡುವುದು ಸಂಕೀರ್ಣವೆಂದು ನಾವು ಗುರುತಿಸಬಹುದು.

ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಹೀಗೆ ರಾಜಕೀಯ ಅಧಿಕಾರ ನಿರ್ದಿಷ್ಟ ನಿರ್ವಚನಕ್ಕೆ ಸಂಬಂಧಿಸಿದುದಲ್ಲ. ಅದಕ್ಕೆ ಇದ್ದ ಪ್ರಭುತ್ವದ ಸಂಕೇತವು ಏಕರೂಪಿಯಾದರೂ ಅದರ ಪರಿಣಾಮವು ಏಕರೂಪಿಯಾಗಿರಲಿಲ್ಲ. ಅದರಿಂದಾಗಿ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಬದಲಾವಣೆಗಳು ರೂಪುಗೊಂಡಿದ್ದವು.

ವಸಾಹತುಶಾಹಿ ಅನುಭವದಿಂದ ವಸಾಹತು ರಾಷ್ಟ್ರಗಳಲ್ಲಿ ಒಂದು ಮಹತ್ವದ ಪ್ರಕ್ರಿಯೆಯು ಜರುಗಿತು. ಇದನ್ನು ನಾವು 'ರಾಷ್ಟ್ರೀಯತೆಯ ಪ್ರಜ್ಞೆ' ಎಂದು ಗುರುತಿಸಬಹುದು. ಈ ರಾಷ್ಟ್ರೀಯತೆಯ ಪ್ರಜ್ಞೆಗೆ ಸಂಬಂಧಿಸಿದಂತೆ ಕೆಲವು ಸಮಸ್ಯೆಗಳಿವೆ :

೧) ರಾಷ್ಟ್ರೀಯತೆಯ ಪ್ರಜ್ಞೆಯು ಒಂದು ಆದರ್ಶ.

೨) ರಾಷ್ಟ್ರೀಯತಾವಾದವು ನಿರ್ದಿಷ್ಟ ಸೀಮಾರೇಖೆಯನ್ನು ಒಳಗೊಂಡಿರುತ್ತದೆ.

೩) ರಾಷ್ಟ್ರೀಯಪ್ರಜ್ಞೆ ಸ್ವ ಮತ್ತು ಅನ್ಯ ಎಂಬುದನ್ನೂ ಬೇರೆಬೇರೆಯಾಗಿ ನೋಡುತ್ತದೆ.

೪) ರಾಷ್ಟ್ರೀಯವಾದಿ ಹೋರಾಟವನ್ನು ಎರಡು ರೀತಿಯಲ್ಲಿ ಅರ್ಥವಿಸಿಕೊಳ್ಳಬಹುದು. ಮೊದಲನೆಯದಾಗಿ ಅದು ವಿರೋಧಿಸುವ ಪ್ರಭುತ್ವಕ್ಕಿದ್ದ ಬಂಡವಾಳವಾದಿ ಮುಖ. ಎರಡನೆಯದು ಒಂದು ಹಂತದವರೆಗೆ ಅದು ಎಲ್ಲರನ್ನೂ ಸಮಾನರೆಂದು ಪರಿಗಣಿಸುತ್ತದೆ. ಆದುದರಿಂದಲೇ ಅಂತರರಾಷ್ಟ್ರೀಯ ಕಾರ್ಮಿಕ ಏಕತೆಗೆ ಧಕ್ಕೆ ತರುವ ರಾಷ್ಟ್ರೀಯತಾವಾದವು ಮಾರ್ಕ್ಸ್‌ವಾದಿಗಳಿಗೆ ಮೊದಮೊದಲು ಅನುಮಾನ ಹುಟ್ಟಿಸಿದರೂ ಅನಂತರ ಅದನ್ನು ಒಪ್ಪಿಕೊಂಡರು.

೫) ವಸಾಹತುಶಾಹಿಯ ವಿರುದ್ಧ ಹೋರಾಡುವುದೆಂದರೆ ರಾಷ್ಟ್ರೀಯತೆಯನ್ನು ಕಟ್ಟುವುದು, ವಸಾಹತುವಾದದ ವಿರೋಧವೆಂದರೆ ರಾಷ್ಟ್ರೀಯ ಪ್ರಜ್ಞೆಯನ್ನು ಜಾಗೃತಗೊಳಿಸುವುದು ಎಂದು ರಾಷ್ಟ್ರೀಯವಾದಿಗಳು ಭಾವಿಸಿದ್ದರು. ಇದರಿಂದ ಸಾಂಸ್ಕೃತಿಕ ರಾಷ್ಟ್ರೀಯತೆ, ರಾಷ್ಟ್ರೀಯ ಅನನ್ಯತೆ ಮತ್ತು ರಾಷ್ಟ್ರೀಯ ಏಕತೆಯೆಂಬ ತಾತ್ವಿಕತೆಯು ಮುಂಚೂಣಿಗೆ ಬಂತು.

೬) ರಾಷ್ಟ್ರೀಯತೆಯ ಪ್ರಜ್ಞೆ ಎನ್ನುವುದು ಈ ದೃಷ್ಟಿಯಿಂದ ರಾಷ್ಟ್ರೀಯತೆಯ ಆಯಾಮವನ್ನು ಮಾತ್ರ ಹೊಂದಿರಲಿಲ್ಲ. ಭಾರತೀಯ ರಾಷ್ಟ್ರೀಯತಾವಾದಿ ಚಿಂತನೆಗೆ ಅಂತರ ರಾಷ್ಟ್ರೀಯ ಆಯಾಮವೂ ಇತ್ತು. ಇದುವೇ ಸಾಂಸ್ಕೃತಿಕ ರಾಷ್ಟ್ರೀಯವಾದಕ್ಕೆ ಕಾರಣವಾಯಿತು.

ಒಂದಂಶವನ್ನು ಗಮನಿಸಬೇಕು – ವಸಾಹತುಶಾಹಿ ಅನುಭವದಲ್ಲಿ ಆಳುವವರ ಮತ್ತು ಆಳಿಸಿಕೊಳ್ಳುವವರ ನಡುವೆ ಏಕಮುಖಿಯಾದ ಮತ್ತು ಬರಿಯ ಆಳ್ವಿಕೆಗೆ ಸಂಬಂಧಪಟ್ಟ ವಿಚಾರಗಳು ಮಾತ್ರವೇ ಇತ್ತು ಎಂದು ಭಾವಿಸುವಂತಿಲ್ಲ. ಅದರಲ್ಲಿ ಕೊಳು-ಕೊಡುವಿಕೆಯೂ ಕೂಡ ಇತ್ತು. ಅಂದರೆ ವಸಾಹತುಶಾಹಿ ಅನುಭವಕ್ಕೆ ಒಳಗಾದವರು ಬರಿಯ ಸ್ವೀಕರಿಸುವವರು ಮತ್ತು ವಸಾಹತು ಆಡಳಿತ ನಡೆಸುವವರು ಬರಿಯ ದಾನಿಗಳು ಮಾತ್ರವೆಂದು ಪರಿಗಣಿಸುವುದು ಸಾಧ್ಯವಿಲ್ಲ. ಹಾಗೆಯೇ ವಸಾಹತುಶಾಹಿ ಸಂದರ್ಭದಲ್ಲಿ ಯುರೋಪಿನ ಸಂಸ್ಕೃತಿ ಎನ್ನುವುದು ಮೂರ್ತರೂಪ ; ಕೆಲವೇ ಕೆಲವು ನಿರ್ದಿಷ್ಟ ನಿಯಮ ಸಂಹಿತೆಗಳನ್ನು ಮಾತ್ರವೇ ಒಳಗೊಂಡಿರಲಿಲ್ಲ. ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಸಾಂಸ್ಕೃತಿಕ ರೂಪ ಮತ್ತು ಯೂರೋಪಿಯನ್ ಸಂಸ್ಕೃತಿಯ




ಅನುಭವ ಎರಡೂ ಆಯ್ಕೆ ಮತ್ತು ತಾತ್ವಿಕತೆಗೆ ಅನುಸಾರವಾಗಿ ದಾಖಲೆಗೊಂಡಿತು. ದಾಖಲಾಗದ ಅನೇಕ ಅನುಭವಗಳು ರೂಢಿಗೆ ಬಂದರೂ ಅವಕ್ಕೆಲ್ಲಾ ಖಚಿತ ರೂಪಗಳಿಲ್ಲ. ವಸಾಹತುಶಾಹಿ ಅನುಭವಕ್ಕೆ ಆದಿವಾಸಿಗಳ, ಬುಡಕಟ್ಟು ಜನರ ಪ್ರತಿಕ್ರಿಯೆಯು ಹೇಗಿತ್ತು ಎಂದು ಊಹಿಸುವುದು, ಬರವಣಿಗೆಗೆ ಸಂಬಂಧಿಸಿದಂತೆ – 'ಆಯ್ಕೆ'ಯೂ ಬೇರೆ ಬೇರೆ ಲೇಖಕರ ಸಂದರ್ಭದಲ್ಲಿ ಬೇರೆ ಬೇರೆಯಾಯಿತು. ಅದು ಕಾದಂಬರಿ, ಭಾವಗೀತೆ, ದುರಂತ ನಾಟಕಗಳು – ಹೀಗೆ ಬೇರೆ ಬೇರೆ ಮಾದರಿಗಳಾದ ಹಾಗೆಯೇ ಸ್ಥಳೀಯತೆ, ಪ್ರಾದೇಶಿಕ ಭಾಷೆ, ನಮ್ಮ ಲೇಖಕರು ಎಂಬ ಪರಿಕಲ್ಪನೆಗಳು ಪರ್ಯಾಯವಾಗಿ ವಸಾಹತುಶಾಹಿ ಅನುಭವಕ್ಕೆ ಪ್ರತಿಕ್ರಿಯೆಯಾಗಿತ್ತು. ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಉಂಟಾದ ಉತ್ಪಾದನಾ ಸಂಬಂಧಗಳ ಪರಿವರ್ತನೆಯು ಸಾಮಾಜಿಕಪ್ರಜ್ಞೆಯ ವರ್ಗಾವಣೆಗೆ ಕಾರಣವಾಯಿತು. ವಸಾಹತುಶಾಹಿ ಅನುಭವವೆನ್ನುವುದು ಅನೇಕ ರೀತಿಯ ವಿನಿಮಯವನ್ನು ಒಳಗೊಂಡಿತ್ತು ಮತ್ತು ಅದರ ರೂಪವು ಸಂಕೀರ್ಣವಾಗಿತ್ತು ಎಂದು ಹರೀಶ್ ತ್ರಿವೇದಿಯವರು ಹೇಳುತ್ತಾರೆ. ಇದು ಗಮನಾರ್ಹವಾದ ಅಂಶವಾಗಿದೆ.

ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಹೊಸರೀತಿಯ ಮಾನವೀಯ ಸಮಸ್ಯೆಗಳನ್ನು ಎದುರಿಸಲೇಬೇಕಾಯಿತು. ಅದರಿಂದಾಗಿ ವಸಾಹತು ರಾಷ್ಟ್ರಗಳಲ್ಲಿ ಸತ್ಯದ ಅನ್ವೇಷಣೆ ಎನ್ನುವುದು ಹೊಸ ವ್ಯಾಖ್ಯಾನಕ್ಕೆ ಗುರಿಯಾಗಬೇಕಾಯಿತು. (ಫ್ಯಾನನ್ ೧೯೯೦. ಪು. ೨೫೨)

ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಪ್ರಭುತ್ವ ಮತ್ತು ಆಳಿಸಿಕೊಂಡ ಸಂಸ್ಕೃತಿಯ ಸಂಬಂಧವೂ ಸಂಕರ ತಳಿಯ ರೂಪ (ಹೈಬ್ರಿಡ್) ಎಂದು ಹೇಳಬಹುದು (ಎಡ್ವರ್ಡ್ ಸೈಯಿದ್. ೧೯೯೩ ಪು. ೧೨೯). ಅವನ ಪ್ರಕಾರ ನಿರ್ವಸಾಹತೀಕರಣ ಎಂದರೆ ಚರಿತ್ರೆ ಮತ್ತು ಸಂಸ್ಕೃತಿಯೊಂದಿಗಿನ ಅನುಸಂಧಾನ ಮತ್ತು ಹೊಸದನ್ನು ಕಲ್ಪಿಸಿಕೊಂಡು ನಡೆಸುವ ಹೋರಾಟ. ಹೀಗಾಗಿ ವಸಾಹತುಶಾಹಿ ಅನುಭವಕ್ಕೆ ಪ್ರತಿಕ್ರಿಯಿಸುವುದೆಂದರೆ ಬಹುಮುಖಿಯಾದ ನಿರೂಪಣಾ ಕ್ರಮಗಳನ್ನು ಒಳಗೊಳ್ಳುವುದು. ಅದು ಜ್ಞಾನಕ್ಕೆ ಮಾತ್ರವೇ ಸಂಬಂಧಿಸಿದ ಪ್ರತಿಕ್ರಿಯೆಯಲ್ಲ. ರಾಷ್ಟ್ರೀಯ ಸ್ವಾತಂತ್ರ್ಯ ಎನ್ನುವುದು ಒಂದು ರೀತಿಯಿಂದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಭಾಷೆಗಳಿಗೆ ಮಾತ್ರ ಸೀಮಿತವಾದುದಲ್ಲ. ಇದಕ್ಕೆ ಬಹುಮುಖಿಯಾದ ಅರ್ಥವಿದೆ. ಆದುದರಿಂದ ವಸಾಹತೋತ್ತರ ಸಂದರ್ಭದಲ್ಲಿ ತುಂಬಾ ಆಕರ್ಷಕವಾಗಿ ಚಾಲ್ತಿಗೆ ಬಂದಿರುವ 'ಚಾರಿತ್ರಿಕ ವಿಸ್ಮೃತಿ' ಎನ್ನುವುದು ನಿರ್ದಿಷ್ಟ ಸನ್ನಿವೇಶದಿಂದ ಕೂಡಿರುವ ಒಂದು ಪ್ರವೇಶ ಮಾತ್ರ. ಕಳೆದುಹೋದ ಸನ್ನಿವೇಶಗಳಿಗೆ ಒಂದು ಅಂತಸ್ಥ ಅರ್ಥವಿದೆಯೆಂದೂ, ಅದನ್ನು ಪುನರ್ ಶೋಧಿಸಿ ಮತ್ತೆ ಕಟ್ಟಬೇಕಾದ ಅಗತ್ಯವಿದೆಯೆಂದೂ ವಿಸ್ಮೃತಿಯ ಕಲ್ಪನೆಯು ವಿವರಿಸುತ್ತದೆ. ಆದರೆ ಅದು ಸಂಪೂರ್ಣ ನಿಜವಲ್ಲ.

ವಸಾಹತುಶಾಹಿ ಅನುಭವದಲ್ಲಿ ಮತ್ತೊಂದು ಪ್ರಕ್ರಿಯೆಯು ಜರುಗಿತು. ಅದು ಅಧಿಕಾರದ ಮತ್ತು ವ್ಯಕ್ತಿ ಸಂಬಂಧದ ನಿರೂಪಣೆ. ಅಧಿಕಾರವೆನ್ನುವುದು ರಾಜಕೀಯ ಮತ್ತು ಸಾಂಸ್ಕೃತಿಕ ಸಾಧ್ಯತೆಗಳಲ್ಲಿ ಒಂದಾಗಿತ್ತು. ಅಧಿಕಾರ ಎನ್ನುವುದು ಆ ಸಂದರ್ಭದಲ್ಲಿ ವ್ಯಕ್ತಿಯನ್ನು ಮುಖ್ಯವೆಂದು ಗಣಿಸಿರಲಿಲ್ಲ. ಆದುದರಿಂದ ಅಧಿಕಾರವು ವ್ಯಕ್ತಿಯನ್ನು ಒಂದು ವಾಹಕವಾಗಿ ಪರಿಗಣಿಸಿತು. ಅಂದರೆ ಬ್ರಿಟಿಷ್ ಪ್ರಭುತ್ವಕ್ಕೆ ವ್ಯಕ್ತಿಯ ಸಾಮಾಜಿಕ ಹಿನ್ನೆಲೆ ಮುಂತಾದವು ಮುಖ್ಯವಾಗಿರಲಿಲ್ಲ. ಅಧಿಕಾರಕ್ಕೆ ವ್ಯಕ್ತಿಯು ಒಬ್ಬವ್ಯಕ್ತಿ ಮಾತ್ರ.

೧೮೨೦ರಿಂದ ೧೮೭೦ರವರೆಗಿನ ಕಾಲಘಟ್ಟವನ್ನು ಸಾಮಾಜಿಕ ಪುನರುಜ್ಜೀವನದ ಕಾಲಘಟ್ಟವೆಂದು ಗುರುತಿಸುತ್ತೇವೆ. ಇನ್ನೊಂದು ರೀತಿಯಿಂದ ಇದು ವಸಾಹತುಶಾಹಿ ಮುಂಬೆಳಕಿನ ಯುಗವೂ ಹೌದು. ಈ ಸಂದರ್ಭದಲ್ಲಿ ಸಾಮಾಜಿಕ ಸಂಪ್ರದಾಯಗಳ ಕುರಿತ ಹೊಸ ಚರ್ಚೆಗಳು ರೂಪುಗೊಂಡವು. ಉದಾಹರಣೆಗೆ, 'ವಿಧವಾ ವಿವಾಹ ಶಾಸ್ತ್ರ ನಿಷಿದ್ಧವೇ ?', 'ಸತಿನಿಷೇಧ'. 'ಆಧುನಿಕತೆ', 'ಪ್ರಗತಿಪರತೆ', 'ಜಾತಿ ನಿರ್ಮೂಲನೆ' ಇತ್ಯಾದಿ. ಇವು ಸಂಪ್ರದಾಯಶೀಲರ ಮತ್ತು ಆಧುನಿಕರ

ನಡುವಣ ವಾಗ್ವಾದಕ್ಕೆ ಕಾರಣವಾಯಿತು.

ವಸಾಹತುಶಾಹಿ ಶಿಕ್ಷಣ ಕ್ರಮದಲ್ಲಿ ಶಾಲೆ ಮತ್ತು ಕಾಲೇಜುಗಳಲ್ಲಿ ಭಾರತೀಯರಿಗೆ ಯೂರೋಪಿನ ಚರಿತ್ರೆ, ಸಾಮಾಜಿಕ ತತ್ವಜ್ಞಾನ, ಹೊಸ ರೀತಿಯ ಪ್ರಭುತ್ವ ಇವುಗಳನ್ನು ಕಲಿಸಲಾಯಿತು. ಮೂಲತಃ ಇವು ಆಧುನಿಕ ಯೂರೋಪಿನ ಪಾಂಡಿತ್ಯಕ್ಕನುಸಾರವಾಗಿ ರೂಪುಗೊಂಡ ಪ್ರಕ್ರಿಯೆಗಳು. ಆಧುನಿಕ ಯೂರೋಪಿನ ಪಾಂಡಿತ್ಯವು ಎದುರಿಸುತ್ತಿದ್ದ ಸಮಸ್ಯೆಗಳು ಮತ್ತು ಅವುಗಳ ಸಮಸ್ಯೆಗಳು : ಶಿಕ್ಷಣದಲ್ಲಿನ ರೂಪುರೇಷೆಗಳ ಮಾದರಿಗಳೇ ವಸಾಹತು ದೇಶಗಳಲ್ಲಿಯೂ ಮುಂದುವರೆಯಿತು. ಯಾವುದನ್ನು ಆಧುನಿಕ ಯೂರೋಪ್ ಶಿಕ್ಷಣ ಕ್ರಮದಲ್ಲಿ ಜ್ಞಾನವೆಂದು ಗುರುತಿಸಿತೋ ಅದು ಭಾರತೀಯರಲ್ಲಿ ಜ್ಞಾನರೂಪಗಳಾದವು. ಅದು ಚರಿತ್ರೆ, ವಿಜ್ಞಾನ, ಸಾಹಿತ್ಯದ ಅಧ್ಯಯನ ಕ್ರಮಗಳಲ್ಲಿಯೂ ಕಾಣಿಸಿಕೊಂಡಿತು. ಸಾಹಿತ್ಯವನ್ನು ಹೇಗೆ ಓದಬೇಕು ಮತ್ತು ಅದನ್ನು ಗ್ರಹಿಸುವ ವಿಧಾನ ಯಾವುದು ? ಯಾಕೆ ಸಾಹಿತ್ಯದಲ್ಲಿಯೂ ಹೊಸ ಜ್ಞಾನ ಜಗತ್ತಿನ ಪರಿಕರಗಳು ಬೇಕು ಎಂಬುದರಿಂದ ಪ್ರಾರಂಭವಾಗಿ 'ಸಾಮಾಜಿಕ ಜ್ಞಾನ' ಮತ್ತು ವೈಜ್ಞಾನಿಕ ಜ್ಞಾನವೆಂಬುದು ಭಿನ್ನವೆಂದು ಪ್ರತಿಪಾದಿಸಲಾಯಿತು. ಸಾಮಾಜಿಕ ಜ್ಞಾನವೆಂಬುದು ವಿಷಯನಿಷ್ಠವೆಂದೂ, ವೈಜ್ಞಾನಿಕ ಜ್ಞಾನ ವಸ್ತುನಿಷ್ಠವೆಂದೂ ಕಲಿಸಲಾಯಿತು. ವಸ್ತುನಿಷ್ಠತೆ ಎನ್ನುವುದು ಜ್ಞಾನ ಜಗತ್ತಿನ ಪರಮ ಶ್ರೇಷ್ಠತೆಯೆಂದೂ ಪ್ರತಿಪಾದಿಸಲಾಯಿತು. ಇದರಿಂದ ವಿಜ್ಞಾನ ಮತ್ತು ತಂತ್ರಜ್ಞಾನಗಳ ಕಲಿಕೆಯು ಶ್ರೇಷ್ಠ ಮತ್ತು ಅದುವೇ ವಸಾಹತು ರಾಷ್ಟ್ರಗಳಲ್ಲಿಯೂ 'ನಾಗರಿಕತೆ'ಯ ಕಾರಣಕ್ಕಾಗಿ ರೂಪಿಸಲ್ಪಡಬೇಕೆಂದು ಒಂದು ಐತಿಹ್ಯ ಕಟ್ಟಲಾಯಿತು. ಇದರ ಹಿಂದೆ ಇದ್ದ ವಸಾಹತುಶಾಹಿಯ ಕ್ರೌರ್ಯವನ್ನು ಕೂಡ ಮರೆಮಾಚಲಾಯಿತು. ವಸಾಹತೋತ್ತರ ಸಂದರ್ಭದಲ್ಲಿಯೂ ಇದು ಜರುಗುತ್ತಿದೆ. ಆದರೆ ಇದನ್ನು ಸ್ವಲ್ಪ ಸೂಕ್ಷ್ಮವಾಗಿ ಪರಿಶೀಲಿಸಬೇಕು. ವಸಾಹತುಶಾಹಿ ಸಂದರ್ಭದಲ್ಲಿ ಶಿಕ್ಷಣ ಪದ್ಧತಿಯ ವಿಜ್ಞಾನದ, ತಂತ್ರಜ್ಞಾನದ ಹೇರುವಿಕೆಯಿಂದ ಭಾರತೀಯ ಸಮಸ್ತ ತಿಳಿವಳಿಕೆಯನ್ನು ನಾಶಪಡಿಸಿತು ಎಂದು ಹೇಳುವುದು ಕಷ್ಟ. ಹೊಸ ರೀತಿಯ ಚರ್ಚೆಗಳು ರೂಪಿತವಾದವು ಎಂದು ಹೇಳುವುದು ಚಾರಿತ್ರಿಕವಾಗಿ ಮುಖ್ಯ.

ನಿರ್ವಸಾಹತು ರಾಜಕಾರಣವೆನ್ನುವುದು ಒಂದೊಂದು ವರ್ಗದಲ್ಲಿ, ಒಂದೊಂದು ನಾಯಕತ್ವದಲ್ಲಿ ಒಬ್ಬೊಬ್ಬ ಲೇಖಕನಲ್ಲಿ ಬೇರೆ ಬೇರೆ ನಿರೂಪಣೆಗಳನ್ನು ಹೊಂದಿತು. ವಸಾಹತುಶಾಹಿ ರಾಜಕಾರಣಕ್ಕೆ ಗಾಂಧಿಯವರ ಪ್ರತಿಕ್ರಿಯೆ ಮತ್ತು ಅಂಬೇಡ್ಕರರ ಪ್ರತಿಕ್ರಿಯೆ ಬೇರೆ. ಕುವೆಂಪು ಅವರ ಪ್ರತಿಕ್ರಿಯೆಗಿಂತ ಬೇಂದ್ರೆಯವರ ಪ್ರತಿಕ್ರಿಯೆ ಮತ್ತು ನಿರೂಪಣೆಗಳು ಭಿನ್ನ.

ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಮುದ್ರಣ : ಸಮೂಹ ಮಾಧ್ಯಮ, ಸಾಮಾಜಿಕ ಪಲ್ಲಟಗಳ ದೆಸೆಯಿಂದ ಮೌಖಿಕ ಪರಂಪರೆಗಳು ಬೇರೆ ಬೇರೆ ಪ್ರಕ್ರಿಯೆಗಳಿಗೆ ಗುರಿಯಾದವು. ಉದಾಹರಣೆಗೆ, ಯಕ್ಷಗಾನ, ಹರಿಕತೆ ಮುಂತಾದವುಗಳಲ್ಲಿ ಮೌಖಿಕ ಪರಂಪರೆಯು ಮುಂದುವರೆಯಿತು. ಅದು ಜನರನ್ನು ತಲುಪುವ ಬಗೆ ಬೇರೆ. ಅದರ ಸಂವಹನ ಪ್ರಕ್ರಿಯೆಗಳು ಬೇರೆ. ಅಲ್ಲಿಯವರೆಗೂ ಅದು ವಸಾಹತುಶಾಹಿ ಮತ್ತು ವಸಾಹತೋತ್ತರ ಸಂದರ್ಭವೆರಡಕ್ಕೂ ನೇರವಾದ ಮತ್ತು ಪರೋಕ್ಷವಾದ ಪ್ರತಿಕ್ರಿಯೆಯನ್ನು ನೀಡಿಲ್ಲ. ಪ್ರದರ್ಶನ ಮತ್ತು ಅದರ ಸಂವಹನದ ರೀತಿಗಳು ಬೇರೆಯಾಗಿವೆ. ಇದೇ ಸಂದರ್ಭದಲ್ಲಿ ಕಾದಂಬರಿಯಂಥ ಸಾಹಿತ್ಯ ರೂಪಗಳು ಹುಟ್ಟಿಕೊಂಡವು. ಇದಕ್ಕೂ ಮಧ್ಯಮ ವರ್ಗಕ್ಕೂ ಒಂದು ಸಂಬಂಧವಿದೆ.

ವಸಾಹತುಶಾಹಿ ಅನುಭವಕ್ಕೆ ಒಳಗಾದ ದೇಶಗಳಲ್ಲಿ ಪ್ರಾರಂಭವಾದ ಸಂಸ್ಕೃತಿಯ ಪ್ರಶ್ನೆಯು ಬೇರೆ ರೀತಿಯದು. ಹಾಗೆ ನೋಡುವುದಿದ್ದರೆ ಯೂರೋಪಿನ ರೋಮಾಂಟಿಸಿಸಂನಲ್ಲಿಯೂ ಸಂಸ್ಕೃತಿಯ ಪ್ರಶ್ನೆಯು ಬಂದಿತ್ತು. ಅಲ್ಲಿಯೂ ಅದು ಸಂಸ್ಕೃತಿಯನ್ನು ಆರ್ಥಿಕ ಪರಿಭಾಷೆಗಿಂತ ಭಿನ್ನವಾಗಿ ನೋಡಿತ್ತು. ವಸಾಹತುಶಾಹೀ ಅನುಭವದಲ್ಲಿ ಸಂಸ್ಕೃತಿಯ ಪ್ರಶ್ನೆಯನ್ನು ಸಾಹಿತ್ಯದಲ್ಲಿ, ಸಾಹಿತ್ಯ ಮೀಮಾಂಸೆಯಲ್ಲಿ ನೋಡುವಾಗ ಅರ್ಥಶಾಸ್ತ್ರದ ಪ್ರಶ್ನೆಗಿಂತ ಬೇರೆಯಾಗಿ ನೋಡಲಾಯಿತು. ಅಲ್ಲಿ ಆದರ್ಶಗಳು ಮುಖ್ಯವಾದವು ಮತ್ತು 'ಸಂಸ್ಕೃತಿ'ಯ ಪರಿಭಾಷೆಯನ್ನು ಕಟ್ಟುವಿಕೆಯ ಪರಿಭಾಷೆಯಾಗಿ ನೋಡಲಾಯಿತು.

ಇಲ್ಲಿ ಇನ್ನೊಂದು ಅಂಶವನ್ನು ಗಮನಿಸಬೇಕು. ಇಂಗ್ಲೆಂಡಿನ ರೊಮ್ಯಾಂಟಿಸಿಸಮ್ ಅನ್ನು ಬಂಡವಾಳವಾದಿ ಪ್ರಕ್ರಿಯೆಯಿಂದ ಹೊರಗೆ ನಿಂತು ನೋಡುವಂತಿಲ್ಲ.

**ಚಮತ್ಕಾರ**

ಇಂದಿನದು ನಾಳಿಲ್ಲ
ನಾಳಿನದು ತಿಳಿದಿಲ್ಲ
ನೆನ್ನೆಯದದರ ಸುಳಿದಿಲ್ಲ
ಸೃಷ್ಟಿಯ ಬಲ್ಲವನೆ ಬಲ್ಲ !

ನಾ. ದಿವಾಕರ

ಆದರೆ ಅಮೆರಿಕದ ರೊಮ್ಯಾಂಟಿಸಿಸಂನ ಪ್ರಕ್ರಿಯೆಯು ಬೇರೆ ಮಾದರಿಯದು. ಅದು ಪರಿವರ್ತನಾಶೀಲ ಆಶಾವಾದದಿಂದ ಕೂಡಿರುವಂಥದ್ದು. ಭಾರತೀಯ ರೊಮ್ಯಾಂಟಿಕ್ ಪರಂಪರೆಯನ್ನು ಬಂಡವಾಳವಾದಿ ಪ್ರಕ್ರಿಯೆಗಿಂತ ಭಿನ್ನವೆಂದು ಪರಿಗಣಿಸಬೇಕಾಗುತ್ತದೆ. ಮುದ್ರಣ ಬಂಡವಾಳದ ಪ್ರಕ್ರಿಯೆ; ರಾಷ್ಟ್ರೀಯತೆ, ದೇಶೀಯತೆ, ಸ್ಥಳೀಯತೆ, ಉದಾರವಾದಿ ಮಾನವತಾವಾದ ಮುಂತಾದ ಸಂಕೀರ್ಣ ಸಮಸ್ಯೆಗಳಿಂದ ಭಾರತೀಯ ನವೋದಯ ಸಾಹಿತ್ಯವು ಪ್ರೇರಿತಗೊಂಡಿದೆ. ಈ ದೃಷ್ಟಿಯಿಂದ ನವೋದಯವು ಬರಿಯ ಸಾಹಿತ್ಯ ಪ್ರಕ್ರಿಯೆಯಾಗಿರಲಿಲ್ಲ. ಇದರೊಂದಿಗೆ ಚಳುವಳಿಯ ಅಂಶವೂ ಸೇರಿಕೊಂಡಿದೆ.

ವಸಾಹತುಶಾಹಿ ಸಂದರ್ಭದಲ್ಲಿ ರೂಪುಗೊಂಡಿದ್ದ ಇಂಗ್ಲಿಷ್ ಕಲಿಕೆಯು ತಾಂತ್ರಿಕ ಕೌಶಲ್ಯ ಮತ್ತು ಆಡಳಿತಾತ್ಮಕ ಕೌಶಲ್ಯಗಳಲ್ಲಿ ಮುಖ್ಯವಾದವು. ಭಾರತೀಯ ಲೇಖಕರು ಪ್ರತಿಕ್ರಿಯಿಸುವಾಗ ಸ್ಥಳೀಯತೆಗೆ ಮಹತ್ವ ಕೊಟ್ಟುದರಿಂದ ಅದು ವಸಾಹತುಶಾಹಿ ಅನುಭವದ ದೃಷ್ಟಿಯಿಂದ ವಿದ್ರೋಹಾತ್ಮಕ ಪ್ರತಿಕ್ರಿಯೆ ಕೂಡಾ ಆಯಿತು. ಇದೇ ಸಂದರ್ಭದಲ್ಲಿ ಬುದ್ಧಿಜೀವಿಗಳ ಕಾರ್ಯವಿಧಾನ ಮತ್ತು ಸಾಮಾನ್ಯ ಜನರ ಕಾರ್ಯ ವಿಧಾನ ಬೇರೆಯಾಯಿತು. ನಿರ್ವಸಾಹತೀಕರಣದಲ್ಲಿ ಕೆಲವು ವೈರುಧ್ಯಗಳಿದ್ದವು ಮತ್ತು ಅತ್ಯಂತ ಸಂಕೀರ್ಣ ಸ್ಥಿತಿಯಿತ್ತು. ಇದರ ಕೆಲವು ಅಂಶಗಳನ್ನು ಹೀಗೆ ಗುರುತಿಸಬಹುದು.

೧. ಆಗ ಪ್ರಾರಂಭವಾಗಿದ್ದ ವಿಶ್ವವಿದ್ಯಾನಿಲಯಗಳು ಸಾಹಿತ್ಯ ಕಲಿಕಾ ಸಂಸ್ಥೆಯಾಗಿ ಪರಿವರ್ತನೆಯಾಯಿತು. ಇದು ಶೈಕ್ಷಣಿಕ ಪರಿಕರ ಮತ್ತು ಔದ್ಯೋಗಿಕ ತಜ್ಞರ ನಿರ್ಮಾಣಕ್ಕೆ ಕಾರಣವಾಯಿತು.
೨. ಯುರೋಪ್ ಮಾದರಿಯ ಶಿಕ್ಷಣ ಕ್ರಮದಲ್ಲಿ ಸಾಂಸ್ಥಿಕವಾಗಿ ಕಲಿತವರು ಪೂರ್ತಿಯಾಗಿ ಪಶ್ಚಿಮ ಕೇಂದ್ರಿತ ಚಿಂತನೆಯವರಾಗಿರಲಿಲ್ಲ. ಯುರೋಪ್ ಮತ್ತು ಭಾರತೀಯ ತತ್ವಜ್ಞಾನ ಪರಂಪರೆಗಳ ಸಂಮಿಶ್ರ ರೂಪವು ಕಾಣಿಸಿಕೊಂಡಿತು.
೩. ಪ್ರಾದೇಶಿಕ ಭಾಷಾ ಬೆಳವಣಿಗೆಯ ಬಗ್ಗೆ ಒಲವು ಹುಟ್ಟಿಕೊಂಡಿತು.
೪. ಆಧುನಿಕ ಸಾಂಸ್ಥಿಕ ಪರಂಪರೆಯು ಸಾಹಿತ್ಯ ಉತ್ಪಾದನೆ ಮೇಲೆ ಪ್ರಭಾವ ಬೀರಿತು. ಇದರಿಂದ ತತ್ವಜ್ಞಾನ, ವಿಮರ್ಶೆ, ಸಿದ್ಧಾಂತ, ಚರಿತ್ರೆ, ಅನುವಾದ, ತೌಲನಿಕ ಅಧ್ಯಯನಗಳು ಬೆಳೆದವು.
೫. ಸಾಹಿತ್ಯ ಪರಂಪರೆಯ ಜ್ಞಾನಕ್ಕೆ ಒಂದು ನಿರ್ದಿಷ್ಟ ವೈಚಾರಿಕ ಚೌಕಟ್ಟು ರೂಪುಗೊಂಡಿತು.
೬. ಆಗ ಪ್ರಾರಂಭವಾದ ಸಾಹಿತ್ಯ ಚರಿತ್ರೆಯ ಪರಿಕಲ್ಪನೆಯು ಆರ್ಥಿಕ ಮತ್ತು ರಾಜಕೀಯ ಚರಿತ್ರೆಗಿಂತ ಬೇರೆಯಾಯಿತು.
೭. ವಸಾಹತುಶಾಹಿ ಕಾಲದಲ್ಲಿನ ಬರವಣಿಗೆಯ ವಿಧಾನವನ್ನು ಹಾಗೂ ಆಗಿನ ಸಾಹಿತ್ಯ ರೂಪಗಳನ್ನು ಸರಳವೆಂದೋ ಅಥವಾ ಪ್ರಣಾಳಿಕೆಯ ಮಾದರಿಯ ಬರವಣಿಗೆಗಳೆಂದೋ ಕರೆಯುವುದು ಸೂಕ್ತವಲ್ಲ. ಇವು ನಿರ್ದಿಷ್ಟ ಮಾದರಿಯ ಸಂಕಥನಗಳಾಗಿವೆ. ಅವುಗಳ ಹಿಂದಿರುವ 'ಧನಾತ್ಮಕ' ಅಂಶಗಳು ಮತ್ತು ವಿವರಣೆಗಳು – ಅವು ಹೊಂದಿರುವ ಚಾರಿತ್ರಿಕತೆಯನ್ನು ಸೂಚಿಸುತ್ತವೆ. ಅಷ್ಟೇ ಅಲ್ಲ, ಅವಕ್ಕೆ ನಿರ್ದಿಷ್ಟ ವಾಸ್ತವವಿದೆ. ಆ ವಾಸ್ತವವನ್ನು ಸಾಹಿತ್ಯ ಕೃತಿಗಳು ಪ್ರತಿನಿಧಿಸಿದವು. ಹೀಗಾಗಿ ಸಾಹಿತ್ಯ ಕೃತಿಗಳ ಹಿಂದಿರುವ ಸತ್ಯವನ್ನು ಅರ್ಥಮಾಡಿಕೊಳ್ಳುವುದು ತುಂಬಾ ಮುಖ್ಯ.
೮. ವಸಾಹತು ಕಾಲದ ಕೆಲವು ಚಿಂತನೆಗಳು 'ಕಲ್ಪಿತ ಕುಲ'ಗಳ ಬಗ್ಗೆ ಮಾತಾಡಿದವು.

ಒಟ್ಟಾರೆಯಾಗಿ ಹೇಳುವುದಾದರೆ, ಮಾರ್ಕ್ಸ್‌ವಾದವು ವಸಾಹತು ಕಾಲದ ಪ್ರಭುತ್ವ ವಿರೋಧಿ ಚಿಂತನೆಯನ್ನು ಹೊಂದಿತ್ತು ಮತ್ತು ಮಾರ್ಕ್ಸ್ ವಸಾಹತು ಪ್ರಭುತ್ವವನ್ನು ಬಂಡವಾಳವಾದಿ ಪ್ರಕ್ರಿಯೆ, ಅದರ ವಿಸ್ತರಣೆ ಹಾಗೂ ಅದು ಒಳಗೊಂಡಿದ್ದ ಪ್ರಭುತ್ವಕೇಂದ್ರಿತವಾದ ಚಿಂತನೆಯ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ.

ಡಾ॥ ಕೇಶವಶರ್ಮ ಕೆ.
ಪ್ರವಾಚಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನ ಸಹ್ಯಾದ್ರಿ - ೫೭೭ ೪೫೧
ಶಿವಮೊಗ್ಗ ಜಿಲ್ಲೆ



## ಸಂತಸ ಅರಳುವ ಸಮಯ

(ಲಲಿತ ಪ್ರಬಂಧ ಸಂಕಲನ)

*ಸಂಪಾದಕರು: ಶ್ರೀನಿವಾಸ ಜಾಲವಾದಿ, ರಮೇಶ ಕೋಟ್ಯಾಳ*

ಪುಟ : xxx + ೨೬೮ ಬೆಲೆ : ರೂ. ೧೫೦

**ಉತ್ತರ ಕರ್ನಾಟಕ ಯುವ ಲೇಖಕರ ವೇದಿಕೆ,**

ಬಿಜಾಪೂರ - ೫೮೬ ೧೦೧

ಇದು ಉತ್ತರ ಕರ್ನಾಟಕ ಯುವ ಲೇಖಕರ ವೇದಿಕೆಯ ದಶಮಾನೋತ್ಸವದ ಅಂಗವಾಗಿ ಮೂಡಿಬಂದ ವಿಡಂಬನಾ ಪ್ರಬಂಧಗಳ ಸಂಕಲನ. ಐವತ್ತಾರು ಪ್ರಬಂಧಗಳನ್ನು ಒಳಗೊಂಡಿರುವ ಈ ಕೃತಿಯಲ್ಲಿ ಬಹುಪಾಲು ಹಾಸ್ಯ ಪ್ರಬಂಧಗಳೇ ಇವೆ. ಉತ್ತರ ಕನ್ನಡದ ಭಾಷೆಯ ಛಾತಿಯೊಂದಿಗೆ ಮೂಡಿಬಂದಿರುವ ನಗೆ ಚಟಾಕಿಗಳಿಂದ ಕೂಡಿದ ಪ್ರಬಂಧಗಳು ಓದುಗರಿಗೆ ರಸದೌತಣವನ್ನು ನೀಡುತ್ತವೆ. ಸಂಕಲನದ ಬಹುಪಾಲು ಪ್ರಬಂಧಗಳು ಹಾಸ್ಯವನ್ನೇ ಕೇಂದ್ರದಲ್ಲಿರಿಸಿಕೊಂಡಿವೆ. ಈ ಪ್ರಬಂಧಗಳು ಓದುಗರಿಗೆ ಹಾಸ್ಯದ ಪಾಯಸವನ್ನು ಸವಿಯಲು ಅವಕಾಶ ಮಾಡಿಕೊಟ್ಟು, ಹಾಸ್ಯದಲ್ಲೇ ಅಂತ್ಯಗೊಳ್ಳುತ್ತವೆ. ಹಾಸ್ಯದ ಮೂಲಕ ಸಂತಸವನ್ನು ಅರಳಿಸುವುದರಲ್ಲಿ ಇಲ್ಲಿನ ಬಹುತೇಕ ಪ್ರಬಂಧಗಳು ಯಶಸ್ವಿಯಾಗಿವೆ.



## ಶ್ರೀವೈಷ್ಣವ ಹರಿದಾಸ ಸಾಹಿತ್ಯ

*ಪ್ರೊ|| ನಾ. ಗೀತಾಚಾರ್ಯ*




ಪುಟ : viii + ೨೨೬ ಬೆಲೆ : ರೂ. ೫೫

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ,

ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಕನ್ನಡದಲ್ಲಿ, ಶ್ರೀವೈಷ್ಣವ ಕೀರ್ತನ ಸಾಹಿತ್ಯವನ್ನು ಸಮಗ್ರವಾಗಿ ಈ ಕೃತಿ ಸಮೀಕ್ಷಿಸಿದೆ. ಶ್ರೀವೈಷ್ಣವ ದರ್ಶನ, ಕೀರ್ತನ ಸಾಹಿತ್ಯದ ಲಕ್ಷಣಗಳು, ೧೯ನೇ ಶತಮಾನದಲ್ಲೊಂದು ಹರಿದಾಸ ಆಂದೋಲನದ ಜತೆಗೆ, ಹದಿನಾರು ಹರಿದಾಸರ ಜೀವನ ವಿವರ ಹಾಗೂ ಕೀರ್ತನೆಗಳ ಪರಿಚಯವನ್ನು ಒಟ್ಟಾಗಿ ನೀಡಿರುವುದು ಈ ಕೃತಿಯ ಹೊಸತನವಾಗಿದೆ. ಹಲವು ಕಾಲದ ಆಸಕ್ತಿ, ಅಧ್ಯಯನ, ಸಂಶೋಧನೆಯ ಪರಿಶ್ರಮದ ಫಲವಾಗಿ ಈ ಕೃತಿ ರಚಿತವಾಗಿದೆ. ವಿಶಿಷ್ಟಾದ್ವೈತ ಪರಂಪರೆ ಹಾಗೂ ಪರಿಭಾಷೆಯನ್ನು ಕೀರ್ತನಕಾರರ ಕೀರ್ತನೆಗಳ ಮೂಲಕವೇ ಕಟ್ಟುವ ಪ್ರಯತ್ನವನ್ನು ಗೀತಾಚಾರ್ಯರು ಮಾಡಿದ್ದಾರೆ. ಲೇಖಕರು ಕನ್ನಡ ಹರಿದಾಸಸಾಹಿತ್ಯದಲ್ಲಿ ಅದ್ವೈತ-ವಿಶಿಷ್ಟಾದ್ವೈತ ಪರಂಪರೆಯೂ ಇರುವುದನ್ನು ತಮ್ಮ ಸಂಶೋಧನೆಯಿಂದ ನಿರೂಪಿಸಿದ್ದಾರೆ. ಹೀಗಾಗಿ ಹರಿದಾಸ ಸಾಹಿತ್ಯಕ್ಕೆ ನೂತನ ಆಯಾಮ ದೊರೆತಂತಾಗಿದೆ.

## ಪಶ್ಚಿಮ ಮುಖಿ

*ಟಿ. ಆರ್. ಅನಂತರಾಮು*




ಪುಟ : ೧೭೬ ಬೆಲೆ : ರೂ. ೧೦೦

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೧

ಇದು ಜನಪ್ರಿಯ ವಿಜ್ಞಾನ ಲೇಖಕರಾದ ಟಿ. ಆರ್. ಅನಂತರಾಮು ಅವರ ಪ್ರವಾಸ ಕಥನ. ಲೇಖಕರು ಪಶ್ಚಿಮ ಮುಖಿಯಾಗಿ ಹೊರಟು ಯೂರೋಪಿನ ಪೋರ್ಚುಗಲ್, ಸ್ಪೇನ್, ಫ್ರಾನ್ಸ್ ಹಾಗೂ ಇಟಲಿ ದೇಶಗಳಲ್ಲಿ ಸುತ್ತಾಡಿದ ಅನುಭವಗಳನ್ನು ಸವಿಯುತ್ತಾ, ಬೆರಗಿನಿಂದ ತನ್ಮಯರಾಗುತ್ತಾ, ಕೆಲವೊಮ್ಮೆ ಕವಿ ಮನಸ್ಸಿನಿಂದ ಸ್ಪಂದಿಸುತ್ತಾ ನಡೆದಿದ್ದರೂ, ವೈಜ್ಞಾನಿಕ ದೃಷ್ಟಿಯಿಂದ ಒಳನೋಟಗಳನ್ನು ನೀಡುತ್ತಾ ವಿವರಿಸುತ್ತಾರೆ. ಹಲವು ಕುತೂಹಲಕರ ಹಾಗೂ ಅದ್ಭುತ ಸಂಗತಿಗಳನ್ನು ಫೋಟೋ ಸಮೇತ ಲೇಖಕರು ಪರಿಚಯಿಸಿದ್ದಾರೆ. ಸ್ಪಾನಿಷರ ಜೀವನಶೈಲಿ, ಪ್ರಕೃತಿಯ ವಿಕೋಪಕ್ಕೆ ಸಡ್ಡು ಹೊಡೆದು ನಿಂತು ಪ್ರಗತಿಯ ದಾರಿಯಲ್ಲಿರುವ ಪೋರ್ಚುಗಲ್‌ನ ಲಿಸ್ಬನ್‌ನಗರ, ಇಟಲಿಯ ಪೀಸಾ ಮತ್ತು ಫ್ಲಾರೆನ್ಸ್ ನಗರದ ಟ್ಯಾಲೆಂಟ್‌ವಾಸ್ ಕುರಿತು ವಿಪುಲವಾಗಿ ಪರಿಚಯಿಸುವ ವಿಶಿಷ್ಟ ಪ್ರವಾಸ ಕಥನ.




## ಚಳುವಳಿಯ ಚೇತನ ಟಿ. ಆರ್. ರೇವಣ್ಣ

*ಎಂ. ಎಚ್. ನಾಗರಾಜು*

ಪುಟ : ೧೩೬ ಬೆಲೆ : ರೂ. ೧೦೦

**ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್**

ತುಮಕೂರು ಜಿಲ್ಲಾ ಸಮಿತಿ, ೪೮೫-ಎ, ಬಿ. ಎಚ್. ರಸ್ತೆ,

ವಿನೋಬನಗರ, ತುಮಕೂರು - ೫೭೨ ೧೦೧

ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡ ಹಿರಿಯರಾದ ಟಿ. ಆರ್. ರೇವಣ್ಣನವರ ಜೀವನ ಸಂಗತಿಗಳನ್ನು ಅವರ ಸಾಮಾಜಿಕ ಹೋರಾಟಗಳೊಂದಿಗೆ ಚಿತ್ರಿಸುವ ಮಹತ್ವದ ಕೃತಿಯಿದು. ಸಾಮಾನ್ಯವಾಗಿ 'ವ್ಯಕ್ತಿಚಿತ್ರ'ದಲ್ಲಿ ವ್ಯಕ್ತಿಯ ಬದುಕು, ಜೀವನ ವಿವರಗಳು ಮುಖ್ಯವಾಗಿರುತ್ತವೆ. ಆದರೆ ಈ ಕೃತಿಯಲ್ಲಿ ಟಿ. ಆರ್. ರೇವಣ್ಣನವರ ಬದುಕು ಮತ್ತು ಅವರು ತೊಡಗಿಕೊಂಡ ಸ್ವಾತಂತ್ರ್ಯ, ಸಾಮಾಜಿಕ ಹೋರಾಟ ಹಾಗೂ ಅವರ ಮಾರ್ಕ್ಸ್‌ವಾದೀ ನಿಲುವುಗಳನ್ನು ಅಭಿನ್ನವೆನ್ನುವಂತೆ ಲೇಖಕರು ಚಿತ್ರಿಸಿದ್ದಾರೆ. ರೇವಣ್ಣನವರ ಗುಣ ವಿಶೇಷಗಳ ಹೊಗಳಿಕೆ ಇರದೆ, ವಸ್ತುನಿಷ್ಠವಾಗಿ ನೋಡುವ, ಅವರು ಸಕ್ರಿಯವಾಗಿ ತೊಡಗಿಕೊಂಡ ಚಟುವಟಿಕೆಗಳ, ದೇಶ, ಪ್ರದೇಶಗಳ ಆಗುಹೋಗುಗಳ ದರ್ಶನವೂ ಇಲ್ಲಿದೆ.



## ಜಾಗತೀಕರಣದ ಐಡಿಯಾಲಜಿ ಮತ್ತು ಮಾನವ ಹಕ್ಕುಗಳು

*ಡಾ|| ಡೊಮಿನಿಕ್ ಡಿ.*

ಪುಟ : ೧೩ + ೧೭೭ = ೧೯೦ ಬೆಲೆ : ರೂ. ೧೭೦

**ಸಖಿ ಪ್ರಕಾಶನ**, ಏಕಾಂತ ನಿಲಯ, ಎಂ. ಪಿ. ಪ್ರಕಾಶ ನಗರ, ಹೊಸಪೇಟೆ, ಬಳ್ಳಾರಿ - ೫೮೩ ೨೦೧

ಜಾಗತೀಕರಣದ ಕರಾಳ ಸ್ವರೂಪವನ್ನು ಈ ಕೃತಿ ಗಂಭೀರವಾಗಿ, ಸಾಮಾಜಿಕ ಕಳಕಳಿಯೊಂದಿಗೆ ವಿಶ್ಲೇಷಿಸುತ್ತದೆ. ಯುದ್ಧ ಮಾಡದೆಯೇ ಜಗತ್ತಿನಾದ್ಯಂತ ಆರ್ಥಿಕ ಉದಾರೀಕರಣವನ್ನು ಅನುಸರಿಸಿ ದೇಶಿ ಮಾರುಕಟ್ಟೆಗಳನ್ನು ಜಾಗತೀಕರಣಗೊಳಿಸುವ ಪ್ರಕ್ರಿಯೆ ಇಂದು ತೀವ್ರವಾಗೇ ನಡೆಯುತ್ತಿದೆ. ಇದರ ಬೆನ್ನಿಗೆ ಕ್ರಿಯಾಶೀಲವಾಗಿರುವುದು ಜನಾಂಗ ವಿರೋಧಿ ನೀತಿ. ಬಹುಜನ ಹಿತಾಸಕ್ತಿಯನ್ನು ತುಳಿದು, ಅವರ ಶ್ರಮ-ಶಕ್ತಿಯ ಮೇಲೆ ಒಬ್ಬ ಬೆಳೆಯುವ ವ್ಯವಸ್ಥೆ ಈ ಬಗೆಯ ಜಾಗತೀಕರಣದ ವಿವಿಧ ಮಜಲುಗಳನ್ನು ಈ ಕೃತಿ ವಸ್ತುನಿಷ್ಠವಾಗಿ ವಿಶ್ಲೇಷಿಸುತ್ತದೆ. ಕೃತಿಯ ಮೊದಲ ಭಾಗದಲ್ಲಿ ಜಾಗತೀಕರಣದ ಸ್ವರೂಪವನ್ನು - ಜಾಗತೀಕರಣ ಮತ್ತು ಹೊಸ ಆರ್ಥಿಕ ನೀತಿ, ಮುಕ್ತ ಮಾರುಕಟ್ಟೆ, ಜಾಗತೀಕರಣ ಮತ್ತು ಸಂಸ್ಕೃತಿಯ ಅನನ್ಯತೆ, ಸಾಮಾಜಿಕ ಚಳುವಳಿಗಳು, ಜಾಗತೀಕರಣ ಮತ್ತು ಜಾತಿ ವ್ಯವಸ್ಥೆ – ಈ ಸಂಗತಿಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಎರಡನೇ ಭಾಗದಲ್ಲಿ ಜಾಗತೀಕರಣದ ಜಗತ್ತಿನಲ್ಲಿ ದಲಿತರು, ಭೂ ಒಡೆತನದ ಹಕ್ಕು, ದುಡಿಮೆ, ಉದ್ಯೋಗ, ಆಹಾರ, ಶೈಕ್ಷಣಿಕ ವ್ಯವಸ್ಥೆ, ಆರೋಗ್ಯ, ನೀರು – ಮೊದಲಾದ ಸಾಮಾಜಿಕ ಅಂಗಗಳ ಮೇಲೆ ಜಾಗತೀಕರಣದ ಪರಿಣಾಮವನ್ನು ಚರ್ಚಿಸಲಾಗಿದೆ.

## ಕರ್ನಾಟಕ ಕುಲಪುರೋಹಿತ ಆಲೂರ ವೆಂಕಟರಾಯರು

*ಸದಾನಂದ ಕನವಳ್ಳಿ*



ಪುಟ : viii + ೯೮ ಬೆಲೆ : ರೂ. ೪೦

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ,

ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಸ್ವಾತಂತ್ರ್ಯ ಚಳುವಳಿಯ ದಿನಗಳಲ್ಲಿ ಕರ್ನಾಟಕ, ಕರ್ನಾಟಕತ್ವದ ಬಗ್ಗೆ ಮೊದಲಿಗೆ ವ್ಯಾಖ್ಯಾನಿಸಿದವರು ಆಲೂರ ವೆಂಕಟರಾಯರು. ಕರ್ನಾಟಕದ ಕುಲಪುರೋಹಿತರೆಂದೇ ಕರೆಸಿಕೊಳ್ಳುವಷ್ಟರ ಮಟ್ಟಿಗೆ ಕನ್ನಡಿಗರಲ್ಲಿ ಕರ್ನಾಟಕತ್ವದ ಪರಿಕಲ್ಪನೆಯನ್ನು ಬಿತ್ತಿದವರು, ಹರಿದುಹಂಚಿಹೋದ ಕನ್ನಡಿಗರನ್ನು ಒಂದೆಡೆ ಕನ್ನಡ ನಾಡು-ನುಡಿ-ಸಂಸ್ಕೃತಿಯ ಭಾಗವಾಗಿ ಬೆಸೆಯುವ ಹಿರಿಯ ಆಶಯದಿಂದ ಶ್ರಮಿಸಿದವರು. ಕರ್ನಾಟಕತ್ವ ಎಂದರೆ ಕೇವಲ ದೇಶಾಭಿಮಾನವಲ್ಲ, ಭಾಷಾಭಿಮಾನವಲ್ಲ, ಕೇವಲ ಇತಿಹಾಸವಲ್ಲ, ಇವೆಲ್ಲವುಗಳನ್ನೂ ಒಳಗೊಂಡ ಪರಿಶುದ್ಧ ಭಾವನೆ ಎಂಬ ನೆಲೆಯಲ್ಲಿ 'ಕರ್ನಾಟಕ'ವನ್ನು ಭಾವನಾತ್ಮಕವಾಗಿ ಕಟ್ಟಿಕೊಟ್ಟವರು. ಈ ನಿಲುವು ಅಂದು ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ, ಕರ್ನಾಟಕ ಏಕೀಕರಣದ ಸಂದರ್ಭದಲ್ಲಿ ಪರಿಣಾಮಕಾರಿಯಾಗಿ ಪ್ರವಹಿಸಿ ಕನ್ನಡಿಗರನ್ನು ಬೆಸೆಯುವಲ್ಲಿ ಯಶಸ್ವಿಯಾಯಿತು.

**– ಸುಜಾತ ಲಕ್ಷ್ಮೀಪುರ**

*ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೭೯*

# ಕ್ಯೋಟೊ ಒಡಂಬಡಿಕೆಗೆ ಕೈಜೋಡಿಸದ ಅಭಿವೃದ್ಧ ದೇಶಗಳು

ಡಿಸೆಂಬರ್ ೧೯೯೭ರಲ್ಲಿ ಜಪಾನಿನ ಒಂದು ಸಣ್ಣ ಪಟ್ಟಣವಾದ ಕ್ಯೊಟೊ ಎಂಬಲ್ಲಿ ೮೪ ದೇಶಗಳು ಒಂದೆಡೆ ಸೇರಿ ಮುಂಬರುವ ದಿನಗಳಲ್ಲಿ ಭೂಮಿಯ ವಾತಾವರಣದಲ್ಲಿ ಆಗಬಹುದಾದ ಕೆಲವು ಆಘಾತಕಾರಿ ಪರಿಣಾಮಗಳನ್ನು ಚರ್ಚಿಸಿದ್ದಲ್ಲದೆ, ಆ ಪರಿಣಾಮಗಳನ್ನು ನಿಯಂತ್ರಿಸಲು ಶ್ರಮಿಸುವುದಾಗಿ ನಿರ್ಧರಿಸಿ ಕೆಲವು ನಿಯಮಾವಳಿಗಳಿಗೆ ಮುಕ್ತಕಂಠದಿಂದ ಸಹಮತ ಸೂಚಿಸಿ ಸಹಿಹಾಕಿದವು. ಇದೇ 'ಕ್ಯೊಟೊ ಒಡಂಬಡಿಕೆ'ಯಾಗಿ ಪ್ರಚಲಿತವಾಯಿತು. ಇದಕ್ಕೆ ಬೆನ್ನೆಲುಬಾಗಿ ೧೯೯೨, ರಿಯೋ-ಡಿ-ಜನೈರೋದಲ್ಲಿ ಸಂಯುಕ್ತರಾಷ್ಟ್ರ ಸಂಸ್ಥೆಯ ಹವಾಮಾನ ಸಂವಹನ ಚೌಕಟ್ಟಿನಡಿಯಲ್ಲಿ ಜರುಗಿದ 'ಭೂ-ಶೃಂಗ ಸಭೆ'ಯು ಕ್ಯೊಟೊ ಒಡಂಬಡಿಕೆಗೆ ಬಲವಾದ ಒತ್ತುಕೊಟ್ಟಂತಾಯಿತು. ಫೆಬ್ರವರಿ ೧೬, ೨೦೦೫ರಂದು ೫೫ಕ್ಕೂ ಹೆಚ್ಚು ದೇಶಗಳು ಕ್ಯೊಟೊ ನಿಯಮಾವಳಿಗಳನ್ನು ಅಂಗೀಕರಿಸಿ ಅನುಮೋದಿಸಿದವು. ಈ ಸಭೆಯಲ್ಲಿ ಪರಿಸರಕ್ಕೆ ಸಂಬಂಧಪಟ್ಟ ಅನೇಕ ವಿಚಾರಗಳನ್ನು ವೈಜ್ಞಾನಿಕವಾಗಿ ಮಂಡಿಸಲಾಯಿತು. ಆದರೆ ಮುಖ್ಯವಾಗಿ ಎಲ್ಲಾ ದೇಶಗಳ ಗಮನವನ್ನು ಸೆಳೆದ ಅಂಶವೆಂದರೆ ಹಸಿರು-ಮನೆ-ಅನಿಲಗಳು (ಗ್ರೀನ್-ಹೌಸ್-ಗ್ಯಾಸ್). ಈ ಅನಿಲಗಳನ್ನು ನಿಗ್ರಹಿಸುವುದಲ್ಲದೆ ಅದಕ್ಕೆ ಸೂಕ್ತವಾದ ಒಂದು ಪರ್ಯಾಯ ವ್ಯವಸ್ಥೆ ಹಾಗೂ ತಾಂತ್ರಿಕತೆಯನ್ನು ಅಭಿವೃದ್ಧಿಪಡಿಸಿ ಸಮರ್ಥನೀಯವಾದ ಆರ್ಥಿಕಾಭಿವೃದ್ಧಿ ಹೊಂದುವುದಾಗಿ ಘೋಷಿಸಿದವು. ಈ ನಿಟ್ಟಿನಲ್ಲಿ ಕೆಲವು ದೇಶಗಳು ಕಾರ್ಯಪ್ರವೃತ್ತರಾಗಿರುವುದು ಗಮನಾರ್ಹ. ಅದರಲ್ಲೂ ಅಭಿವೃದ್ಧಿಶೀಲ ದೇಶಗಳು ಆ ಘೋಷಣೆಗೆ ನಿಷ್ಠೆಯಿಂದ ಸ್ಪಂದಿಸುತ್ತಿವೆ ಎಂದರೆ ತಪ್ಪಾಗಲಾರದು.

ಆಶ್ಚರ್ಯದ ಸಂಗತಿಯೆಂದರೆ, ಅಭಿವೃದ್ಧಿ ಪಥದಲ್ಲಿ ಮುಂದಿದ್ದೇವೆಂದು ಬೊಬ್ಬೆ ಇಡುವ ಪಾಶ್ಚಿಮಾತ್ಯ ದೇಶಗಳು ಅದರಲ್ಲೂ ಅಮೆರಿಕಾ ಈ ಒಡಂಬಡಿಕೆಯನ್ನು ಅನುಮೋದಿಸಲೇ ಇಲ್ಲ! ಇದಕ್ಕೆ ಕಾರಣವೂ ಇದೆ. ಅದೆಂದರೆ, ಶೇಕಡ ೩೦ರಷ್ಟು ಅನಿಲಗಳು ಅಮೆರಿಕಾದಿಂದಲೇ ಹೊರದೂಡಲ್ಪಡುತ್ತದೆ. ಇದರ ಹಿಂದಿರುವ ಗುಟ್ಟು ಅಲ್ಲಿಯ ಜನರ ಭೋಗ ಹಾಗೂ ವಿಲಾಸಿ ಜೀವನ ಪದ್ಧತಿ. ಅದೆಂದರೆ ತಮ್ಮ ನಿತ್ಯಜೀವನದಲ್ಲಿ ಬಳಸುವ ರೆಫ್ರಿಜಿರೇಟರ್, ವಾಟರ್ ಕೂಲರ್, ಏರ್‌ಕರ್ಟನ್ಸ್, ಏರ್‌ಕಂಡೀಷನರ್ಸ್, ಮನೆಮಂದಿಗೆಲ್ಲಾ ಪ್ರತ್ಯೇಕ ಮೋಟಾರು ವಾಹನಗಳು ಹಾಗೂ ವಾರಾಂತ್ಯದಲ್ಲಿ ಮೋಜಿಗಾಗಿ ವಿಶ್ರಾಂತಿಗಾಗಿ ಮೈಲುಗಟ್ಟಲೆ ಸ್ವಂತ ವಾಹನಗಳಲ್ಲಿ ಪ್ರಯಾಣ ಇತ್ಯಾದಿ. ಮಿತಿಮೀರಿದ ಕೈಗಾರಿಕೀಕರಣವು ಅಲ್ಲಿಯ ಜನರ ಜೀವನಶೈಲಿಯನ್ನು ಸಂಪೂರ್ಣವಾಗಿ ಯಾಂತ್ರಿಕ ಗೊಳಿಸಿದೆ. ಈ ಹಾದಿಯಲ್ಲಿ ದಾಪುಗಾಲು ಹಾಕುತ್ತಾ ಬಂದ ಈ ಪಾಶ್ಚಿಮಾತ್ಯ ದೇಶಗಳು ಪರಿಸರವನ್ನು ಸಾರಾಸಗಟಾಗಿ ಕೊಳ್ಳೆಹೊಡೆದಿರುವುದನ್ನು ಗಮನಿಸಬಹುದು. ಅಮೆರಿಕಾದ ತತ್ವ ಹಾಗೂ ಅರ್ಥಶಾಸ್ತ್ರಜ್ಞನಾದ ಸ್ಕಾಟ್ ನಿಯರಿಂಗ್ ಬರೆದ 'ಎಕನಾಮಿಕ್ಸ್ ಫಾರ್ ದಿ ಪವರ್ ಏಜ್' ಗ್ರಂಥದಲ್ಲಿ ಹೀಗೆ ಹೇಳುತ್ತಾನೆ: ಪಾಶ್ಚಿಮಾತ್ಯ ದೇಶಗಳಲ್ಲಿ ಜನರು ಪರಿಸರವನ್ನು ಕೇವಲ ವಿಜ್ಞಾನ ಹಾಗೂ ತಂತ್ರಜ್ಞಾನದ ದೃಷ್ಟಿಯಿಂದಲೇ ನೋಡುತ್ತಾರೆ ಹಾಗೂ ಉಪಯೋಗಿಸುತ್ತಾರೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳುವುದಾದರೆ ಈ ಪಾಶ್ಚಿಮಾತ್ಯ ದೇಶಗಳ ಜನರು ಪ್ರಕೃತಿಯನ್ನು ಸ್ವಾರ್ಥ ಹಾಗೂ ವ್ಯಾಪಾರ ದೃಷ್ಟಿ ಯಿಂದಲೂ ನೋಡುತ್ತಾರೆ. ಆದುದರಿಂದ, ಇಲ್ಲಿಯ ಜನರು ಪರಿಸರದಿಂದ ಅತಿ ದೂರ ಸರಿದು ನಿಲ್ಲುತ್ತಾರೆ. ಅಂತರ ಸರಕಾರ ಹವಾಮಾನ ಬದಲಾವಣೆ ತಂಡದ ವರದಿಯ ಪ್ರಕಾರ ಭೂಮಿಯ ಉಗಮದಿಂದ ಈವರೆಗೆ ಹವಾಮಾನದಲ್ಲಿ ಇಂಗಾಲದ ಡೈಆಕ್ಸೈಡ್ ಅನಿಲವು ಶೇಕಡ ೩೧ರಷ್ಟು ಹೆಚ್ಚಾಗಿದ್ದು ಮುಂಬರುವ ದಿನಗಳಲ್ಲಿ ಇದು ಹಂತಹಂತವಾಗಿ ಹೆಚ್ಚಲಿದೆ. ಇದು ಅಪಾಯದ ಸೂಚನೆಯೂ ಹೌದು.

ಉತ್ಪಾದನೆಯ ಪ್ರಕ್ರಿಯೆಯಲ್ಲಿ ಎಲ್ಲೆ ಮೀರಿ ಮೀಥೇನ್, ನೈಟ್ರಸ್ ಆಕ್ಸೈಡ್ ಹಾಗೂ ಹೈಡ್ರೋಫ್ಲೂರೋ ಇಂಗಾಲಗಳ ಬಳಕೆಯಿಂದ ಜಲಚರ ಹಾಗೂ ಓಝೋನ್ ಪದರದ ಮೇಲೆ ತನ್ನದೇ ಆದ ಕೆಟ್ಟ ಪರಿಣಾಮಗಳು ಸಂಭವಿಸುತ್ತಿವೆ. ಈಗಾಗಲೇ ವರದಿಗಳು ಸೂಚಿಸಿರುವ ಪ್ರಕಾರ ಓಝೋನ್ ಪದರವು ಶೇಕಡ ೨೦ರಷ್ಟು ರಂಧ್ರಗಳನ್ನು ಹೊಂದಿದೆ. ಅಲ್ಲದೇ ಸೂರ್ಯನಿಂದ ಹೊರಹೊಮ್ಮುವ ಅತಿನೇರಳೆ ಕಿರಣಗಳು ಭೂಮಿಯ ಉತ್ತರ ಮತ್ತು ದಕ್ಷಿಣ ಧ್ರುವದಲ್ಲಿ ಶೇಖರಣೆಗೊಂಡ ಮಂಜುಗಡ್ಡೆಗಳ ಮೇಲೆ ನೇರವಾಗಿ ಅಪ್ಪಳಿಸುವುದರಿಂದ ಉಷ್ಣತೆಯು ಹೆಚ್ಚಾಗಿ ಈ ಮಂಜುಗಡ್ಡೆಗಳು ಕರಗಿ ನೀರಾಗಿ ಬಹುತೇಕ ಭೂಪ್ರದೇಶಗಳು ಮುಳುಗಡೆಯಾಗಿರುವುದನ್ನು ಗಮನಿಸಬಹುದು. ಇದರಿಂದ ಒಟ್ಟು ಜೀವಸಂಕುಲಕ್ಕೆ ಸಂಚಕಾರ ಬಂದೊದಗಿದೆ.

ಜಾಗತೀಕರಣವೆಂಬ ಸೋಗಿನಲ್ಲಿ ಬಹುತೇಕ ಪಾಶ್ಚಿಮಾತ್ಯ ದೇಶಗಳು, ಅದರಲ್ಲೂ ಅಮೆರಿಕಾವು ತನ್ನ ದೇಶದ ಪರಿಸರವನ್ನು ಸಂರಕ್ಷಿಸಿಡಲು ಒಂದು ದೊಡ್ಡ ಯೋಜನಾ ಹುನ್ನಾರವನ್ನೇ ರೂಪಿಸಿದೆ. ಅದೆಂದರೆ, ತನ್ನಲ್ಲಿರುವ ವಿಷ ಉಗುಳುವ ಕೈಗಾರಿಕೆಗಳನ್ನು ಅಭಿವೃದ್ಧಿಶೀಲ ದೇಶಗಳಲ್ಲಿ 'ವಿಶೇಷ ಆರ್ಥಿಕ ವಲಯಗಳನ್ನು' ನಿರ್ಮಿಸಿ ಅಲ್ಲಿ ಈ ಕೈಗಾರಿಕೆಗಳನ್ನು ಸ್ಥಾಪಿಸುವುದು ಮತ್ತು 'ಕೈಗಾರಿಕೀಕರಣದಿಂದಲೇ ಜನರ ಕಲ್ಯಾಣ' ಎಂದು ಹುಸಿಯಾಗಿ ಹುರಿದುಂಬಿಸುವುದು. ಇದರಿಂದ ಅಭಿವೃದ್ಧಿಶೀಲ ದೇಶಗಳ ಪರಿಸರ ನಾಶ ಕಟ್ಟಿಟ್ಟ ಬುತ್ತಿ. ಇದರ ವಿರುದ್ಧವಾಗಿ ಕ್ಯೊಟೊ ಒಡಂಬಡಿಕೆಗೆ ಒಳಪಡುವ ಸದಸ್ಯ ದೇಶಗಳು ಹಾಗೂ ಅದಕ್ಕೆ ಒಳಪಡದ ದೇಶಗಳು ಅಮೆರಿಕಾದ ಮೇಲೆ ಆ ರಾಷ್ಟ್ರವು ತನ್ನ ನಿಲುವನ್ನು ಬದಲಿಸುವಂತೆ ಒತ್ತಡ ಹೇರುವ ಸ್ಥಿತಿಯನ್ನು ನಿರ್ಮಾಣ ಮಾಡಬೇಕಾಗಿದೆ. ಭಾರತ ಸಂಜಾತ ಡಾ॥ ಆರ್. ಕೆ. ಪಚೌರಿ ಅವರು ೨೦೦೭ನೇ ಸಾಲಿನ ನೊಬೆಲ್ ಪ್ರಶಸ್ತಿಯನ್ನು ಸ್ವೀಕರಿಸಿದ ನಂತರ ಪರಿಸರದ ವಿಷಯಕ್ಕೆ ಸಂಬಂಧಿಸಿದಂತೆ ಮೌನವಹಿಸಿರುವುದು ಹಾಗೂ ಯಾವುದೇ ಸಮೂಹ ಮಾಧ್ಯಮಗಳಲ್ಲಿ ಕಾಣದಿರುವುದನ್ನು ಕಂಡು ಹೊಗಳಬೇಕೋ ಅಥವಾ ತೆಗಳಬೇಕೋ ತಿಳಿಯದಾಗಿದೆ. ಈ ಪ್ರಶಸ್ತಿಯನ್ನು ಅವರಿಗೆ ಕೊಟ್ಟು ಇನ್ನು ಮುಂದೆ ಈ ವಿಚಾರವಾಗಿ ಮಾತನಾಡದಿರಲು ಅಮೆರಿಕಾವು ಸ್ವೀಡಿಶ್ ಅಕಾಡೆಮಿಗೆ ಸೂಚಿಸಿರಲೂಬಹುದೇನೋ ಎಂಬ ಸಂದೇಹ ಜನರಲ್ಲಿ ಸಹಜವಾಗಿಯೇ ಮೂಡಿಬಂದರೆ ಆಶ್ಚರ್ಯವಿಲ್ಲ.

ಪ್ರಕೃತಿ ತನ್ನಲ್ಲಿರುವುದನ್ನು ಎಲ್ಲರಿಗೂ ಸಮಾನವಾಗಿ ನೀಡುತ್ತಾ ಬಂದಿದೆ. ಆದರೆ ಮಾನವ ತನ್ನ ಸ್ವಾರ್ಥಕ್ಕಾಗಿ ಪರಿಸರವನ್ನು ಅತಿಯಾಗಿ ಬಳಕೆಮಾಡುತ್ತಿರುವುದು ಒಂದು ಆಘಾತಕರ ಸಂಗತಿ. ಕೆಲವೇ ಕೆಲವು ದೇಶಗಳು ತಮ್ಮ ಆರ್ಥಿಕಾಭಿವೃದ್ಧಿಗಾಗಿ ಇತರೆ ದೇಶಗಳ ಪ್ರಾಕೃತಿಕ ಸಂಪನ್ಮೂಲಗಳನ್ನು ಕೊಳ್ಳೆಹೊಡೆಯಲು ನಾನಾ ರೀತಿಯ ಯುದ್ಧ ಹಾಗೂ ಕುಹಕ ಯೋಜನೆಗಳನ್ನು ರೂಪಿಸುತ್ತಿರುವುದು ಖಂಡನಾರ್ಹ. ಉದಾಹರಣೆಗೆ, ಇರಾಕ್‌ನ ಮೇಲೆ ಅಮೆರಿಕಾದ ದಾಳಿಯನ್ನೇ ತೆಗೆದುಕೊಳ್ಳೋಣ. ಇದರಿಂದ ಮಾನವ ಪ್ರತಿಕ್ಷಣವೂ ಪರಿಸರದಿಂದ ದೂರವಾಗುತ್ತಿದ್ದಾನೆ. ಮಾನವನ ಸರ್ವತೋಮುಖ ಅಭಿವೃದ್ಧಿಯಲ್ಲಿ ಪರಿಸರದ ಪಾತ್ರ ಬಹುಮುಖ್ಯವಾದುದು. ವಿಶ್ವ ಪರಿಸರ ಮತ್ತು ಅಭಿವೃದ್ಧಿ ಮಂಡಳಿ ೧೯೮೭ ಬ್ರನ್‌ಡ್ಟ್‌ಲ್ಯಾಂಡ್ ವರದಿಯಲ್ಲಿ 'ನಮ್ಮ ಸಾಮಾನ್ಯ ಭವಿಷ್ಯ' ಎಂಬ ಶೀರ್ಷಿಕೆಯಡಿಯಲ್ಲಿ ಸಮರ್ಥನೀಯ ಅಭಿವೃದ್ಧಿಯನ್ನು ಹೀಗೆ ವ್ಯಾಖ್ಯಾನಿಸಿದೆ: ಅಭಿವೃದ್ಧಿ ಎಂಬುದು ಒಂದು ಪ್ರಕ್ರಿಯೆ. ಈ ಪ್ರಕ್ರಿಯೆಯಲ್ಲಿ ಪ್ರಕೃತಿಯಿಂದ ದೊರೆಯುವ ಎಲ್ಲಾ ಸಂಪನ್ಮೂಲಗಳನ್ನು ಭವಿಷ್ಯತ್ತಿನ ಜನಾಂಗಕ್ಕೆ ಯಾವುದೇ ಕೊರತೆಯಿಲ್ಲದೆ ಪ್ರಸಕ್ತ ಜನಾಂಗವು ತನ್ನ ಕಲ್ಯಾಣಕ್ಕಾಗಿ ಉಪಯೋಗಿಸತಕ್ಕದ್ದು. ಇದನ್ನು ಇನ್ನಾದರೂ ಪಾಶ್ಚಿಮಾತ್ಯ ದೇಶಗಳು ಅರಿತು ಕ್ಯೊಟೋ ಒಡಂಬಡಿಕೆಗೆ ಸಮ್ಮತಿಸುತ್ತವೆ ಎಂದು ಆಶಿಸೋಣ.

ಬಿ. ಎನ್. ವೇಣುಗೋಪಾಲ್
ಸಂ. ೪೨೫, ೮ನೇ ಮುಖ್ಯರಸ್ತೆ, [illegible] ಸುಬ್ಬರಾವ್ ರಸ್ತೆ, ಹನುಮಂತನಗರ, ಬೆಂಗ[illegible]

# ಏರುಗೋಡೆಯ ಹಿಂದೆ, ಪ್ಯಾಲೆಸ್ಟೈನ್ ನೆಲದಲ್ಲಿ...

■ ನೇಮಿಚಂದ್ರ

ಮತ್ತೆ ಹೊರಟದ್ದು ಇಸ್ರೇಲಿಗೆ. ಈ ಬಾರಿ ನನ್ನ ಕಾದಂಬರಿಯ ಕೇಂದ್ರ ಬಿಂದು 'ಯಾದ್ ವಶೇಮ್' ನೋಡುವ ಕಾತುರ ನನಗಿರಲಿಲ್ಲ. ಪ್ಯಾಲೆಸ್ಟೈನ್ ನೆಲದಲ್ಲಿ ಕೆಲವು ದಿನಗಳನ್ನು ಕಳೆಯುವ ಉದ್ದೇಶ ನನ್ನದಾಗಿತ್ತು.

ಕಳೆದ ಬಾರಿ ಜೆರೂಸಲೆಂ ಸುತ್ತಿ ಬರುವಾಗ ದೂರದಲ್ಲಿ ಕಂಡಿದ್ದ ಗೋಡೆ ಅದು. ಏರು ಎತ್ತರದ ಗೋಡೆ, ಮೇಲೆ ವಿದ್ಯುತ್ ಹರಿದ ಬೇಲಿ, ಪ್ಯಾಲೆಸ್ಟೈನ್ ಜನರನ್ನು ತಮ್ಮ ನೆಲದಲ್ಲಿಯೇ ಬಂಧಿಸಿಟ್ಟ ಕೋಟೆ ಗೋಡೆ. ಈ ಬಾರಿ ಆ ಗೋಡೆಯ ಒಳ ಹೊಕ್ಕು 'ವೆಸ್ಟ್ ಬ್ಯಾಂಕ್' ಪ್ರವೇಶಿಸಿದ್ದೆ.

'ಪವಿತ್ರ ನೆಲ'ದ ಪ್ರವಾಸಕ್ಕೆ ಹೊರಟ ಕ್ರೈಸ್ತ ಮತಸ್ಥರ ಒಂದು ಗುಂಪಿನೊಡನೆ ಹೊರಟ ನಮಗೆ, ಪ್ಯಾಲೆಸ್ಟೈನ್ ಒಳಗೆ ಹೊಕ್ಕು, ಹೊರಬರುವುದು ಸುಲಭವಿತ್ತು. ಕಾರಣ, ನಾವು ಒಳಹೊಕ್ಕ 'ಬೆತ್ಲೆಹೆಮ್'ನ ಈ ನೆಲದಲ್ಲಿ ಯೇಸು ಸ್ವಾಮಿ ಹುಟ್ಟಿದ 'ನೇಟಿವಿಟಿ ಚರ್ಚ್' ಇದೆ. ಜನವರಿಯ ಒಂದು ಕೊರೆವ ರಾತ್ರಿ, 'ಇಸ್ರೇಲಿ ಗೋಡೆ'ಯಿಂದ ಸುತ್ತುವರೆದ ಪ್ಯಾಲೆಸ್ಟೈನ್‌ನ ಒಳಹೊಕ್ಕೆವು. ನಾವು ಇಳಿದುಕೊಂಡದ್ದು 'ಶೆಪರ್ಡ್ ಹೋಟೆಲ್'ನಲ್ಲಿ. ಇದನ್ನು 'ಪ್ಯಾಲೆಸ್ಟೈನ್ ಲಿಬರೇಶನ್ ಆರ್ಗನೈಸೇಶನ್'ನ ನಾಯಕರಾಗಿದ್ದ ಯಾಸಿರ್ ಅರಾಫತ್ ಉದ್ಘಾಟಿಸಿದ್ದರು.

ಹೋಟೆಲಿನ ಕೌಂಟರಿನಲ್ಲಿದ್ದ ''ದಿಸ್ ವೀಕ್ ಇನ್ ಪ್ಯಾಲೆಸ್ಟೈನ್' ಪತ್ರಿಕೆ ತೆರೆದೆ. ಜಗತ್ತು ಹೊಸ ವರ್ಷದ ಆಗಮನವನ್ನು ಸಂಭ್ರಮದಿಂದ ಸ್ವಾಗತಿಸಿತ್ತು. ಆದರೆ ಇಲ್ಲಿ ಪ್ಯಾಲೆಸ್ಟೈನ್ ಜನರಿಗೆ ಈ ಹೊಸ ವರ್ಷ ಯಾವ ಭರವಸೆಯನ್ನೂ ತಂದಿರಲಿಲ್ಲ. ಅವರ ಭವಿಷ್ಯ ವರ್ತಮಾನದ ಗೋಡೆಯಲ್ಲಿ ಬಂಧಿಯಾಗಿದೆ. ''ಮತ್ತೊಂದು ವರ್ಷ ಉರುಳಿದೆ. ನಮ್ಮ ಪರಿಸ್ಥಿತಿಯಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಹಾಗೆ ನೋಡಿದರೆ, ನಾವು ಮತ್ತಷ್ಟು ಕೆಟ್ಟ ಪರಿಸ್ಥಿತಿಗೆ ಜಾರಿದ್ದೇವೆ. ಇಸ್ರೇಲ್ ಆಗಲೆ 'ಅರಬರ ಪೂರ್ವ ಜೆರೂಸಲೆಂ'ನಲ್ಲಿ ಮತ್ತಷ್ಟು ಹೊಸ 'ಇಸ್ರೇಲಿ ಸೆಟಲ್‌ಮೆಂಟ್' ಕಟ್ಟಲು ಹೊರಟಿದೆ. ಗಾಜಾ ಸ್ಥಿತಿಯಂತು ಮತ್ತಷ್ಟು ಹದಗೆಟ್ಟಿದೆ...'' ಸಂಪಾದಕೀಯವನ್ನು ಓದಿದೆ. ಇದು ಇಲ್ಲಿಯ ಹೊಸ ವರ್ಷವಾಗಿತ್ತು!

ಪ್ಯಾಲೆಸ್ಟೈನ್‌ನಲ್ಲಿರುವ ಈ ಒಂದು ವಾರ ಇಲ್ಲಿಯ ಊರು, ಕೇರಿ, ಗಲ್ಲಿಗಳಲ್ಲಿ ಅಲೆಯಬಯಸಿದ್ದೆ. ಜನರೊಡನೆ ಬೆರೆಯಲು ಬಯಸಿದ್ದೆ. 'ತೀರ್ಥಯಾತ್ರಿ'ಗಳಾಗಿ ಗುಂಪಿನೊಡನೆ ಬಂದ ನಮಗೆ ಸ್ವತಂತ್ರವಾಗಿ ಅಲೆಯುವುದು ಅಷ್ಟು ಸುಲಭವಿರಲಿಲ್ಲ. ಹಾಗೆಂದೇ, ಮರು ದಿನ ಬೆಳಗ್ಗೆ ನಾನು, ನನ್ನೊಡನೆ ಜೊತೆಯಾದ ಸಂಗಾತಿ ಗೀತಾ, ಬಲು ಬೇಗ ಎದ್ದೆವು. ಉಳಿದ ಪ್ರವಾಸಿಗರು ಎದ್ದು ಬೆಳಗಿನ ತಿಂಡಿ ಮುಗಿಸಿ ಹೊರಡುವುದರಲ್ಲಿ ಒಂಭತ್ತಾಗುವುದೆಂದು ಗೊತ್ತಿತ್ತು. ನಾವು ಏದೂವರೆಗೇ ಕೋಣೆಯಿಂದ ಹೊರಬಿದ್ದೆವು.



ಶೆಪರ್ಡ್ ಹೋಟೆಲಿನಿಂದ ಹೊರ ಬಂದು ನಡೆಯುತ್ತಿದ್ದಂತೆ, ರಾತ್ರಿ ಹಿಮ ಸುರಿದದ್ದು ಕಂಡಿತು. ಇಲ್ಲಿ ಈ ಮರಳುಗಾಡಿನಲ್ಲಿ ಹಿಮ ಸುರಿಯುವುದು ಅಪರೂಪಕ್ಕೆ, ವರ್ಷದಲ್ಲಿ ಒಂದೋ ಎರಡೋ ದಿನ. ನಾವು ಆ ದಿನವೇ ಬಂದಿದ್ದೆವು! ಬೀದಿಗೆ ಇಳಿದೆವು. ಪುರಾತನ ಗಲ್ಲಿಗಳಲ್ಲಿ ನಮ್ಮ ಹೆಜ್ಜೆಗಳು. ಕಲ್ಲಿನ ಕಟ್ಟಡಗಳು, ಏರಿಳಿದ ಗುಡ್ಡದ ಮೇಲಿನ ಊರು. ಕಿರುಗಲ್ಲಿಯ ಏರಿಳಿತದಲ್ಲಿ ಒಂದಕ್ಕೊಂದು ಒತ್ತಿಕೊಂಡ ಸಣ್ಣ ಸಣ್ಣ ಮನೆಗಳು. ಬೆಳಗಿನ ಈ ಹೊತ್ತು, ರಸ್ತೆಗಳು ಖಾಲಿಯಾಗಿದ್ದವು. ಕಸ ಗುಡಿಸುತ್ತಿದ್ದವರು, ಬೇಕರಿಗಳಲ್ಲಿ ದಪ್ಪ ದಪ್ಪನೆಯ ರೊಟ್ಟಿ ಮಾಡುವವರು, ಬೀದಿ ಬದಿಯಲ್ಲಿ ಸುಂದರ 'ಸಮೊವಾರ ಪಾತ್ರೆ'ಯಲ್ಲಿಟ್ಟ ಬಿಸಿ ಬಿಸಿ ಕಾಫಿ ಚಹಾ ಮಾರುವವರು ಮಾತ್ರ ಕಂಡರು. ನಾವು ಕಣ್ಣಿಗೆ ಬಿದ್ದವರೊಡನೆ ಮಾತನಾಡುತ್ತಾ ಹೊರಟೆವು. ಅವರ ಅರೇಬಿಕ್ ಭಾಷೆ ನಮಗೊಂದು ತಡೆಯಾಗಿರಲಿಲ್ಲ. ಸ್ನೇಹಕ್ಕೆ ಯಾವ ಸರಹದ್ದು?

ಈಗ 'ನಜಾಜ್ರ' ಎಂಬ ಗಲ್ಲಿಯಲ್ಲಿ ಹಾದು ಬರುತ್ತಿದ್ದೆವು. ಇಲ್ಲಿಯೂ ಬ್ರೆಡ್ಡು-ರೊಟ್ಟಿ ಮಾಡುವ ಸಣ್ಣ ಬೇಕರಿ ಕಂಡಿತು. ಆಳದಲ್ಲಿ ತೆರೆದ ದೊಡ್ಡ ಓವನ್ ಎದುರು ನಿಂತ 'ರೊಟ್ಟಿ ಮಾಡುವಾತ' ಒಳಗೆ ಬೆಂಕಿಯೊಳಕ್ಕೆ ಕಬ್ಬಿಣದ ದೊಡ್ಡ ಸರಳನ್ನು ನೂಕುತ್ತಿದ್ದ. ವಿದ್ಯಾವಂತನಂತೆ ಕಂಡ ಮತ್ತೊಬ್ಬ ವ್ಯಕ್ತಿ ಇತ್ತ ಬದಿಗೆ, ಒಂದು ಸಣ್ಣ ಸ್ಟೂಲಿನ ಮೇಲೆ ಕುಳಿತಿದ್ದ. ಚಳಿಯ ಮುಂಜಾನೆಗೆ ಈ ಬೇಕರಿಯ ಬಿಸಿ ಹಿತವಾಗಿತ್ತು. ನಾವು ಒಳ ಹೊಕ್ಕೆವು. ''ಒಳಗೆ ಬರಬಹುದೆ?'' ಕೇಳಿದೆ. ''ಧಾರಾಳವಾಗಿ'' ಆತ ಇಂಗ್ಲಿಷಿನಲ್ಲಿ ಉತ್ತರಿಸಿದ. ಅಲ್ಲಿಗೆ ನಮ್ಮ ಸ್ನೇಹವಾಗಿತ್ತು. ಆತನ ಹೆಸರು ನಾದಿರ್ ಅಬು ದಯೇ. ಕೆಲವೇ ನಿಮಿಷಗಳು, ನಾವಾಗಲೆ ನಮ್ಮ ನಮ್ಮ ದೇಶ, ರಾಜಕೀಯ, ಇಸ್ರೇಲ್-ಪ್ಯಾಲೆಸ್ಟೈನ್ ಘರ್ಷಣೆಯ ಬಗ್ಗೆ ಮಾತನಾಡುತ್ತಿದ್ದೆವು. ಗೋಧ್ರಾ-ಗುಜರಾತಿನ ನಂತರವೂ ಭಾರತದ ಬಗ್ಗೆ ಅಗಾಧ ಅಭಿಮಾನ, ಪ್ರೀತಿ ಈ ಜನರಲ್ಲಿದೆ.

ಈಗ ಗೋಡೆಯ ಒಳಗಿನ ಪ್ಯಾಲೆಸ್ಟೈನ್ ಜನರ ಬದುಕನ್ನು ಕಾಣುತ್ತಿದ್ದೆವು. ಇಲ್ಲಿ ಹೊಸ ಕಾರ್ಖಾನೆಗಳಾಗಲಿ, ಉದ್ಯಮವಾಗಲಿ, ವಿದೇಶಿ ಬಂಡವಾಳ, ಉದ್ಯೋಗ ಯಾವುದೂ ಸಾಧ್ಯವಿಲ್ಲ. ಸದಾ ಇಸ್ರೇಲಿ ಸೇನೆಯ ಕರಿನೆರಳಿನಡಿ ಅಭದ್ರತೆಯಲ್ಲಿ ಇವರ ಬದುಕು. ನೀರು, ವಿದ್ಯುತ್ ಎಲ್ಲವೂ ಇಸ್ರೇಲಿನ ನಿಯಂತ್ರಣದಲ್ಲಿ. ಹಿಗ್ಗಲಾರದೆ, ಮತ್ತಷ್ಟು ಒತ್ತರಿಸಿ ನಿಂತ ಬದುಕು ಇವರದು.

ತಮ್ಮ ನೆಲದಲ್ಲಿಯೇ ಬಂಧಿಯಾದ ಈ ಜನರಲ್ಲಿ ರೋಷವನ್ನು, ದ್ವೇಷವನ್ನು, ನಿಂತು ನೋಡುತ್ತಿರುವ ಜಗತ್ತಿನ ವಿರುದ್ಧ ಆಕ್ರೋಶವನ್ನು ನಿರೀಕ್ಷಿಸಿದ್ದೆ. ಸಾಮಾನ್ಯ ಜನ, ಇವೆಲ್ಲಕ್ಕೂ ಶಾಂತಿಯುತ ಪರಿಹಾರವನ್ನು, ಅಹಿಂಸಾತ್ಮಕ ಅಂತ್ಯವನ್ನು ಬಯಸುತ್ತಿದ್ದಾರೆ. ಸಿಡಿವ ಆತ್ಮಹತ್ಯಾ ಸ್ಫೋಟ ಅವರ ಆಯ್ಕೆಯಲ್ಲ. ಆದರೆ ಗೋಡೆಗೆ ನೂಕಿದ ಈ ಜನರು ಸಿಡಿಯುತ್ತಿರುವುದೂ ಸುಳ್ಳಲ್ಲ.

ದಾರಿಯ ಉದ್ದಕ್ಕೂ ಮುಗುಳ್ನಗುವ, ಸ್ವಾಗತಿಸುವ ಸ್ನೇಹದ ಮುಖಗಳನ್ನೇ ನಾವು ಕಂಡೆವು. ಇವರು ಸಾಮಾನ್ಯ ಜನರು, ಅಸಾಮಾನ್ಯ ಪರಿಸ್ಥಿತಿಯಲ್ಲಿ ಸಿಕ್ಕಿ ಬಿದ್ದವರು. ತಮ್ಮ ನೆಲದಲ್ಲಿಯೇ ನಿರಾಶ್ರಿತರಾದವರು. ತಮ್ಮ

ನೆಲದಲ್ಲಿಯೇ ಏರು ಗೋಡೆಯ ಹಿಂದೆ ಬಂಧಿಗಳು. ಯಾರ ತಪ್ಪಿಗೋ, 'ಸಾಮೂಹಿಕ ಶಿಕ್ಷೆ'ಗೆ ಒಳಗಾದವರು.

ಇಂತಹ ಅಸಾಧಾರಣ ಪರಿಸ್ಥಿತಿಯಲ್ಲಿಯೂ ಇವರ ಹೋರಾಟ ನಿಂತಿಲ್ಲ. ಇವರ ಹೋರಾಟವೆಲ್ಲ, ಮುಖ್ಯ ಮಾಧ್ಯಮಗಳು ತೋರಿಸುವಂತೆ ಆತ್ಮಹತ್ಯಾ ಆಸ್ಫೋಟವಲ್ಲ. ಶಾಂತಿಯುತ ಅಹಿಂಸಾತ್ಮಕ ಹೋರಾಟ ಮತ್ತು ಪ್ರತಿಭಟನೆ ಲೆಕ್ಕವಿಲ್ಲದಷ್ಟು ನಡೆದಿದೆ, ನಡೆಯುತ್ತಿದೆ. ಹೆಂಗಸರು, ಮಕ್ಕಳು, ಮುದುಕರು, ಇಸ್ರೇಲಿನ ಗುಂಡೇಟಿನಿಂದ ಅಂಗವಿಕಲರಾದವರು – ಇವರೆಲ್ಲರೂ ತಮ್ಮದೇ ರೀತಿಯಲ್ಲಿ 'ಗೋಡೆ'ಯನ್ನು ಪ್ರತಿಭಟಿಸಿದ್ದಾರೆ. ಹೋರಾಟದಲ್ಲಿ ಭಾಗಿಯಾಗಿದ್ದಾರೆ. ಆದರೆ ಅವೆಲ್ಲ ಮುಖ್ಯ ವಾಹಿನಿಯಲ್ಲಿ ಬಿತ್ತರವಾಗುವುದಿಲ್ಲ, ಸುದ್ದಿಯಾಗುವುದಿಲ್ಲ.

ಹೊಳಪು ಬಣ್ಣದ ಇಲ್ಲಿಯ ಮಹಿಳೆಯರು ಆಕರ್ಷಕ ಬಣ್ಣದ ಸ್ಕಾರ್ಫ್‌ಗಳಿಂದ ತಲೆಯನ್ನು ಮುಚ್ಚಿಕೊಂಡಿರುವುದು ಕಂಡಿತು. ಮುಖ ಮುಚ್ಚಿಕೊಳ್ಳುವ ಸಂಪ್ರದಾಯ ಇಲ್ಲಿ ಕಾಣಲಿಲ್ಲ. ಕರಿ ಬುರ್ಖಾ ಕೂಡ ಇಲ್ಲಿ ಜನಪ್ರಿಯವಲ್ಲ. ಬಣ್ಣ ಬಣ್ಣದ ಉಡುಗೆಗಳು ಅವರ ಮೈಮೇಲೆ. ಬಂಧನದಲ್ಲಿಯೂ ಜೀವನೋತ್ಸಾಹವನ್ನು ಕಳೆದುಕೊಳ್ಳದೆ ಬದುಕಲು ಹೊರಟವರು.

ಪ್ಯಾಲೆಸ್ಟೈನ್‌ನಲ್ಲಿ ಇದ್ದ ಒಂದು ವಾರ, ಅನೇಕ ಬಾರಿ ಏರು ಗೋಡೆಯನ್ನು ದಾಟಿ ಜೆರೂಸಲೆಂಗೆ ಹೆಜ್ಜೆ ಇಟ್ಟೆವು. ಇತರರೊಡನೆ ಪ್ರವಾಸಿ ಬಸ್ಸಿನಲ್ಲಿ ಹೊರಟಂತೆ, 'ಚೆಕ್ ಪೋಸ್ಟ್' ಬಳಿ ಇಸ್ರೇಲಿನ ಯೋಧರು 'ಟೆಲಿಸ್ಕೋಪಿಕ್ ಸೈಟ್' ಅಳವಡಿಸಿದ ಮಷೀನ್ ಗನ್ ಹಿಡಿದು ನಿಂತಿರುವುದು ಕಾಣುತ್ತಿತ್ತು. ಅವರು ಬಸ್ಸಿನ ಒಳಹೊಕ್ಕು ನಮ್ಮೆಲ್ಲರ 'ಪಾಸ್‌ಪೋರ್ಟ್-ವೀಸಾ' ಚೆಕ್ ಮಾಡಿ, ಬರೀ ಭಾರತೀಯರೆ ಇದ್ದ ನಮ್ಮ ಬಸ್ಸನ್ನು ಹೆಚ್ಚೇನೂ ತೊಂದರೆ ಇಲ್ಲದೆ ಇಸ್ರೇಲ್ ಪ್ರವೇಶಿಸಿಲು ಬಿಡುತ್ತಿದ್ದರು. ಆದರೆ ನನಗೆ ಗೊತ್ತಿತ್ತು, ಈ ಗೋಡೆಯನ್ನು ಓರ್ವ ಪ್ಯಾಲೆಸ್ಟೈನಿನ ಪ್ರಜೆ ಇಷ್ಟು ಸುಲಭವಾಗಿ ದಾಟಲಾರ ಎಂದು. ವೆಸ್ಟ್ ಬ್ಯಾಂಕ್ ಸುತ್ತುವರೆದು ಒತ್ತರಿಸಿ ನಿಂತ ಈ ಗೋಡೆಗೆ ನೂರಾರು ಚೆಕ್ ಪೋಸ್ಟ್‌ಗಳಿವೆ.

ಅನೇಕ ಬಾರಿ ಬಸ್ಸನ್ನು ಗೋಡೆಯ ಬಳಿ ನಿಲ್ಲಿಸಲು ಡ್ರೈವರ್ ಶರೀಫ್ ಅವರನ್ನು ಕೇಳಿಕೊಂಡಿದ್ದೆ. ಉಹುಂ ಆತ ನಿಲ್ಲಿಸಲಿಲ್ಲ, ಅದು ಅಪಾಯದ್ದಿತ್ತು. ಸರಿ, ರಾತ್ರಿ ಹೊರಬಿದ್ದೆ. ನನ್ನೆಲ್ಲ ಹುಚ್ಚು ಸಾಹಸಕ್ಕೆ, ನನ್ನೊಡನೆ ಗೀತಾ ಇದ್ದರು. ಒಂದು ಟ್ಯಾಕ್ಸಿ ಹಿಡಿದು ''ಗೋಡೆಯ ಬಳಿಗೆ ಕರೆದೊಯ್ಯುವಿರಾ ?'' ಕೇಳಿದೆ, ಆತನಿಗೆ ಮೊದಲು ನಾನು ಏನು ಹೇಳಿದೆ ಎಂದೇ ಅರ್ಥವಾಗಲಿಲ್ಲ. ಇಲ್ಲಿಗೆ ಬರುವ ಪ್ರವಾಸಿಗರು ಚರ್ಚ್‌ಗಳನ್ನು ಸುತ್ತುತ್ತಾರೆ, ಅಂಗಡಿಗಳಲ್ಲಿ ಅಲೆಯುತ್ತಾರೆ. ನಾವು 'ಗೋಡೆ' ನೋಡಲು ಕೇಳುತ್ತಿದ್ದೆವು. ಚೆಕ್ ಪೋಸ್ಟ್‌ನ ಬಳಿ ಇರುವ ಗೋಡೆ ಎಂದು ತಿಳಿಸಿ ಹೇಳಿದ ಮೇಲೆ, 'ನಾಲ್ಕು ಡಾಲರ್' ಕೇಳಿದ. ''ಸರಿ'' ಎಂದು ಒಳಕುಳಿತೆವು. ನಾವಿದ್ದ ಗಲ್ಲಿಯೇ ಮುಖ್ಯ ಬೀದಿ. ಇಲ್ಲಿ ನೀವು ಇಸ್ರೇಲಿನ ನಗರಗಳ ಝಗ ಮಗಿಸುವ ಮಾಲ್‌ಗಳನ್ನು, ಶಾಪಿಂಗ್ ಸೆಂಟರ್‌ಗಳನ್ನು, ಆಧುನಿಕ ಬಹು ಮಹಡಿ ಕಟ್ಟಡಗಳನ್ನು ಕಾಣಲಾಗದು. ಈ ಪುರಾತನ ಗಲ್ಲಿಯ, ಪುರಾತನ ಅಂಗಡಿಗಳಲ್ಲಿಯೇ ಒಂದಿಷ್ಟು ಸಂಭ್ರಮದ ಸಾಮಾನುಗಳನ್ನು ನೋಡಬೇಕು. ಅಂಗಡಿಗಳಲ್ಲಿ ನಿಮಗೆ ಪರಿಚಿತವಿರುವ ಬಹು ರಾಷ್ಟ್ರೀಯ ಕಂಪನಿಗಳ ಆಕರ್ಷಕ ಬ್ರಾಂಡ್‌ಗಳು ಇಲ್ಲಿ ಕಾಣವು. ಬಗಲಿನ ಅರಬರ ದೇಶಗಳಿಂದ ಬಂದ ಸಾಮಾನುಗಳು.

ಇದೇ ಮುಖ್ಯರಸ್ತೆ, ಒಂದಿಷ್ಟು ಅಂಗಡಿ ಸಾಲು. ಅದರಾಚೆ ಬಹುಪಾಲು ಕತ್ತಲು, ರಸ್ತೆ ದೀಪಗಳೂ ಮಂಕಾಗಿ, ಗೋಡೆಯ ಬಳಿಗೆ ಬಂದಾಗ ಸಂಪೂರ್ಣ ಕಗ್ಗತ್ತಲು. ಹೊಸದಾಗಿ ಡಿಜಿಟಲ್ ಕ್ಯಾಮರಾ ಕೊಂಡದ್ದು ಒಳ್ಳೆಯದಾಯಿತು. ಕತ್ತಲಲ್ಲೂ ಒಂದಿಷ್ಟು ಫೋಟೋ ತೆಗೆಯಲು ಸಾಧ್ಯವಾಯಿತು. ಗೋಡೆಯ ಫೋಟೋ ತೆಗೆದುಕೊಂಡೆ. ಗೋಡೆಯ ಮೇಲೆ ಪ್ಯಾಲೆಸ್ಟೈನ್ ಜನರ ಗೋಡೆಯ ಭಾಗದಲ್ಲಿ ಬೆಳಕಿತ್ತು. ಒಂದೆಡೆ ಬರೆದಿತ್ತು : 'RESIST, REFUSE, REJECT'.

ಈ ಅತ್ಯಂತ ಹತಾಶಸ್ಥಿತಿಯಲ್ಲಿಯೂ ಈ ಜನ ಭರವಸೆಯನ್ನು ಕಳೆದುಕೊಂಡಿಲ್ಲ ಎಂಬುದಕ್ಕೆ ಸಂಕೇತವಾಗಿ ಮತ್ತೊಂದೆಡೆ ಬರೆದಿತ್ತು : 'KNOW HOPE'.

ಇದು ಸಾಮಾನ್ಯ ಗೋಡೆಯಲ್ಲ. ಏರು ಎತ್ತರದ ಈ ಗೋಡೆ ಸುಮಾರು ೮ ಮೀಟರುಗಳಷ್ಟಿದೆ. ಅಲ್ಲಿ ಬರ್ಲಿನ್‌ನಲ್ಲಿ ನಿಂತ ಗೋಡೆ ಕೇವಲ ಮೂರೂವರೆ ಮೀಟರ್ ಇತ್ತು. ಆ ಗೋಡೆಯನ್ನು ಮುರಿದು ಒಂದಾದ ಪೂರ್ವ-ಪಶ್ಚಿಮ ಬರ್ಲಿನ್ ಅನ್ನು ದಶಕದ ಹಿಂದೆ ನೋಡಿ ಬಂದಿದ್ದೆ. ಇಲ್ಲಿ ಗೋಡೆ ಇತ್ತು ಪುಡಿಯಾಗದಂತೆ, ಪ್ಯಾಲೆಸ್ಟೈನ್ ಜನತೆಯನ್ನು ತಮ್ಮ ನೆಲದಲ್ಲಿಯೇ 'ತೆರೆದ ಜೈಲಿ'ನಲ್ಲಿ ಸೆರೆ ಹಿಡಿದು.



ಪ್ಯಾಲೆಸ್ಟೈನ್ ಅನ್ನು ಸುತ್ತುವರೆದ 'ಇಸ್ರೇಲಿ ಗೋಡೆ'ಯ ಮೇಲೆ ಅಣಕು ಚಿತ್ರಗಳು

### ಒಂದಿಷ್ಟು ಇತಿಹಾಸ

ಎರಡನೇ ಮಹಾಯುದ್ಧದ ಸಮಯ. ಹಿಟ್ಲರನ ಜರ್ಮನಿಯಲ್ಲಿ ಯಹೂದಿಗಳ ಮಾರಣ ಹೋಮ ಆದದ್ದು ಚರಿತ್ರೆಯ ಅತ್ಯಂತ ಕರಾಳ ಕತೆ. ಯಹೂದಿಗಳ ಮೇಲೆ ಅತ್ಯಾಚಾರ ಎಸಗಿದವರು ಯೂರೋಪಿಯನ್ನರು. ಆದರೆ ಬೆಲೆ ತೆತ್ತವರು ಮಾತ್ರ ಅರಬರು. ಮಹಾಯುದ್ಧ ಮುಗಿದು ಯಹೂದಿಗಳಿಗೊಂದು ತಾಣ ನೀಡಬೇಕೆಂದು ನಿರ್ಧಾರ ತೆಗೆದುಕೊಂಡಾಗ, ಯೂರೋಪಿನಲ್ಲಿ ತುಂಡು ನೆಲವನ್ನು ನೀಡಲಿಲ್ಲ. ಕೊಟ್ಟದ್ದು, ಅರಬರ ನೆಲದ ನಟ್ಟನಡುವೆ ನಿಂತ ಪ್ಯಾಲೆಸ್ಟೈನ್ ! ಎಂದೋ ಎರಡು ಸಾವಿರ ವರ್ಷಗಳ ಹಿಂದೆ ಇಲ್ಲಿ ಯಹೂದಿ ಮತ ಆರಂಭವಾಯಿತು ಎಂಬ ಕಾರಣ ಹೇಳಿದರು. ಧರ್ಮಕಾರಣವೋ, ರಾಜಕಾರಣವೋ, ಯಹೂದಿಗಳು ಬಂದು ನೆಲೆಸಿದರು ಪ್ಯಾಲೆಸ್ಟೈನ್‌ನಲ್ಲಿ – 'ಇಸ್ರೇಲ್' ಜನ್ಮ ಪಡೆಯಿತು. ಶತಶತಮಾನಗಳು ಇಲ್ಲಿದ್ದವರನ್ನೆಲ್ಲ ಒತ್ತರಿಸಿ, ಯಹೂದಿಯರು ಕಾಲೂರಿ ನಿಂತರು.

ಪಶ್ಚಿಮ ಏಷಿಯಾದ ಭಾಗವಾಗಿರುವ ಈ ಪ್ಯಾಲೆಸ್ಟೈನ್ ನೆಲದಲ್ಲಿ, ಕ್ಯಾನನೈಟ್ಸ್ ಎಂಬ ಅರಬ್ ಪಂಗಡಗಳು ಅತ್ಯಂತ ಮೂಲ ನಿವಾಸಿಗಳಾಗಿದ್ದು, ಕ್ರಿ. ಪೂ. ೩೫೦೦ರಲ್ಲಿ ಇಲ್ಲಿ ನೆಲೆಸಿದ್ದರು. ಈಜಿಪ್ತಿನಲ್ಲಿ ಚಕ್ರವರ್ತಿಯ ಊಳಿಗದಲ್ಲಿದ್ದ 'ಇಸ್ರೇಲಿನ ಮಕ್ಕಳು' ಎಂದು ಕರೆಸಿಕೊಂಡ ಯಹೂದಿಯರು ಪ್ರಥಮವಾಗಿ ಕ್ರಿ. ಪೂ. ೧೨೦೦ರಲ್ಲಿ ಪ್ಯಾಲೆಸ್ಟೈನ್ ನೆಲವನ್ನು ಪ್ರವೇಶಿಸಿದರು ಎಂಬ ನಂಬುಗೆ ಇದೆ. ೧೯೪೮ರಲ್ಲಿ ಇಸ್ರೇಲ್ ಸ್ಥಾಪನೆ ಆದಮೇಲೆ, ಮುಂದಿನ ಎರಡು ದಶಕಗಳಲ್ಲಿ ೧೪ ಲಕ್ಷ ಯಹೂದಿಯರು ಪ್ಯಾಲೆಸ್ಟೈನ್ ನೆಲಕ್ಕೆ ವಲಸೆ ಬಂದರು. ಬಂದೂಕಿನ ಬಲದಿಂದ, ಶತಮಾನಗಳಿಂದ ಇಲ್ಲಿದ್ದ ಜನರ ಸಾಮೂಹಿಕ ದೇಶಾಂತರಕ್ಕೆ ಕಾರಣವಾದರು. ಒಂದು ಅಂದಾಜಿನ ಪ್ರಕಾರ ೪೭೫ ಹಳ್ಳಿಗಳನ್ನು ಪ್ಯಾಲೆಸ್ಟೈನಿಯರಿಂದ ಖಾಲಿ ಮಾಡಿಸಲಾಯಿತು. ೩೮೫ ಹಳ್ಳಿಗಳನ್ನು ಸಂಪೂರ್ಣವಾಗಿ ನೆಲಸಮ ಮಾಡಿ ಯಹೂದಿಯರಿಗೆ ವಸತಿಯನ್ನು ನಿರ್ಮಿಸಲಾಯಿತು. ೧೯೪೯ರ ವೇಳೆಗೆ ಯಹೂದಿಯರ ಈ ಕೃತ್ಯಗಳಿಂದಾಗಿ ಪ್ಯಾಲೆಸ್ಟೈನ್ ನಿರಾಶ್ರಿತರ ಸಂಖ್ಯೆ ೯.೬೦ ಲಕ್ಷದಷ್ಟಾಯಿತು. ವಿಶ್ವಸಂಸ್ಥೆಯ ವರದಿಗಳ ಪ್ರಕಾರ ೧೯೬೫ರ ವೇಳೆಗೆ ಈ ಸಂಖ್ಯೆ ೧೨.೮ ಲಕ್ಷ ಆಗಿ, ೧೯೮೦ರಲ್ಲಿ ೩೦ ಲಕ್ಷದ ಸಂಖ್ಯೆಯನ್ನು ಮುಟ್ಟಿದೆ.

೧೯೪೭ರ ಯು.ಎನ್. ರೆಸೊಲ್ಯೂಷನ್ ಶೇಕಡ ೪೫ರಷ್ಟು 'ಬ್ರಿಟಿಷ್ ಮ್ಯಾನ್‌ಡೇಟ್' ಅನ್ನು ಪ್ಯಾಲೆಸ್ಟೈನ್ ಆಗಿ ನೀಡಿತ್ತು. ಆದರೆ ಅದರ ಶೇಕಡ ೭೮ ಜಾಗವನ್ನು ಇಸ್ರೇಲ್ ಆಕ್ರಮಿಸಿ, ಪ್ಯಾಲೆಸ್ಟೈನ್ ಆಗಿ ಉಳಿಸಿದ್ದು ಕೇವಲ 'ಗಾಜಾ' ಮತ್ತು 'ವೆಸ್ಟ್ ಬ್ಯಾಂಕ್'ನ ಶೇಕಡ ೨೨ ಮಾತ್ರ. ೧೯೯೩ರ ಈಚೆಗೆ ಪ್ಯಾಲೆಸ್ಟೈನಿಯರ ಹೋರಾಟವೆಲ್ಲ ಕೇವಲ ಶೇಕಡ ೨೨ ರಷ್ಟಿರುವ ಈ ಜಾಗಕ್ಕಾಗಿದೆ. ಈಗ ಎದ್ದಿರುವ ಗೋಡೆ ಇದರ ಅರ್ಧಕ್ಕೂ ಹೆಚ್ಚು ಪಾಲಿನ ಉಪಯುಕ್ತ ನೆಲವನ್ನು ಗಬಳಿಸಿದೆ. ಆರು ಮಿಲಿಯ ಯಹೂದಿಯರು ಈಗ ಶೇಕಡ ೯೦ ನೆಲ ಮತ್ತು ಜಲವನ್ನು ಆವರಿಸಿದ್ದಾರೆ. ಅದೇ ಮೂರೂವರೆ ಮಿಲಿಯ ಪ್ಯಾಲೆಸ್ಟೈನ್ ಜನತೆ, ಏರು ಎತ್ತರದ ಗೋಡೆಯ ಹಿಂದೆ ಒತ್ತರಿಸಲ್ಪಟ್ಟು ಬದುಕುತ್ತಿದ್ದಾರೆ.

### ಅತಂತ್ರ ಬದುಕು

ಮತ್ತೊಂದು ರಾತ್ರಿ ನಾನು ಖಧಿರ್ ಅವರನ್ನು ಹುಡುಕಿ ಹೋದೆವು. [illegible]

ಬಂದಾಗ ಆತ ಅಲ್ಲಿರಲಿಲ್ಲ. ಆತನ ರೊಟ್ಟಿ ಮಾಡುವಾತನಿಗೆ ಇಂಗ್ಲಿಷ್ ಬಾರದಿದ್ದರೂ ನಾವು ನಾದಿರ್ ಅವರನ್ನು ಹುಡುಕಿ ಬಂದದ್ದು ತಿಳಿಯಿತು. ನಾದಿರ್‌ಗೆ ಕರೆ ಹೋಯಿತು. ಸ್ವಲ್ಪ ಸಮಯದಲ್ಲಿಯೇ ಆತ ಲಗುಬಗೆಯಿಂದ ಬಂದ. ನಮ್ಮನ್ನು ನೋಡಿ ತುಂಬಾ ಸಂತಸದಿಂದ, ಆತ್ಮೀಯವಾಗಿ "ನಮ್ಮ ಮನೆಗೆ ಬನ್ನಿ" ಎಂದು ಆಹ್ವಾನಿಸಿದ. ಕಲ್ಲಿನ ಕಟ್ಟಡದ ಕಿರಿದು ಮೆಟ್ಟಿಲುಗಳನ್ನು ಹತ್ತಿ, ಸಣ್ಣ ಕೋಣೆಗೆ ಬಂದೆವು. ಅಲ್ಲಿ ಆ ಒಂದು ಕೋಣೆಯಲ್ಲಿ ಬಹಳ ಜನರಿದ್ದರು. "ಈಕೆ ನನ್ನ ಪತ್ನಿ, ಈಕೆ ನನ್ನ ಅಣ್ಣನ ವಿಧವೆ, ನನ್ನ ಮಗ, ಮಗಳು, ಕೊನೆಯ ಕೂಸು... ನನ್ನ ಅಣ್ಣನ ಮಕ್ಕಳು, ನಾವೆಲ್ಲರೂ ಈ ಚಿಕ್ಕ ಜಾಗದಲ್ಲಿ ಬದುಕುತ್ತಿದ್ದೇವೆ." ಕಾರಣ ಕೇಳಬೇಕಿರಲಿಲ್ಲ. ಒತ್ತರಿಸಿ ಒಳನೂಕಿ 'ವೆಸ್ಟ್ ಬ್ಯಾಂಕ್'ನ ಮತ್ತಷ್ಟು ನೆಲವನ್ನು ಇಸ್ರೇಲ್ ಗೋಡೆ ಕಟ್ಟುವ ನೆಪದಲ್ಲಿ ಗಬಳಿಸಿದೆ.

ಸಾಧಾರಣ ಮನೆ, ಇಲ್ಲಿ ಯಾವ ಐಷಾರಾಮದ ವಸ್ತುಗಳನ್ನು ನಿರೀಕ್ಷಿಸುವಂತಿರಲಿಲ್ಲ. ಆತನ ಹೆಂಡತಿ ಮತ್ತು ಅತ್ತಿಗೆ, ಸಣ್ಣ ಸಣ್ಣ ಸೋರೆಕಾಯಿಗಳನ್ನು, ಗುಂಡು ಗುಂಡನೆಯ ಬದನೆಕಾಯಿಗಳನ್ನು ತೂತು ಕೊರೆದು, ಅವುಗಳ ಒಳಗಿನ ತಿರುಳನ್ನು ಹೊರತೆಗೆದು ಅರೆದ ಮಾಂಸವನ್ನೇನೋ ತುಂಬುತ್ತಿದ್ದರು. ನಾವು ಮಾತಿಗಿಳಿದೆವು. ಈತನ ಕತೆ ಬೇರೆ ಇರಲಿಲ್ಲ. ವಿದ್ಯಾವಂತರಾದರೂ, ಇಲ್ಲಿ ಕೆಲಸವಿಲ್ಲ, ಅವಕಾಶಗಳಿಲ್ಲ. ಗೋಡೆಯಾಚೆಯ ಪ್ರಪಂಚ ಈ ಮಕ್ಕಳ ಪಾಲಿಗಿಲ್ಲ. "ಇಷ್ಟು ಹತ್ತಿರವಿದ್ದರೂ, ನನ್ನ ಮಕ್ಕಳು ಸಮುದ್ರವನ್ನು ನೋಡಿಲ್ಲ. ಒಂದು ದಿನದ ಅನುಮತಿಗೆ ಅದೆಷ್ಟು ತಿಂಗಳು ಪಾಡು ಪಡಬೇಕು. ಅಲ್ಲಿ ಜೆರೂಸಲೇಂನಲ್ಲಿ ಒಂದು ರಾತ್ರಿಯೂ ಉಳಿಯುವಂತಿಲ್ಲ" ಆತ ಹೇಳಿದ. ಬದುಕು ಇಷ್ಟೇ ಆಗಿಲ್ಲ, ಯಾವ ಕ್ಷಣಕ್ಕೂ ಇಸ್ರೇಲಿನ ಯೋಧರು ತಪಾಸಣೆಯ ನೆಪದಲ್ಲಿ ನಿಮ್ಮ ಮನೆಗೆ ನುಗ್ಗಬಲ್ಲರು. ಅವರ ದೃಷ್ಟಿಯಲ್ಲಿ ಪ್ರತಿ ಪ್ಯಾಲೆಸ್ಟೈನ್‌ನವನೂ ಅನುಮಾನಾಸ್ಪದನೆ, ಆತಂಕವಾದಿಯೆ."ನನ್ನ ಅಣ್ಣ ಅವರ ಗುಂಡಿಗೆ ಬಲಿಯಾದ. ಈ ಮನೆಯನ್ನು ನೋಡಿ, 'ನೀನು ಅಸ್ತ್ರಗಳನ್ನು ಇಟ್ಟುಕೊಂಡಿದ್ದೀಯ' ಎಂದು ಒಂದು ದಿನ ಒಳನುಗ್ಗಿ ಕೆಡವಿ ಹಾಕಿದ್ದರು. ನನ್ನನ್ನೂ ಬಂಧಿಸಿ, ಜೈಲಿನಲ್ಲಿ ಕೂಡಿಹಾಕಿದ್ದರು. ಮತ್ತೇನೂ ಬಲವಾದ ಪುರಾವೆ ಇಲ್ಲದೆ ಹೊರಟು ಬಿಟ್ಟರು. ಬಲು ಕಷ್ಟದಿಂದ ನಾನು ಮತ್ತೆ ಎತ್ತಿ ಕಟ್ಟಬೇಕಾಯಿತು..." ಆತ ಈ ನೆಲದ ನೋವುಗಳ ಬಗ್ಗೆ ಹೇಳಿದ. ಈ ನಡುವೆ ನಮಗೆ ಎಲ್ಲಿಲ್ಲದ ಉಪಚಾರ ನಡೆಯಿತು. ಬಿಸಿಬಿಸಿ ಚಹಾ ಬಂತು. ಓವನ್‌ನಲ್ಲಿ ಮಡದಿ ದೊಡ್ಡ ತಗಡಿನ 'ಗಂಗಾಳ'ದಲ್ಲಿ ಮೆಂತ್ಯದ ಹಲ್ವಾ ಮಾಡಲು ಇಟ್ಟಿದ್ದಳು. ಆ ಸಿಹಿ ತಿನಿಸಿನ ಹೆಸರು 'ಹಿಲ್ಬಾ'. ಅದನ್ನು ಹೊರತೆಗೆದು, ಪಿಂಗಾಣಿ ತಟ್ಟೆಯ ತುಂಬಾ ಹಾಕಿ ನಮ್ಮ ಕೈಗಳಿಗಿಟ್ಟರು. ಮೆಂತ್ಯದ ಕಹಿಯೇ ಇರದಷ್ಟು ಸವಿಯಾದ ಸಿಹಿ ತಿಂಡಿಯನ್ನು ಮೆಲ್ಲುತ್ತಾ, ಅವರ ಬದುಕಿನ ಕಹಿ ಕತೆಗಳನ್ನು ಕೇಳಿದೆವು.

ರಾತ್ರಿ ತುಂಬಾ ತಡವಾಗಿತ್ತು. ಅಂಗಡಿಗಳು ಬಾಗಿಲು ಮುಚ್ಚಿದವು. ರಸ್ತೆಗಳಲ್ಲಿ ಜನರ ಓಡಾಟ ನಿಲ್ಲತೊಡಗಿತ್ತು. ನಾವು ಎದ್ದು ಹೊರಡಲೇ ಬೇಕಿತ್ತು, ನಮ್ಮ ಹೋಟೆಲಿಗೆ. ನಮ್ಮ ಕೈಯಲ್ಲಿದ್ದ ಅಷ್ಟೊಂದು ಸಿಹಿಯನ್ನು ಮುಗಿಸಲಾಗಿರಲಿಲ್ಲ. "ತಡೆಯಿರಿ ಕಟ್ಟಿಕೊಡುತ್ತೇನೆ" ಎಂದು ಆಕೆ, ಪಿಂಗಾಣಿ ತಟ್ಟೆಯ ಸಮೇತ ಕಟ್ಟಿ ಕೈಗಿಟ್ಟರು !

ದಿನ ಬೆಳಗೂ, ರಾತ್ರಿ ನಾವು ದಾಟಿ ಬರುತ್ತಿದ್ದ ಗೋಡೆ ಮತ್ತೆ ಮತ್ತೆ ನನ್ನನ್ನು ಕಾಡಿತ್ತು.



ಪ್ಯಾಲೆಸ್ಟೈನ್ ಕುಟುಂಬದೊಡನೆ




ವಾಲ್ ಶಲ್ ಫಾಲ್

ಈ ಗೋಡೆ ಸುಮ್ಮನೆ ಊರ ಹೊರಗೆಲ್ಲೋ ಎದ್ದು ನಿಂತದ್ದಲ್ಲ. ಈ ಗೋಡೆ ಈ ಜನರ ಎದೆಯ ಮೇಲೆಯೇ ಹಾದುಹೋಗಿದೆ. ಪ್ಯಾಲೆಸ್ಟೈನ್‌ನ ಒಳನುಗ್ಗಿ, ಅವರ ನೆಲ ಜಲ ಸಂಪನ್ಮೂಲಗಳನ್ನು ಗಬಳಿಸಿದ ಗೋಡೆ ಇದು.

ಇದು ಆರಂಭವಾದಾಗ ಜಗತ್ತಿಗೆ ಇಸ್ರೇಲ್ ಹೇಳಿದ್ದು "ಅಲ್ಲೊಂದು ಬೇಲಿ ನಿಲ್ಲುತ್ತದೆ, ತಾತ್ಕಾಲಿಕ ಬೇಲಿ". ಆದರೆ ಅಲ್ಲಿ ನಿಂತದ್ದು ಬೇಲಿಯಲ್ಲ, ೧.೩ ಬಿಲಿಯನ್ ಡಾಲರ್ ಖರ್ಚು ಮಾಡಿ ಎಬ್ಬಿಸಿದ ೮ ಮೀಟರ್ ಎತ್ತರದ ಕಾಂಕ್ರೀಟ್ ಗೋಡೆ, ಸಶಸ್ತ್ರ ಕಾವಲು ಗೋಪುರಗಳು, ಕ್ಯಾಮರಾ ಕಣ್ಣುಗಳು.

ಇದು ಅಂತಾರಾಷ್ಟ್ರೀಯವಾಗಿ ಮಾನ್ಯಗೊಂಡ ೧೯೬೭ರ 'ಗ್ರೀನ್ ಲೈನ್' ಎಂಬ ಸರಹದ್ದಿನ ಮೇಲೆ ನಿಂತದ್ದಲ್ಲ. ಅಂಕುಡೊಂಕಾಗಿ, ಎಲ್ಲೆಲ್ಲಿ ಹೇಗೇಗೆ ಇಸ್ರೇಲಿಯರಿಗೆ ಬೇಕೋ ಹಾಗೆ ತಿರುವು ಪಡೆದು, ಪ್ಯಾಲೆಸ್ಟೈನ್ ಒಳಹೊಕ್ಕು ಕಟ್ಟಿದ ಗೋಡೆ. 'ರಿಯಲ್ ಎಸ್ಟೇಟ್' ತಿಮಿಂಗಿಲಗಳು ಇಲ್ಲಿ ತೊಡಗಿದ್ದಾರೆ. ಈ ಜನರ ಮನೆ, ಅಂಗಳದಲ್ಲಿ, ಇವರ ಹೊಲಗದ್ದೆಗಳಲ್ಲಿ, ನೂರಾರು ವರ್ಷಗಳ ಪುರಾತನ ಆಲಿವ್ ಮರಗಳನ್ನು ಕತ್ತರಿಸಿ ಅವರು ಗೋಡೆ ಎಬ್ಬಿಸಿದ್ದಾರೆ. ಈ ಗೋಡೆಯ ಅಡಿಯಲ್ಲಿ ಅದೆಷ್ಟೋ ಮನೆಗಳೂ, ವಾಣಿಜ್ಯ ಕಟ್ಟಡಗಳೂ ಪುಡಿಯಾಗಿವೆ.

ಇಸ್ರೇಲಿನ ಪ್ರಕಾರ ಇದು 'ಸೆಕ್ಯುರಿಟಿ ಫೆನ್ಸ್', ಅವರ ಸುರಕ್ಷಣೆಯ ಬೇಲಿ. ಆದರೆ ಇದು ನಿಜವಾಗಿಯೂ 'ಜನಾಂಗೀಯ ಗೋಡೆ'ಯಾಗಿದೆ. ಜೂನ್ ೨೦೦೨ರಲ್ಲಿ ಇಸ್ರೇಲ್ ಈ ಗೋಡೆ ಕಟ್ಟಲು ಆರಂಭಿಸಿತು. ಗೋಡೆ ಸುರಕ್ಷಣೆಯನ್ನು ತರುತ್ತದೆ ಎಂದು ಬಹುಪಾಲು ಇಸ್ರೇಲಿ ಜನತೆ ನಂಬಿತು. ಅವರ ಸರಕಾರಿ ಪ್ರಚಾರ ಕೂಡ ನಂಬಿಸಿತು. ಪ್ಯಾಲೆಸ್ಟೈನ್ ನೆಲದಲ್ಲಿ ಕಟ್ಟಿದ ಈ ಗೋಡೆಯ ಹಾದಿಯಲ್ಲಿ ನೂರಾರು, ಸಾವಿರಾರು ಆಲಿವ್ ಮರಗಳನ್ನು ಬುಡ ಸಮೇತ ಎಬ್ಬಿಸಿ, ಇಸ್ರೇಲಿನ ಶ್ರೀಮಂತ ತೋಟಗಾರರಿಗೆ ಮಾರಲಾಯಿತು. ಹಳೆಯ ವೃಕ್ಷಗಳಿಗೆ ೫,೦೦೦ ಡಾಲರ್‌ನಷ್ಟು ಬೆಲೆ ಬಂದಿತ್ತು. ಬಹುಪಾಲು ಪ್ಯಾಲೆಸ್ಟೈನ್ ಜನರಿಗೆ ಇದ್ದ ಒಂದೇ ಆದಾಯ ಈ ಆಲಿವ್ ಮರಗಳು. ಗಬಳಿಸಿದ ನೆಲದಲ್ಲಿ ಇಸ್ರೇಲ್, ಏರು ಎತ್ತರದ ನವೀನ ಅಪಾರ್ಟ್‌ಮೆಂಟ್‌ಗಳನ್ನು ಕಟ್ಟಿ, ಅಗ್ಗವಾಗಿ ಯಹೂದಿಯರಿಗೆ ಅವನ್ನು ಕೊಟ್ಟು 'ಇಸ್ರೇಲಿ ಸೆಟಲ್‌ಮೆಂಟ್' ಆಗಿ ಮಾಡಿರುವುದು, 'ಪ್ಯಾಲೆಸ್ಟೈನ್ ಪ್ರಶ್ನೆ'ಯನ್ನು ಮತ್ತಷ್ಟು ಜಟಿಲವಾಗಿಸಿದೆ. ಬೆತ್ಲೆಹೆಮ್‌ನ ಗೋಡೆಯಾಚೆ ಎಲ್ಲಿಂದ ನೋಡಿದರೂ ನಮಗೆ ಕಾಣುತ್ತಿದ್ದದ್ದು ಖಾಲಿ ಮಾಡಿಸಿದ ಜಾಗದಲ್ಲಿ, ಏರು ಎತ್ತರದ ಬಹುಮಹಡಿಯ ಆಧುನಿಕ ಕಟ್ಟಡಗಳು. ಇಲ್ಲಿ ಪ್ಯಾಲೆಸ್ಟೈನ್‌ನಲ್ಲಿ ಬದುಕು ಪುರಾತನ ಗಲ್ಲಿಗಳಲ್ಲಿ ಕಲ್ಲು ಕಟ್ಟಡಗಳಲ್ಲಿ ನಿಂತುಹೋಗಿದೆ. ಒಂದಿಂಚೂ ಮುಂದುವರೆಯುವ ಸಾಧ್ಯತೆ ಇಲ್ಲದೆ. ಪ್ಯಾಲೆಸ್ಟೈನಿನ ಅನೇಕ ಸಣ್ಣ ಊರುಗಳಿಗೆ ನಾವು ಪ್ರವಾಸದ ಭಾಗವಾಗಿ ಭೇಟಿ ಕೊಟ್ಟೆವು. ಬೆತ್ಲೆಹೆಮ್‌ನಿಂದ ಹೊರಬಿದ್ದು ಜೆರೂಸಲೆಂಗೆ ಬಂದ ನಮಗೆ 'ಬೆತುನಿಯಾ' ಎಂಬ ಪ್ಯಾಲೆಸ್ಟೈನ್ ನಗರ ದೂರವೇನೂ ಇರಲಿಲ್ಲ. ಆದರೆ ನೇರವಾಗಿ ಅಲ್ಲಿಗೆ ತಲುಪುವ ದಾರಿ ಯಹೂದಿಗಳಿಗೆ ಮಾತ್ರ ಮೀಸಲಿದೆ. ಗೋಡೆಯನ್ನು ಸುತ್ತಿ ಬಳಸಿ ಹೋಗುವ ಪ್ಯಾಲೆಸ್ಟೈನಿಯ ಪಾಡು ಇವತ್ತು ನಮ್ಮದಾಗಿತ್ತು. ಬಸ್ಸಿನಿಂದ ಇಳಿದೊಡನೆ ಎದುರಿಗೆ ಒಂದು ಹಣ್ಣು - ತರಕಾರಿಗಳ ಅಂಗಡಿ ಕಂಡಿತು. ಅದರ ಮೇಲೆ ಎತ್ತರದಲ್ಲಿ ಕಟ್ಟಿದ ಬ್ಯಾನರ್ ಕೂಗಿತ್ತು – 'WE

SHALL NEVER KNEEL, NOR SURRENDER. THE WALL SHALL FALL.'

ಬಸ್ಸಿನಿಂದ ದೂರದಲ್ಲಿ ಕಾಣುವ ಗೋಡೆಯ ಫೋಟೋ ತೆಗೆಯುವುದೇ ಬಹುಪಾಲು ನನ್ನ ಕೆಲಸವಾಗಿತ್ತು. ಗೋಡೆ ಹಾವಿನಂತೆ ಸರಿದು ಸುತ್ತುವರೆದು, ಅನೇಕ ಹಳ್ಳಿಗಳ ಮನೆಯಂಗಳದಲ್ಲಿ, ಹಿತ್ತಲಲ್ಲಿ, ಹಾದಿತ್ತು. ಅಷ್ಟೇ ಅಲ್ಲ, ಈ ಗೋಡೆ, ಪ್ಯಾಲೆಸ್ಟೈನ್ ನೆಲವನ್ನೇ ಅನೇಕ ಛಿದ್ರಗಳಾಗಿ ತುಂಡರಿಸಿದೆ. ಜೊತೆಗೆ ಪ್ಯಾಲೆಸ್ಟೈನ್‌ನ ಅರ್ಧ ಭಾಗ ನೆಲವನ್ನು ಗಬಳಿಸಿದೆ. 'ಯಹೂದೀಯರಿಗೆ ಮಾತ್ರ' ಎಂಬ ಹೆದ್ದಾರಿಗಳನ್ನು, ನಡುವೆ ಮಿಲಿಟರಿ ಜೋನ್‌ಗಳನ್ನು ನಿರ್ಮಿಸಿ, ಅವರ ನೆಲದಲ್ಲಿಯೇ ಸರಾಗವಾಗಿ ಓಡಾಡಲು ಸಾಧ್ಯವಿಲ್ಲದ ಹಾಗೆ ಮಾಡಿದೆ. ಗೋಡೆಯಾಚೆಗೆ ಇರುವ ತಮ್ಮದೇ ನೆಲವನ್ನು ಹೊಲವನ್ನು ತಲುಪಲು ಸಾಧ್ಯವಿಲ್ಲ. ಆಚೆ ಹೋಗಲು ಇಸ್ರೇಲ್ ನಿರ್ಮಿಸಿರುವ ಚೆಕ್‌ಪೋಸ್ಟ್‌ಗಳ ಮೂಲಕ ಹೋಗಬೇಕು. ಅಲ್ಲಿ ಗಂಟೆಗಟ್ಟಲೆ, ದಿನಗಟ್ಟಲೆ ಪರ್ಮಿಟ್‌ಗೆ ಕಾಯುವುದು, ಅವರಿಂದ ಒದೆಸಿಕೊಳ್ಳುವುದು, ಗುಂಡಿಗೆ ಬಲಿಯಾಗುವುದು ಸಾಮಾನ್ಯವಾಗಿದೆ.

ಪವಿತ್ರ ನೆಲದಲ್ಲಿ ಎದ್ದು ನಿಂತ ಅಪವಿತ್ರ ಗೋಡೆ ಇದು. ಪ್ಯಾಲೆಸ್ಟೈನ್‌ನ ಕ್ರಿಶ್ಚಿಯನ್ ಸಮುದಾಯ ಇವರೊಡನಿದೆ. ಅವರೂ ಕೂಡ ಇಸ್ರೇಲಿನ ಈ ದಿಗ್ಬಂಧನದ ಯಾತನೆಗಳನ್ನು ಸಮಾನವಾಗಿ ಅನುಭವಿಸುತ್ತಿದ್ದಾರೆ. ಯು.ಎನ್. 'ಈ ಗೋಡೆ ಪ್ಯಾಲೆಸ್ಟೈನ್ ಜನರ ಮೂಲಭೂತ ಹಕ್ಕುಗಳನ್ನು ಕಿತ್ತುಕೊಂಡಿದೆ, ಅಮಾನವೀಯವಾಗಿದೆ' ಎಂದು ಸಾರಿದೆ. ಆದರೆ ಇದರಿಂದೇನೂ ಇಸ್ರೇಲಿನ ಧೋರಣೆ ಬದಲಾಗಲಿಲ್ಲ.

ಇಂತಹ ಗೋಡೆ ಹೊಸ ವಿಚಾರವೇನೂ ಅಲ್ಲ. ಅತ್ತ ಗಾಜಾ ಗಡಿಗಳಿಂದಲೂ ಸುತ್ತು ಗೋಡೆಯ ನಡುವೆ ಸಿಕ್ಕಿಬಿದ್ದಿದೆ. ಇಡೀ ಪ್ರಪಂಚದಿಂದ ಹೊರಗುಳಿದಿದೆ. ನಾವು ಈಜಿಪ್ಟ್‌ನ 'ಸಿನಾಯ್ ಪರ್ಯಾಯ ದ್ವೀಪ'ದ ಮೂಲಕವೇ ಹಾದು ಇಸ್ರೇಲ್ ಪ್ರವೇಶಿಸಿದ್ದೆವು. ನಾವು ಹೊರಟ ಹಿಂದಿನ ವಾರವೇ, ಗಾಜಾ ಗೋಡೆಯನ್ನು ಒಡೆದು ಈಜಿಪ್ಟ್‌ಗೆ ನುಗ್ಗಿ ಹೆಂಗಸರು, ಮಕ್ಕಳು ಸೇರಿದಂತೆ, ಜನರ ಪ್ರವಾಹವೇ ಹರಿದುಬಂದಿತ್ತು. ಅವರು ನುಗ್ಗಿ ಬಂದದ್ದು ಬ್ರೆಡ್ಡು, ಬೆಣ್ಣೆ, ದಿನಸಿ ಇಂತಹ ದಿನನಿತ್ಯದ ಸಾಮಾನು ಕೊಳ್ಳಲು. ಇಡೀ ಪ್ಯಾಲೆಸ್ಟೈನ್ ಜನತೆಯನ್ನು ಗೋಡೆಯ ಹಿಂದೆ ಕೂಡಿ ಹಾಕಿ, ಅನ್ನ ನೀರು ಇಲ್ಲದೆ ಅವರು ಸದ್ದಿಲ್ಲದೆ ಇಲ್ಲವಾಗಲಿ ಎಂದು ಇಸ್ರೇಲ್ ಬಯಸುತ್ತಿದ್ದರೂ, ಈ ಜನರು ಹೋರಾಡಿ ಬದುಕುತ್ತಿದ್ದಾರೆ.

ಕೊನೆಯ ದಿನ, ಗೋಡೆಯ ಒಳಗಿಂದ ಹೊರಬಂದಂತೆ ನನಗೆ ನಾನೇ ಹೇಳಿಕೊಂಡೆ 'ವಾಲ್ ಶಲ್ ಫಾಲ್'.

ನಮ್ಮ ಮನೆಯ ಶೋ ಕೇಸಿನಲ್ಲಿ ದೇಶ ವಿದೇಶಗಳಿಂದ ನಾನು ಹೊತ್ತು ತಂದ ಸೊವನಿಯರಗಳು ಕುಳಿತಿವೆ. ಅವುಗಳ ನಡುವೆ ಈಗ ಕುಳಿತಿದೆ, ಪ್ಯಾಲೆಸ್ಟೈನ್ ಜನರ ಪ್ರೀತಿ ಸ್ನೇಹದ ಕುರುಹಾಗಿ ಒಂದು ಸೀದಾ ಸಾದಾ ಪಿಂಗಾಣಿ ತಟ್ಟೆ!


ನೇಮಿಚಂದ್ರ

ಸಂ. ೪೦೧, ವಿಜಯ ಟವರ್ಸ್, ೨ನೇ ಮೇನ್, ಆರ್.ಪಿ.ಸಿ. ಲೇಔಟ್

ವಿಜಯನಗರ ೨ನೇ ಹಂತ, ಬೆಂಗಳೂರು - ೫೬೦ ೦೪೦


## ಕಾವ್ಯಗುರುವಿಗೊಂದು ಕಾಡುಮಲ್ಲಿಗೆ ದಂಡೆ

### (ರಾಜು ಮಾಸ್ತರಿಗೊಂದು ವಿದಾಯ ಗೀತೆ)



ಸಾಲು ದೀಪಗಳ ಹಚ್ಚಿ
ಕತ್ತಲಲಿ ನಿಂತ ಸಂತ।

ಸಾಲು ಗಿಡಗಳ ನೆಟ್ಟು
ಫಲಪುಷ್ಪಗಳ ಬೆಳೆದ ವನಮಾಲಿ।

ಕಾಡು ಹಕ್ಕಿಗಳಲ್ಲಿ
ಮಿಡುಕುವ ಹಾಡುಗಳಿಗೆ
ನಾದಗಳ ನಾದಿ ರಾಗಗಳ ಹಾಲೂಡಿಸಿದ
ನಾದಲೋಲ।

ಜೀತಗಾರನ ಮಗನ
ಜಾತಕವ ತಿದ್ದಿ
ಜಾತಿಹೀನನ ಮನೆಯ ಕತ್ತಲನು
ತೊಳೆದ ಜ್ಯೋತಿ।

ಅಕ್ವೇರಿಯಮ್ಮಿನ ಪರಿಧಿಯೊಳಗೇ
ಈಜುವ ಚಿನ್ನದ ಮೀನುಗಳ
ಸಾಗರದ ನೆಲೆವಿಗೆಸೆದು
ಈಜು ಕಲಿಸಿದ ಜಾದುಗಾರ।

ಶಬ್ದ ಸೂತಕವೆಂದು
ನಿಶ್ಶಬ್ದದ ಸಹಸ್ರಾರದಲಿ
ಸಾಹಿತ್ಯದ ತಪಗೈದ ಸಾಧು।

ತಮಟೆ ನಗಾರಿಗಳ ಅಬ್ಬರದಲಿ
ಮೆಲು ಮೆಲ್ಲನುಲಿದ ಕೊಳಲ ವಾದಕ
ಪರಾಕು ಜಯಭೇರಿಗಳ ದಿಬ್ಬಣದಲಿ
ಅಕ್ಷರದ ಅಕ್ಷತೆಯನೆಸೆದ
ಅವಧೂತ ಗುರು.

ಶಬ್ದದೊಳಗಣ
ನಿಶ್ಶಬ್ದದಲೆ ಮಿಂದು
ಮಾತಿನೊಳಗಣ
ಮೌನದಲೆ ಕರಗಿ
ಅಕ್ಷರದೊಳಗಣ
ಬೆಳಕನೆ ಹೊದ್ದ
ಶಬ್ದಾತೀತ ಜೀವಜಂಗಮರು ನೀವು।

ಸಾವಿಗೂ ಸುಳಿವು ಕೊಡದೆ
ಹೊರಟುಹೋದ ನಿಮ್ಮ ತಾವಲ್ಲಿ ನಿಂತು
ದಿಕ್ಕುಗಾಣದೆ ಬಿಕ್ಕುವೆವು ನಾವು
"ನಮ್ಮ ಮನದೊಳಗನುದಿನವಿದ್ದೂ...
ನಮ್ಮ ಮನಕೊಂದು ಮಾತ ಹೇಳದೆ
ಹೋದೆ ಹಂಸೇ..."


**ಪ್ರೊ॥ ಟಿ. ಯಲ್ಲಪ್ಪ**

ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಯಡಿಯೂರು

ಜಯನಗರ, ...ನೇ ಬ್ಲಾಕ್, ಬೆಂಗಳೂರು

# “ ‘ಮನುಷ್ಯ’ರಾಗುವುದಕ್ಕೆ ಬದ್ಧರಾಗಿರಿ”

## ಪಂಪ ಪ್ರಶಸ್ತಿ ಪುರಸ್ಕೃತ ಯಶವಂತ ಚಿತ್ತಾಲ

ಅದು ಫೆಬ್ರವರಿ ೨೦೦೮, ೨೩ನೇ ತಾರೀಖು ಮುಂಬಯಿ ಕನ್ನಡಿಗರಿಗೆ ಸಂತಸದ ದಿನ. ಕನ್ನಡದ ಹಿರಿಯ ಸಾಹಿತಿ ಯಶವಂತ ಚಿತ್ತಾಲರಿಗೆ ಅಂದು ಕರ್ನಾಟಕ ಸರಕಾರದ ಸಂಸ್ಕೃತಿ ಇಲಾಖೆಯು ‘ಪಂಪ ಪ್ರಶಸ್ತಿ’ ಪ್ರದಾನಿಸುವ ದಿನ. ಮೊತ್ತಮೊದಲ ಬಾರಿಗೆ ಮುಂಬಯಿಯಲ್ಲಿ ಪಂಪ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ಸುವರ್ಣ ಕರ್ನಾಟಕ ಮುಂಬಯಿ ಉತ್ಸವದ ನಡುವೆ ಈ ಅಪರೂಪದ ಕಾರ್ಯಕ್ರಮ. ಸಂಸ್ಕೃತಿ ಇಲಾಖೆಯ ಶಂಕರಪ್ಪ ಅವರ ಜೊತೆ ಚಿತ್ತಾಲರನ್ನು ಸಭಾಂಗಣದ ವೇದಿಕೆ ತನಕ ಕರೆತರುವ ಜವಾಬ್ದಾರಿ ನನಗೆ ವಹಿಸಲಾಗಿತ್ತು. ಬಾಂದ್ರಾದ ಬ್ಯಾಂಡ್‌ಸ್ಟ್ಯಾಂಡ್‌ನಲ್ಲಿರುವ ಚಿತ್ತಾಲರ ಮನೆಗೆ ಸಂಜೆ ಕಾರು ಹಿಡಿದುಕೊಂಡು ಹೊರಟ ನಾವು ಪ್ರಶಸ್ತಿ ಪ್ರದಾನ ನಡೆಯುವ ವಡಾಲಾದಲ್ಲಿರುವ ಎಸ್. ಕೆ. ಇ. ಎಸ್. ಶಾಲೆಯ ಸಭಾಂಗಣಕ್ಕೆ ಚಿತ್ತಾಲರನ್ನು ಕರೆತಂದಾಗ ಒಂದಿಷ್ಟು ನೆಮ್ಮದಿ, ಸಮಾಧಾನ, ಸಂಭ್ರಮ. ಚಿತ್ತಾಲರ ಜೊತೆ ಪ್ರಯಾಣಿಸುವುದು ಎಂದರೆ ಅದೊಂದು ಅವಿಸ್ಮರಣೀಯವಾದ ಅನುಭವ.

“ನನ್ನ ಸೃಷ್ಟಿಕಾರ್ಯಕ್ಕೆ ಸ್ಫೂರ್ತಿ ಒದಗಿಸಿದ ಇನ್ನೊಂದು ಶಕ್ತಿಯೆಂದರೆ ನನ್ನ ಕರ್ಮಭೂಮಿಯಾದ ಮುಂಬಯಿ! ಮುಂಬಯಿ ಕನ್ನಡಿಗರಿಗೆ ನನ್ನ ಸಾವಿರ ಪ್ರಣಾಮಗಳು.” ಬಲ್ಲಾಳರಂತೆ ಚಿತ್ತಾಲರಿಗೂ ಮುಂಬಯಿ ಮೇಲೆ ಬಹಳಷ್ಟು ಪ್ರೀತಿ.

ಉತ್ತರ ಕನ್ನಡ ಜಿಲ್ಲೆಯ ಹನೇಹಳ್ಳಿಯಲ್ಲಿ ಹುಟ್ಟಿದ ತನ್ನ ಸಂವೇದನೆಗಳು ರೂಪ ಪಡೆಯುವ ಅತ್ಯಂತ ಕ್ರಿಯಾಶೀಲವಾದ ಅವಧಿಯಲ್ಲಿ ಧಾರವಾಡದಲ್ಲಿ ನೆಲೆಸಿದ ಚಿತ್ತಾಲರು ಸಹಜವಾಗಿಯೇ ಸಾಹಿತ್ಯ ಕ್ಷೇತ್ರದತ್ತ ಆಸಕ್ತರಾದರು. ಕವಿ ಗಂಗಾಧರ ಚಿತ್ತಾಲರ ಕಿರಿಯ ಸೋದರ ಎಂದ ಮೇಲೆ ಸಾಹಿತ್ಯದತ್ತ ಆಸಕ್ತಿ ಇರದಿರುವುದಾದರೂ ಹೇಗೆ !

“ಬೇರೆ ಇನ್ಯಾವ ಮಾಧ್ಯಮಕ್ಕೂ ದಕ್ಕದ ಸತ್ಯದ ಮಗ್ಗಲುಗಳನ್ನು ಗ್ರಹಿಸುವ ಮಾಧ್ಯಮ ಸಾಹಿತ್ಯ ಮಾತ್ರ” ಎಂದು ನಂಬಿಕೊಂಡು ಬಂದಿರುವ ಸಾಹಿತಿ ಯಶವಂತ ಚಿತ್ತಾಲರಿಗೆ ಈ ಬಾರಿಯ ಕರ್ನಾಟಕ ರಾಜ್ಯದ ಪ್ರತಿಷ್ಠಿತ ‘ಪಂಪ ಪ್ರಶಸ್ತಿ’ ದೊರೆತಾಗ ಮತ್ತೊಮ್ಮೆ ಸಂದರ್ಶನದ ಆಸೆ ಹುಟ್ಟಿಕೊಂಡಿತು. ಎಂಭತ್ತರ ದಶಕದ ಆರಂಭದಿಂದಲೇ ನನಗೆ ಚಿತ್ತಾಲರ ಪರಿಚಯ. ಮೂರು ದಶಕಗಳ ಹಿಂದೆ ಮುಂಬಯಿಗೆ ಬಂದಿದ್ದಾಗ ಬಾಂದ್ರಾದ ಬ್ಯಾಂಡ್‌ಸ್ಟ್ಯಾಂಡ್‌ನ ಅವರ ಮನೆಯ ವಿಳಾಸ ಹುಡುಕಿ ಬಾಗಿಲು ಬಡಿದದ್ದು ಈಗಲೂ ನೆನಪಿದೆ. ಅಂದಿನಿಂದ ಚಿತ್ತಾಲರ ಜೊತೆ ನಿರಂತರ ಸಂಪರ್ಕ. ಅದರಲ್ಲೂ ಅವರ ಮಹತ್ವಾಕಾಂಕ್ಷೆಯ ‘ಪುರುಷೋತ್ತಮ’ ಕಾದಂಬರಿ ಬರೆಯುತ್ತಿದ್ದ ದಿನಗಳಲ್ಲಿ ವಾರವಾರವೂ ಎಂಬಂತೆ ಅವರ ಮನೆಗೆ ಹೋಗಿ ಬರುತ್ತಿದ್ದ, ಕಾದಂಬರಿಯ ಕುರಿತು ಚರ್ಚಿಸುತ್ತಿದ್ದ, ಆ ದಿನಗಳನ್ನು ನಾನು ಮರೆಯುವುದಾದರೂ ಹೇಗೆ? ಈ ಎರಡೂವರೆ-ಮೂರು ದಶಕಗಳಲ್ಲಿ ಚಿತ್ತಾಲರ

■

**ಸಂದರ್ಶಕ : ಶ್ರೀನಿವಾಸ ಜೋಕಟ್ಟೆ**

### ಯಶವಂತ ಚಿತ್ತಾಲ

* ಹುಟ್ಟಿದ್ದು ಹನೇಹಳ್ಳಿಯಲ್ಲಿ (೧೯೨೮)
* ಐದು ಕಾದಂಬರಿ, ಒಂಭತ್ತು ಕಥಾ ಸಂಕಲನ, ಎರಡು (ವಿಮರ್ಶಾ)ಪ್ರಬಂಧಗಳು ಮತ್ತು ಒಂದು ಕಾವ್ಯ ಸಂಕಲನ (‘ಲಬಸಾ’– ಲಯ ಬದ್ಧ ಸಾಲುಗಳು)
* ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಮೂರು ಬಾರಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಭಾರತೀಯ ಭಾಷಾ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ಮಹಾರಾಷ್ಟ್ರ ರಾಜ್ಯ ಗೌರವ ಪುರಸ್ಕಾರ, ಮಾಸ್ತಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಡಾ|| ಶಿವರಾಮ ಕಾರಂತ ಪ್ರಶಸ್ತಿ, ಕರ್ನಾಟಕ ಸಂಘ, ಮುಂಬಯಿಯ ‘ಸಾಧನಾ ಶಿಖರ’ ಪುರಸ್ಕಾರ, ಇದೀಗ ‘ಪಂಪ ಪ್ರಶಸ್ತಿ’.
* ಕನ್ನಡದಲ್ಲಿ ಮಾಸ್ತಿಯವರ ಬಳಿಕ ಸಣ್ಣ ಕತೆಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (‘ಕತೆಯಾದಳು ಹುಡುಗಿ’) ಪಡೆದ ಹಿರಿಮೆ.
* ಕಾವ್ಯ ತನ್ನ ಅಣ್ಣನ ಕ್ಷೇತ್ರ ಎಂದ ಚಿತ್ತಾಲರು, ‘ದಣಪೆಯಾಚೆಯ ಓಣಿ’ ಎನ್ನುವ ‘ಲಬಸಾ’ ಸಂಕಲನವನ್ನು ಹೊರತಂದಿದ್ದಾರೆ.
* ಸೃಜನಶೀಲನಾಗಿರುವುದು, ಮನುಷ್ಯನಾಗುವುದು, ಪ್ರೀತಿಸುವ ಸಾಮರ್ಥ್ಯವುಳ್ಳವನಾಗುವುದು – ಇವು ಸಮಾನಾರ್ಥವುಳ್ಳ ಪ್ರಕ್ರಿಯೆಗಳೆಂಬ ತಿಳಿವಳಿಕೆ ಇರಿಸಿಕೊಂಡು ಬರಹಗಳ ರಚನೆ ಮಾಡುತ್ತಾರೆ ಚಿತ್ತಾಲರು.
* “ಉತ್ತರ ಕನ್ನಡದ ಹನೇಹಳ್ಳಿಯಲ್ಲಿ ತನ್ನ ವ್ಯಕ್ತಿತ್ವದ ಬೇರುಗಳು ಇವೆ. ಇಂದಿಗೂ ನೆನೆದರೆ ಗುಮ್ಮೆಂದು ವಾಸನೆ ಹೊಡೆಯುತ್ತದೋ ಎಂದೆನಿಸುವ ಹನೇಹಳ್ಳಿ ನೆಲದಲ್ಲಿ ” ಎನ್ನುವ ಮಾತನ್ನು ಚಿತ್ತಾಲರು ಮತ್ತೆ ಮತ್ತೆ ನೆನಪಿಸುತ್ತಿರುತ್ತಾರೆ.
* ಸಾಹಿತ್ಯಕ್ಕೆ ಸದಾಕಾಲದ ವಿಷಯ ಮನುಷ್ಯ. ಮನುಷ್ಯನನ್ನು, ಅವನ ಮೂಲಕ ಬದುಕನ್ನು ಅರಿಯುವುದರಲ್ಲಿದ್ದ ಆಸ್ಥೆ ಸಾಹಿತ್ಯ ಸೃಷ್ಟಿಗೆ ಮೂಲವಾಗಿದೆ ಎನ್ನುವ ನಂಬಿಕೆಯನ್ನು ಚಿತ್ತಾಲರು ವ್ಯಕ್ತಪಡಿಸುತ್ತಾರೆ.





'ಪಂಪ ಪ್ರಶಸ್ತಿ' ಸ್ವೀಕರಿಸಿದ ಚಿತ್ತಾಲರಿಂದ ಭಾಷಣ

ಮನೆಗೆ ನೂರಾರು ಸಲ ಹೋಗಿರಬಹುದು. ಪ್ರತೀ ಸಲವೂ ಹೊಸ ಹೊಸ ವಿಚಾರಗಳನ್ನು ಹೊತ್ತು ಅಲ್ಲಿಂದ ಹೊರಬರುತ್ತೇನೆ.

ಆರಂಭದ ದಿನಗಳಲ್ಲಿ ಅನೇಕ ಪ್ರಮುಖ ಪತ್ರಿಕೆಗಳಿಗೆ ನಾನು ಬರಹ ಕಳುಹಿಸುವಾಗ ಅದರಲ್ಲಿ ಚಿತ್ತಾಲರ ಪತ್ರದ ಶಿಫಾರಸ್ಸು ಇರಿಸುತ್ತಿದ್ದ ಆ ದಿನಗಳನ್ನು ನೆನಪು ಮಾಡುವಾಗಲೆಲ್ಲ ಪುಳಕಗೊಳ್ಳುತ್ತೇನೆ. ಸಂಜೆಗೆ ಚಿತ್ತಾಲರ ಜೊತೆ ಅದೆಷ್ಟೋ ಸಲ ಬಾಂದ್ರಾ ಬ್ಯಾಂಡ್‌ಸ್ಟ್ಯಾಂಡ್‌ನ ಬೀಚ್ ಸುತ್ತಾಡಿದ್ದೂ, ಅವರ ಜೊತೆ ಸಾಹಿತ್ಯಕ ಚರ್ಚೆಯನ್ನು ನಡೆಸಿದ್ದೂ, ರಾತ್ರಿ ಮನೆಗೆ ಹೋಗಿ ಅವುಗಳನ್ನು ಬರೆಯುತ್ತಿದ್ದದ್ದೂ ಈಗಲೂ ಅವುಗಳನ್ನೆಲ್ಲ ಜೋಪಾನ ಇರಿಸಿದ್ದೇನೆ.

ಚಿತ್ತಾಲರ ಬಗ್ಗೆ ಅನೇಕ ಬಾರಿ ನಾನು ಸಂದರ್ಶನ ಲೇಖನಗಳನ್ನು ಪ್ರಕಟಿಸಿದ್ದೇನೆ. ಕೆಲವು ಬಾರಿ ಅವರು ಮುನಿಸಿಕೊಂಡದ್ದೂ ಇದೆ. ಆದರೆ ಎಂದೂ ನಮ್ಮ ಸ್ನೇಹಕ್ಕೆ ಧಕ್ಕೆ ಬಂದಿಲ್ಲ. ಕ್ರಿಕೆಟ್ ಆಟದ ಸಮಯ, ಬಜೆಟ್ ಮಂಡನೆಯ ದಿನ ಚಿತ್ತಾಲರ ಮನೆಗೆ ಹೋದರೆ ಅವರು ಟಿ. ವಿ. ಮುಂದೆಯೇ ಇರುತ್ತಾರೆ. ಸಚಿನ್ ಅವರ ಪ್ರೀತಿಯ ಆಟಗಾರ. ಸಚಿನ್‌ನ ಬಗ್ಗೆ ಪತ್ರಿಕಾ ಕಟಿಂಗ್ಸ್‌ಗಳನ್ನೂ ತೆಗೆದಿರಿಸುತ್ತಾರೆ.

ಚಿತ್ತಾಲರನ್ನು ಸಂದರ್ಶನ ಮಾಡುವುದೆಂದರೆ ಅದಕ್ಕೆ ಒಪ್ಪಿಗೆ ನೀಡುವುದೇ ಬಹಳ ಕಷ್ಟದ ಸಂಗತಿ. ಹೀಗೆ ಫಕ್ಕನೆ ಅವರು ಒಪ್ಪಿಕೊಳ್ಳಲಾರರು. ''ಸಂದರ್ಶನ ನನಗೆ ಪ್ರಿಯವಾದ ಮಾಧ್ಯಮ ಅಲ್ಲ'' ಎಂದು ಚಿತ್ತಾಲರು ಸದಾ ಹೇಳುವ ಮಾತು.

ಚಿತ್ತಾಲರು ಸುದ್ದಿ ಪತ್ರಿಕೆಗಳಿಂದ ಬಹಳ ದೂರ ಇರುತ್ತಾರೆ. ''ಪತ್ರಿಕೆಗಳು ನಮಗೆ ಕೇವಲ ಮಾಹಿತಿ ಕೊಡುತ್ತವೆ, ಅಭಿಪ್ರಾಯ ಕೊಡುತ್ತವೆ ಅಷ್ಟೇ. ಈ ಎರಡೂ ನಮ್ಮ ಸ್ವತಂತ್ರವಾಗಿ ವಿಚಾರ ಮಾಡುವ, ಸ್ವತಂತ್ರವಾಗಿ ಭಾವಿಸುವ ಶಕ್ತಿಗಳ ಮೇಲೆ ದುಷ್ಪರಿಣಾಮ ಬೀರಬಲ್ಲವು'' ಎನ್ನುತ್ತಾರೆ. ಚಿತ್ತಾಲರು ನಾನು ಸುದ್ದಿ ಪತ್ರಿಕೆಯಲ್ಲಿ ಕೆಲಸ



ಯಶವಂತ ಚಿತ್ತಾಲರ ಮನೆಯಲ್ಲಿ ಶ್ರೀನಿವಾಸ ಜೋಕಟ್ಟೆ, ವಸಂತಕುಮಾರ ಪೆರ್ಲ ಮತ್ತು ಜ್ಯೋತಿ ಗುರುಪ್ರಸಾದ್



ಮುಂಬಯಿಯ ಕಾರ್ಯಕ್ರಮದಲ್ಲಿ 'ಪಂಪ ಪ್ರಶಸ್ತಿ' ಸ್ವೀಕರಿಸುತ್ತಿರುವ ಶ್ರೀ ಯಶವಂತ ಚಿತ್ತಾಲರು. ಚಿತ್ರದಲ್ಲಿ ಶಂಕರಪ್ಪ, ಮನು ಬಳಿಗಾರ, ದೇ. ಜವರೇಗೌಡ, ಐ. ಎಂ. ವಿಠಲಮೂರ್ತಿ, ಮಾಲತಿ ಚಿತ್ತಾಲ ಅವರಿದ್ದಾರೆ.

ಮಾಡುತ್ತಿರುವ ಕಾರಣ ಅವರು ಅಂದು ಹೇಳುತ್ತಿದ್ದ ಆ ಮಾತುಗಳು ಇಂದು ನಿಜವಾಗಿದೆ!

ಚಿತ್ತಾಲರನ್ನು ಈ ಸಂದರ್ಭದಲ್ಲಿ ಅಭಿನಂದಿಸುತ್ತಾ, ಒಂದಷ್ಟು ಸಂವಾದಗಳನ್ನು ನಡೆಸಿದಾಗ –

**ಪ್ರಶ್ನೆ** : ಪ್ರತಿಷ್ಠಿತ 'ಪಂಪ ಪ್ರಶಸ್ತಿ' ಲಭಿಸಿದ್ದಕ್ಕೆ ಅಭಿನಂದನೆಗಳು. ಈ ಸಮಯದ ಸಂತೋಷವನ್ನು 'ಹೊಸತು' ಜೊತೆ ಹೇಗೆ ಹಂಚಿಕೊಳ್ಳುವಿರಿ ?

**ಚಿತ್ತಾಲ** : ಉತ್ತರ ಕನ್ನಡದ ಬನವಾಸಿಯಲ್ಲಿ ಹುಟ್ಟಿದ ಪಂಪನ ಹೆಸರಿನ ಪ್ರತಿಷ್ಠಿತ ಪ್ರಶಸ್ತಿ ಅದೇ ಜಿಲ್ಲೆಯ ಹನೇಹಳ್ಳಿಯಲ್ಲಿ ಹುಟ್ಟಿದ ನನಗೆ ದೊರಕಿದ ಈ ಶುಭ ಸಂದರ್ಭ ನನ್ನ ಸಾಹಿತ್ಯದ ಜೀವನದ ಅತ್ಯಂತ ಖುಷಿಯ ಹಾಗೂ ಸಂಭ್ರಮದ ದಿನವಾಗಿದೆ. ೧೯೪೯ರಲ್ಲಿ ಒಂದು ದಿವ್ಯ ಆಕಸ್ಮಿಕವೆಂಬಂತೆ ಹುಟ್ಟಿಕೊಂಡ ನನ್ನ ಮೊಟ್ಟಮೊದಲ ಕತೆ 'ಬೊಮ್ಮಿಯ ಹುಲ್ಲು ಹೊರೆ' ಎಂಬ ಕತೆಯಿಂದ ಮೊದಲ್ಗೊಂಡ ನನ್ನ ಸಾಹಿತ್ಯ ಯಾತ್ರೆ ನನ್ನನ್ನು ಇಷ್ಟು ದೂರ ಕರೆತಂದದ್ದು ನೋಡಿ ಮನಸ್ಸು ಉಲ್ಲಾಸಗೊಂಡಿದೆ, ಎದೆಯು ಧನ್ಯತೆಯ ಭಾವನೆಯಿಂದ ತುಂಬಿ ಬಂದಿದೆ.

**ಪ್ರಶ್ನೆ** :'ಬರೆಹ' ಮತ್ತು 'ಅನುಭವ'ಗಳ ಕುರಿತು ಕೇಳಿಬರುವ ಚರ್ಚೆಗೆ... ? 'ಶಿಕಾರಿ' ಕಾದಂಬರಿ ಸಂದರ್ಭದಲ್ಲಿ ಇಂತಹ ಚರ್ಚೆ ಹುಟ್ಟಿಕೊಂಡ ಬಗ್ಗೆ...

**ಚಿತ್ತಾಲ** : ಅನುಭವದ ಮೇಲೆ ಬರೆಯುವುದು ಪ್ರಬಂಧ ಮಾತ್ರ. ಕತೆ ಕಾದಂಬರಿಗಳು ಹಾಗಲ್ಲ. ಅಲ್ಲಿ ಅನುಭವಗಳ ಮುಖಾಂತರ ನೋಡುತ್ತೇವೆ. ಪ್ರಾಣಿಗಳು ಮತ್ತು ಮನುಷ್ಯರು ಇಬ್ಬರಿಗೂ ಅನುಭವ ಇದೆ. ಆದರೆ ಮನುಷ್ಯ ಅನುಭವಿಸಿದ್ದನ್ನು ಮರು ಪರೀಕ್ಷೆಗೆ ಒಳಪಡಿಸುತ್ತಾನೆ. ಸಂಬಂಧಗಳು ಸಾಧ್ಯವೇ ಇಲ್ಲ ಅಂತ ತಿಳಿದು ಕೊಂಡಲ್ಲಿಯೂ ಸಂಬಂಧಗಳನ್ನು ಆ ಕೃತಿಯಲ್ಲಿ ಹುಟ್ಟಿಸುತ್ತಾನೆ. ತನ್ನ ಬದುಕು ಕೂಡಾ ವಿಶ್ವದ ಯಾವುದೋ ಒಂದು ಭಾಗಕ್ಕೆ ಸಂಬಂಧಪಟ್ಟದ್ದು ಎಂದು ತಿಳಿಯುತ್ತಾನೆ. ಅನುಭವ ಸಾಹಿತ್ಯದ ವಸ್ತುವಲ್ಲ, ಸಾಹಿತ್ಯದ ದರ್ಶನೇಂದ್ರಿಯ ಅನ್ನಬಹುದು. ಸಾಹಿತ್ಯದ ಮೂಲ ದ್ರವ್ಯವೇ ಅನುಭವಿಸಲ್ಪಟ್ಟ ಬದುಕು ಆಗಿದೆ.

**ಪ್ರಶ್ನೆ** : ಸಾಹಿತ್ಯ ಕೃತಿಗಳಲ್ಲಿ 'ಭಾಷೆ'ಯ ಮಹತ್ವ ಕುರಿತಂತೆ ನಿಮ್ಮ ಅಭಿಪ್ರಾಯ ?

**ಚಿತ್ತಾಲ** : ನನ್ನ ಪ್ರಕಾರ ಸಾಹಿತ್ಯದಲ್ಲಿ ಉಳಿದ ಎಲ್ಲಾ ಪರಿಕರಗಳ ಹಾಗೆ ಭಾಷೆ ಕೂಡ ಆ ಕೃತಿಯ ಚೌಕಟ್ಟಿನ ಒಳಗೇ ಸೃಷ್ಟಿಯಾದದ್ದು. ಅನುಭವ ಭಾಷೆಯಲ್ಲಿ ನಿಜವಾಗುವ ಕ್ರಮಕ್ಕೂ ಕೃತಿಯ ಗ್ರಹಿಕೆಗೆ ಒಳಪಟ್ಟ ವಾಸ್ತವ ಸತ್ಯಕ್ಕೂ ಅನ್ಯೋನ್ಯ ಸಂಬಂಧವಿದೆ ಅಂದರೆ ಒಂದು ಇನ್ನೊಂದರಿಂದಲೇ ನಿರ್ಧರಿತವಾಗಿದೆ.

**ಪ್ರಶ್ನೆ** : ಸಾಹಿತ್ಯದಲ್ಲಿ 'ಪ್ರತಿಮೆ', 'ಪರಿಕಲ್ಪನೆಗಳು' ಇತ್ಯಾದಿಗಳ ಕುರಿತು ಒಂದೆರಡು ಮಾತು ಹೇಳಿ.

**ಚಿತ್ತಾಲ** : ಪರಿಕಲ್ಪನೆಗಳು 'ಪ್ರತಿಮೆ'ಯಾಗಿ ಕಾದಂಬರಿಯಲ್ಲಿ ಬರಬಹುದು. ಪರಿಕಲ್ಪನೆಗಳೇ ಕಾದಂಬರಿಯನ್ನು ಸೃಷ್ಟಿಸುವುದಿಲ್ಲ. ಅನುಭವ, ಪಕ್ಷಿಯ ಎದುರು [illegible] ಹಾಜರಿ ಕೊಡುವುದು ಒಂದು ಜೀವಂತ ಪ್ರತಿಮೆಯ ಮೂಲಕ. ಈ ಪ್ರತಿಮೆಯೇ ವಾಸ್ತ

ಕೃತಿಯೊಂದರ ಜೀವ ಪಿಂಡ. ಪ್ರತಿಮೆ ಇಲ್ಲದಲ್ಲಿ ಅನುಭವ ಇಲ್ಲ; ಅನುಭವವಿದ್ದಲ್ಲಿ ಪ್ರತಿಮೆ ಇರಲೇ ಬೇಕು.

**ಪ್ರಶ್ನೆ** : ಈ ಹಿಂದೆ ಅನೇಕ ಬಾರಿ ''ನಾನು ಸಾಹಿತ್ಯದ ವಿದ್ಯಾರ್ಥಿಯೂ ಅಲ್ಲ, ಶಿಕ್ಷಕನೂ ಅಲ್ಲ, ವಿಜ್ಞಾನ ಕ್ಷೇತ್ರದಲ್ಲಿ ಓದಿದ್ದು'' ಎಂಬ ಮಾತು ಹೇಳಿದ್ದೀರಿ. ಅಂದರೆ ಸಾಹಿತ್ಯ ಕ್ಷೇತ್ರದಲ್ಲಿ ಇನ್ನೂ ಸಂಶಯವಿರುವ ಅಥವಾ ಆತ್ಮವಿಶ್ವಾಸದ ಕೊರತೆಯೇ ಅದು ?

**ಚಿತ್ತಾಲ** : ಆತ್ಮವಿಶ್ವಾಸದ ಕೊರತೆ ಇದ್ದರೆ ಅದು ಇಂದಿನ ಸಾಹಿತ್ಯದ ಬಗ್ಗೆ, ಸಾಹಿತ್ಯ ಕ್ಷೇತ್ರದ ಬಗ್ಗೆ 'ಮಾತನಾಡುವುದಕ್ಕೆ' ಹೊರತು ಸಾಹಿತ್ಯ ಬರೆಯುವುದಕ್ಕಲ್ಲ... (ನಗು)

**ಪ್ರಶ್ನೆ** : ತಾವು 'ನವ್ಯ'ರೆಂದು ಗುರುತಿಸಿಕೊಂಡವರು. ಆದರೆ ಬಂಡಾಯ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲೂ ತಮ್ಮ ಕೃತಿಗಳ ಉಲ್ಲೇಖಗಳು ಬರುತ್ತಿವೆಯಲ್ಲ...

**ಚಿತ್ತಾಲ** : ನವ್ಯದ ಸಂದರ್ಭದಲ್ಲಿ ನನ್ನನ್ನು 'ನವ್ಯ' ಎಂದು ಕರೆಯುತ್ತಿರಲಿಲ್ಲ. ಯಾಕೆಂದರೆ, ಬಹುಶಃ 'ಕಾಮ'ವೇ ಆಗ ಪ್ರಧಾನವಾಗಿದ್ದಾಗ ನಾನು 'ಸಾವು' ಕುರಿತಂತೆ ಬರೆಯುತ್ತಿದ್ದೆನಲ್ಲ! ಬಂಡಾಯದವರೂ ನನ್ನ ಕತೆಗಳನ್ನು ಗಮನಿಸಿದ್ದಾರೆ. ಆದರೆ 'ಇಂತಹದ್ದರ ಮೇಲೆ ಬರೆಯಿರಿ' ಎಂದು ಸೂಚನೆ ಕೊಡುವುದನ್ನು ನಾನು ಒಪ್ಪಲಾರೆ. ಯಾಕೆಂದರೆ 'ವಸ್ತು'ವಿನ ಮೇಲೆ ಬರೆಯಬಹುದಾದುದು ಪ್ರಬಂಧ ಮಾತ್ರ. ಕತೆ, ಕಾವ್ಯ, ಕಾದಂಬರಿ... ಇವೆಲ್ಲ ಒಂದು ಸೃಜನಶೀಲವೂ ಸಂವೇದನಾಶೀಲವೂ ಆದ ಮನಸ್ಸಿನಲ್ಲಿ ಹುಟ್ಟುತ್ತವೆ. ಸಾಹಿತ್ಯ ಎನ್ನುವುದು ಮನುಷ್ಯನಿಗಿದೆಯೇ ಹೊರತು ವ್ಯವಸ್ಥೆಗೆ ಅಲ್ಲವಲ್ಲ. ಇಂಥದ್ದರ ಮೇಲೆ ಬರೆಯಿರಿ ಅಂದರೆ ನಮ್ಮ ಸೃಜನಶೀಲತೆಗೆ ನೀವು ಬಂಧನ ನಿರ್ಮಿಸಿದಂತಾಗುವುದಿಲ್ಲವೇ ?

**ಪ್ರಶ್ನೆ**: 'ಬದ್ಧತೆ' ಮತ್ತು 'ಬಂಡಾಯ ಸಾಹಿತ್ಯ'ವನ್ನು ಹೇಗೆ ಅರ್ಥೈಸಿದ್ದೀರಿ ?

**ಚಿತ್ತಾಲ** : ಈ ಕತೆ ಯಾಕೆ ಬರೆದೆ ? ಈ ಕವನ ಯಾಕೆ ಬರೆದೆ ? ಬರೆಯಲು ಏನು ಕಾರಣ ? ವಿಚಾರಿಸಿ. ಕವಿತೆ, ಕತೆ ಎಲ್ಲಾ ಕ್ರಾಂತಿಗಾಗಿ ಬರೆದೆ ಎನ್ನುವುದು ಹಾಸ್ಯಾಸ್ಪದವಾಗಲಾರದೇ ? ಬದ್ಧತೆ ಎನ್ನುವುದು ನಮ್ಮ ಆಚರಣೆಗೆ, ಬದುಕಲ್ಪಡುವ ಬದುಕಿಗೆ, ಸಂಬಂಧಪಟ್ಟದ್ದೇ ಹೊರತು ಬರೇ 'ಸಂಕಲ್ಪ'ಕ್ಕೆ ಸಂಬಂಧಪಟ್ಟದ್ದಲ್ಲ. ಬಂಡಾಯವೇ ಆಗಲಿ, ಬೇರೆ ಯಾವ ಸಾಹಿತ್ಯ ಮಾರ್ಗವೇ ಆಗಲಿ, ಅದಕ್ಕೆ ಸ್ಫೂರ್ತಿಯಾಗುವುದು ಮನುಷ್ಯನ ಬಗೆಗಿನ ಅನನ್ಯ ಕಾಳಜಿ. ನಾವು ಮನುಷ್ಯರಾಗಿ ಹುಟ್ಟಿದವರಲ್ಲ, ಮನುಷ್ಯರಾಗಲು ಹುಟ್ಟಿದವರು. ನಾವು ಬದ್ಧರಾಗಿರಬೇಕಾದುದು 'ಮನುಷ್ಯ'ರಾಗುವುದಕ್ಕೆ.

**ಪ್ರಶ್ನೆ** : ಸಾವನ್ನು ಕುರಿತ ಕೃತಿಗಳನ್ನೂ ತಾವು ಓದುತ್ತೀರಿ. ಪುನರ್ಜನ್ಮದ ನಂಬಿಕೆಗಳ ಬಗ್ಗೆ...

**ಚಿತ್ತಾಲ** : ಸಾವನ್ನು ಕುರಿತು, ಆದ್ದರಿಂದಲೇ ಬದುಕನ್ನೂ ಕುರಿತು ಹೊಚ್ಚ ಹೊಸ ತಿಳಿವನ್ನು ಕೊಡಬಲ್ಲ ಪುಸ್ತಕಗಳನ್ನು ನಾನು ಓದುತ್ತೇನೆ. ಪುನರ್ಜನ್ಮದಲ್ಲಿ, ಮರಣೋತ್ತರ ಅಸ್ತಿತ್ವದಲ್ಲಿ ನಂಬಿಕೆ ಪ್ರಕಟಿಸುವಂತಹ ಕೃತಿಗಳನ್ನೂ ಓದಿದ್ದೇನೆ. ನನಗೆ ಇಂಥದ್ದರಲ್ಲಿ



*ಶ್ರೀ ಯಶವಂತ ಚಿತ್ತಾಲರು ಮತ್ತು ಲೇಖಕ ಶ್ರೀನಿವಾಸ ಜೋಕಟ್ಟೆ (ಎಂಭತ್ತರ ದಶಕದಲ್ಲಿ ಸಂದರ್ಶನ ಮಾಡಿದಾಗ)*



*ಸಮಾರಂಭವೊಂದರಲ್ಲಿ ಯಶವಂತ ಚಿತ್ತಾಲರಿಂದ ಶ್ರೀನಿವಾಸ ಜೋಕಟ್ಟೆಗೆ ಗೌರವಾರ್ಪಣೆ*

ನಂಬಿಕೆ ಇದೆಯೆಂದಲ್ಲ, ಆ ಕುರಿತು ತಿಳಿಯುವುದರಲ್ಲಿ ಆಸ್ಥೆ ಇದೆ. ಮನಸ್ಸು ಮಂಕು ಕವಿದ ಸ್ಥಿತಿಯಲ್ಲಿದ್ದಾಗ ಹೊಸತೇನನ್ನೂ ಸೃಷ್ಟಿಸಲಾರೆನೆನ್ನುವ ಸ್ಥಿತಿಯಲ್ಲಿದ್ದಾಗ ಎಂದೋ ಕೊಂಡ ಪುಸ್ತಕಗಳನ್ನು ಓದಲು ಹಿಡಿಯುತ್ತೇನೆ. ಆಗ ಮನಸ್ಸಿನಲ್ಲಿ ಹುಟ್ಟಿಕೊಳ್ಳುವ ಪ್ರತಿಮೆಗಳು ಸಾಹಿತ್ಯ ಸೃಷ್ಟಿಗೆ ಉತ್ಸಾಹ ತುಂಬುತ್ತವೆ. ಇದು ನನ್ನ ಬರವಣಿಗೆಯ ಆದ್ಯಂತವೂ ನನಗೆ ಮತ್ತೆ ಮತ್ತೆ ಬಂದ ಅನುಭವ. ಪ್ರತಿಮೆಗಳೇ ಕತೆಯಾಗುವ ಬಗ್ಗೆ ಹೇಳುತ್ತಿಲ್ಲ. ದಿನ ನಿತ್ಯದ ಬದುಕಿನಲ್ಲಿ ಜಡ್ಡು ಹಿಡಿಯುವ ಮನಸ್ಸಿನ ಸೃಜನಶೀಲ ಚೇತರಿಕೆಗೆ ಇಂಥ ಪ್ರತಿಮೆಗಳು ನನ್ನ ಮಟ್ಟಿಗೆ ಅತ್ಯವಶ್ಯಕ ಎಂದು ತೋರಿವೆ.

**ಪ್ರಶ್ನೆ** : ಬಂಡಾಯ ಸಾಹಿತ್ಯ ಚಳುವಳಿ ತಮ್ಮ ಮೇಲೆ ಏನಾದರೂ ಪ್ರಭಾವ ಬೀರಿದ್ದಿದೆಯೋ ?

**ಚಿತ್ತಾಲ** : ನಾನು ಬೆಳೆದ ಹಾಗೇ, ಜೀವನದ ಅನುಭವಗಳು ದಟ್ಟವಾದ ಹಾಗೇ ಗ್ರಹಿಕೆಯ ಹರವು ದೊಡ್ಡದಾಗಿರಬಹುದು. ಅಂದರೆ, ನನ್ನ ಸಾಹಿತ್ಯಕ ಬೆಳವಣಿಗೆ ನನ್ನ ವೈಯಕ್ತಿಕ ಬೆಳವಣಿಗೆಯಂತೆ, ನನ್ನ ಸಾಹಿತ್ಯದ ಅಂತಃಸತ್ವವನ್ನು ಅವಲಂಬಿಸಿದ್ದೇ ಹೊರತು ಹೊರಗಿನ ಚಳುವಳಿಗಳಿಂದಾಗಿ ಜರುಗಿದ್ದಲ್ಲ. ಇದರ ಅರ್ಥ ಸಾಹಿತ್ಯದಲ್ಲಿ ಎದ್ದ ಚಳುವಳಿಗಳು ಕೂಡಾ ಈ ಬೆಳವಣಿಗೆಯಲ್ಲಿ ಭಾಗವಹಿಸಿಲ್ಲ ಎಂದಲ್ಲ. ಆದರೆ ಬದಲಿಗೆ ಅವು ಕಾರಣವಾಗಿಲ್ಲ. ಬದಲಾವಣೆ ಕೂಡಾ ನನ್ನ ಬೆಳವಣಿಗೆಯ ಭಾಗವಾಗಿದೆ ತಾನೆ ? ಬಂಡಾಯ ಸಾಹಿತ್ಯ ಸಂಘಟನೆಯ ಒಳಗೆ ಇದ್ದವರೇ ಈಗ ತಮ್ಮ ಈವರೆಗಿನ ಅನುಭವವನ್ನು ವಿಮರ್ಶಿಸಿಕೊಳ್ಳತೊಡಗಿದ್ದು, ಮುಂದಿನ ಘಟ್ಟಕ್ಕೆ, ಆರೋಗ್ಯಪೂರ್ಣ ಬೆಳವಣಿಗೆಗೆ ನಾಂದಿ ಎಂದು ಬಹಳ ಹಿಂದೆಯೇ ನಿಮಗೆ ಹೇಳಿದ್ದಿದೆ.

**ಪ್ರಶ್ನೆ**: ಸುದ್ದಿ ಪತ್ರಿಕೆಗಳು ಭಾಷೆಯನ್ನು ಕೆಡಿಸುವವು ಎಂಬ ಮಾತಿದೆ. ಈ ಕುರಿತು...

**ಚಿತ್ತಾಲ** : ಬಹಳ ಹಿಂದೆಯೇ ಇದನ್ನು ಹೇಳಿದ್ದೆ. ಸೃಜನಶೀಲ ಸಾಹಿತ್ಯ ನನ್ನ ದೃಷ್ಟಿಯಲ್ಲಿ ಬರೇ 'ಪಾತ್ರ'ಗಳನ್ನು 'ಕಥಾ ಸಂವಿಧಾನ'ವನ್ನು 'ವಾತಾವರಣ'ವನ್ನು... ಇವುಗಳನ್ನಷ್ಟೇ ಸೃಷ್ಟಿಸುವುದಿಲ್ಲ. ಈ ಸೃಷ್ಟಿಕಾರ್ಯಕ್ಕೆ ತಕ್ಕುದಾದ 'ಭಾಷೆ'ಯನ್ನೂ ಸೃಷ್ಟಿಸುತ್ತದೆ. ನನ್ನ ದೃಷ್ಟಿಯಲ್ಲಿ ಸೃಜನಶೀಲ ಸಾಹಿತ್ಯದ ಭಾಷೆ ಕೂಡಾ ಒಂದು ನಿರ್ದಿಷ್ಟ ಕೃತಿಯಿಂದಾಗಿಯೇ ಸೃಷ್ಟಿಯಾದುದು. ಸುದ್ದಿ ಪತ್ರಿಕೆಗಳ ಭಾಷೆಯು ಇಂತಹ ಸೃಷ್ಟಿ ಕಾರ್ಯವನ್ನು ಕೆಡಿಸಬಹುದು ಎನ್ನುವುದು ನನ್ನ ಆತಂಕ.

**ಪ್ರಶ್ನೆ** : ತಮ್ಮ ಹತ್ತಿರದ ಗೆಳೆಯ, 'ಅಣ್ಣ' ಸಾಹಿತಿ ವ್ಯಾಸರಾಯ ಬಲ್ಲಾಳರು ನಿಧನಹೊಂದಿರುವರು. ಈ ಸಮಯ ಅವರನ್ನು ಯಾವ ರೀತಿ ಸ್ಮರಿಸುವಿರಿ ?

**ಚಿತ್ತಾಲ** : ವ್ಯಾಸರಾಯ ಬಲ್ಲಾಳರು ನನ್ನ ಸೃಷ್ಟಿ ಕಾರ್ಯಕ್ಕೆ ಉತ್ಸಾಹ, ಪ್ರೋತ್ಸಾಹ ಎರಡನ್ನೂ ನೀಡಿದವರು. ಪ್ರಶಸ್ತಿಯ ಸುದ್ದಿ ತಿಳಿದಾಗ ಅವರು ನೆನಪಿಗೆ ಬರುವುದು ಸಹಜವೇ ಆಗಿದೆ. ಅವರ ದಿವ್ಯ ಚೇತನಕ್ಕೆ ಕೃತಜ್ಞತೆಯಿಂದ ಆದರದಿಂದ ತಲೆಬಾಗುತ್ತೇನೆ.

**ಪ್ರಶ್ನೆ**: ಸದ್ಯದ ತಮ್ಮ ಮಹತ್ವಾಕಾಂಕ್ಷೆಯ ಕೃತಿ...

**ಚಿತ್ತಾಲ** : 'ದಿಗಂಬರ' ಕಾದಂಬರಿ. ಅದನ್ನು ಬರೆದು ಮುಗಿಸಬೇಕಾಗಿದೆ.

**ಜೋಕಟ್ಟೆ**: ಸಂದರ್ಶನಕ್ಕಾಗಿ ವಂದನೆಗಳು.

# ಒಲಿಂಪಿಕ್ ರಾಜಕೀಯ – ಟಿಬೆಟ್ ದಾಳ

ಜಗತ್ತಿನ ಅತ್ಯುತ್ತಮ ಹವ್ಯಾಸಿ ಕ್ರೀಡಾಪಟುಗಳ ನಡುವೆ ತೀವ್ರ ಸ್ಪರ್ಧೆ, ವ್ಯಕ್ತಿ ವ್ಯಕ್ತಿಗಳ ನಡುವಣ ಸೆಣಸಾಟ, ಸ್ಪರ್ಧೆ ಎಷ್ಟು ತೀವ್ರವಾಗಿದ್ದರೂ ಅದರ ಉದ್ದೇಶ ಸೌಹಾರ್ದ ಸಾಧನೆ. 'ನಾವೆಲ್ಲ ಒಂದೇ ಜಾತಿ, ಒಂದೇ ಕುಲ, ನಾವು ಮನುಜರು' ಎಂಬುದು ಒಲಿಂಪಿಕ್ ಕ್ರೀಡೆಗಳ ಸದಾಶಯ. ಪ್ರಥಮಸ್ಥಾನ ಗಳಿಸಿದ ಗೌರವ ಅಧಿಕೃತವಾಗಿ ಸಲ್ಲುವುದು ವ್ಯಕ್ತಿಗೆ, ಯಾವುದೇ ದೇಶಕ್ಕಲ್ಲ. 'ಇನ್ನಷ್ಟು ವೇಗ, ಇನ್ನಷ್ಟು ಎತ್ತರ, ಇನ್ನಷ್ಟು ಬಲ'ಗಳ ಸಾಧನೆಯಲ್ಲಿ ಸ್ಪರ್ಧೆಯೇ ಒಲಿಂಪಿಕ್ ಸೂತ್ರ. ಕೀರ್ತಿ ಇರುವುದು ಜಯಿಸುವುದರಲ್ಲಲ್ಲ, ಭಾಗವಹಿಸುವುದರಲ್ಲಿ. ಇದು ಒಲಿಂಪಿಕ್ ಧ್ಯೇಯ.

ಮೂರು ಸಾವಿರ ವರ್ಷಗಳಿಂದ ನಾಲ್ಕು ವರ್ಷಕ್ಕೊಮ್ಮೆ ಈ ಧ್ಯೇಯ ಇರಿಸಿಕೊಂಡು ಪಂದ್ಯಗಳು ನಡೆಯುತ್ತ ಬಂದಿವೆ. ಯುದ್ಧ, ವೈಮನಸ್ಯಗಳನ್ನು ಬದಿಗಿರಿಸಿ ಮೈತ್ರಿಯ ವಾತಾವರಣದಲ್ಲಿ ಬಲಿಷ್ಠರು ತಮ್ಮ ಬಲ ಪ್ರದರ್ಶಿಸಿ ಕೀರ್ತಿ ಗಳಿಸುವುದು ಗುರಿ. ಕ್ರಿ.ಪೂ. ೭೭೬ರಲ್ಲಿ ನಡೆದ ಒಲಿಂಪಿಕ್ ಕ್ರೀಡೋತ್ಸವದ ಬಗ್ಗೆ ದಾಖಲೆ ಇದೆ. ಪುರಾತನ ಗ್ರೀಸ್‌ನಲ್ಲಿ ನಡೆಯುತ್ತಿದ್ದ ಕ್ರೀಡಾಮೇಳ ಇದಾಗಿತ್ತು. ಆಧುನಿಕ ಒಲಿಂಪಿಕ್ ಪಂದ್ಯಗಳು ಪ್ರಾರಂಭವಾದ್ದು ೧೮೯೬ರಲ್ಲಿ. ಜಾಗತಿಕ ಒಲಿಂಪಿಕ್ ಸಮಿತಿ ಅಸ್ತಿತ್ವಕ್ಕೆ ಬಂದದ್ದು ಎರಡು ವರ್ಷ ಮುಂಚೆ ೧೮೯೪ರಲ್ಲಿ ಅಥೆನ್ಸ್‌ನಲ್ಲಿ. ಎರಡು ಮಹಾಯುದ್ಧಗಳ ಕಾಲವನ್ನು ಬಿಟ್ಟರೆ ಪಂದ್ಯಗಳು ನಾಲ್ಕು ವರ್ಷಕ್ಕೊಮ್ಮೆ ತಪ್ಪದೆ ನಡೆಯುತ್ತ ಬಂದಿವೆ. ಇದುವರೆಗೆ ೨೫ ಸಲ ಪಂದ್ಯಗಳು ನಡೆದಿದ್ದು, ಚೀಣಾದಲ್ಲಿ ಈಗ ನಡೆಯುವುದು ೨೬ನೆಯದು. ಪ್ರತಿಸಲವೂ ಹೊಸ ಹೊಸ ಕ್ರೀಡೆಗಳು ಸೇರ್ಪಡೆಯಾಗುತ್ತಿರುವುದರ ಜೊತೆ ಸ್ಪರ್ಧಿಗಳ, ಸ್ಪರ್ಧಿಸುವ ದೇಶಗಳ ಸಂಖ್ಯೆಯೂ ಹೆಚ್ಚಾಗುತ್ತ ಬಂದಿದೆ. ನೀಲಿ, ಹಳದಿ, ಕಪ್ಪು, ಹಸಿರು ಮತ್ತು ಕೆಂಪು ಬಣ್ಣದ ಒಂದರೊಳಗೊಂದು ಸೇರಿಕೊಂಡಿರುವ ಐದು ಬಳೆಗಳ ಬಿಳಿಯ ಹಿನ್ನೆಲೆಯಲ್ಲಿ ರಾರಾಜಿಸುತ್ತಿರುವುದೇ ಒಲಿಂಪಿಕ್ ಧ್ವಜ. ೧೯೨೦ರಲ್ಲಿ ಅಂಗೀಕೃತವಾಗಿ ಹಾರಾಡಿದ ಈ ಬಾವುಟ ಐದು ಖಂಡಗಳ ಜನತೆಯ ಸೌಹಾರ್ದತೆಯ ಸಂಕೇತ. ಅದೇ ವರ್ಷ ಅನುಮೋದಿತವಾದ ಒಲಿಂಪಿಕ್ ಪ್ರತಿಜ್ಞೆ ಇದು: ''ನಾವು ನಿಜವಾದ ಕ್ರೀಡಾ ಮನೋಭಾವದಿಂದ ಒಲಿಂಪಿಕ್‌ನ ಹಿರಿಮೆ ಮತ್ತು ನಮ್ಮ ತಂಡಗಳ ಗೌರವಕ್ಕೋಸ್ಕರ ನಿಯಮಗಳಿಗೆ ಬದ್ಧವಾಗಿ ಮತ್ತು ಮನ್ನಣೆ ಕೊಟ್ಟು ಈ ಒಲಿಂಪಿಕ್‌ನಲ್ಲಿ ಭಾಗವಹಿಸುತ್ತೇವೆ.'' ಇನ್ನು ಒಲಿಂಪಿಕ್‌ಜ್ಯೋತಿ ತರುವ ಕ್ರಮ ಪ್ರಾರಂಭವಾದ್ದು ೧೯೩೬ರಲ್ಲಿ. ಈ ಜ್ಯೋತಿ ಬೆಳಗುವುದರೊಂದಿಗೆ ಕ್ರೀಡೋತ್ಸವ ಪ್ರಾರಂಭವಾಗಿ ೧೬ ದಿನಗಳಲ್ಲಿ ಮುಗಿಯಬೇಕೆಂದು ನಿಯಮವಿದೆ. ಆಧುನಿಕ ಒಲಿಂಪಿಕ್ ಪ್ರಾರಂಭವಾದಾಗ ಭಾಗವಹಿಸಿದ್ದ ದೇಶಗಳ ಸಂಖ್ಯೆ ೧೩. ಈಗ ಸುಮಾರು ೧೫೦ ದೇಶಗಳು ಪಾಲ್ಗೊಳ್ಳುತ್ತಿವೆ.




ಇಂಥ ಉದಾತ್ತ ಧ್ಯೇಯ, ಸತ್ಸಂಪ್ರದಾಯಗಳನ್ನು ರೂಢಿಸಿಕೊಂಡಿರುವ ಒಲಿಂಪಿಕ್ ಕ್ರೀಡಾಪಂದ್ಯಗಳಿಗೆ ರಾಜಕೀಯ ಲೇಪದ ಕಳಂಕ ಹಚ್ಚಿದ್ದು ನಾಜಿ ಸರ್ವಾಧಿಕಾರಿ ಹಿಟ್ಲರ್ ೧೯೩೬ರಲ್ಲಿ ಬರ್ಲಿನ್ ಒಲಿಂಪಿಕ್ ಸಮಯದಲ್ಲಿ. ಪಂದ್ಯದಲ್ಲಿ ಗೆದ್ದ ಕರಿಯ ಜನಾಂಗದವರಿಗೆ ಸಲ್ಲಬೇಕಿದ್ದ ಗೌರವ ಸಲ್ಲಿಸಲು ಹಿಟ್ಲರ್ ನಿರಾಕರಿಸಿದ. ಹೀಗೆ ಪ್ರಾರಂಭವಾದ ರಾಜಕೀಯವು ಶೀತಯುದ್ಧದ ಕಾಲದಲ್ಲಿ ಮುಂದುವರಿಯಿತು. ೧೯೫೨ರವರೆಗೆ ಸೋವಿಯೆತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ರಾಷ್ಟ್ರ ಗಳನ್ನು ಪಂದ್ಯಗಳಿಂದ ದೂರ ಇರಿಸಲಾಗಿತ್ತು. ಈ ರಾಷ್ಟ್ರಗಳು ಪ್ರತ್ಯೇಕವಾಗಿ ಕ್ರೀಡೋ ತ್ಸವ ನೆರವೇರಿಸುತ್ತಿದ್ದುವು. ಮಾನವ ಹಕ್ಕುಗಳ ಗುತ್ತೇದಾರರು ಎಂದುಕೊಂಡಿರುವ ಪಶ್ಚಿಮ ರಾಷ್ಟ್ರಗಳು ಅಂದಿನ ಸಮಾಜವಾದಿ ದೇಶಗಳನ್ನು ಒಲಿಂಪಿಕ್‌ನಿಂದ ದೂರ ಇರಿಸಿದ್ದುದೂ ಕೂಡ ಮಾನವ ಹಕ್ಕುಗಳ ಉಲ್ಲಂಘನೆಯನ್ನು ಆರೋಪಿಸಿ. ಈ ದಂಡವನ್ನು ಅವು ತಮಗಾಗದ ದೇಶಗಳ ಮೇಲೆ ಪ್ರಯೋಗಿಸುತ್ತಿವೆ.



ಆಧುನಿಕ ಒಲಿಂಪಿಕ್ ಪಂದ್ಯಗಳನ್ನು ನಡೆಸುವುದು ದುಬಾರಿ ವೆಚ್ಚದ ಬಾಬ್ತು. ಕ್ರೀಡೆಗಳನ್ನು ಯಶಸ್ವಿಯಾಗಿ ನಡೆಸಲು ಅಗತ್ಯವಿರುವ ಕ್ರೀಡಾಂಗಣಗಳು, ಕ್ರೀಡಾಪಟುಗಳು, ಅಧಿಕಾರಿಗಳು, ಪ್ರೇಕ್ಷಕ ಸಮೂಹಕ್ಕೆ ವಸತಿ ಸೌಕರ್ಯ ಇವೇ ಮೊದಲಾದ ಮೂಲ ಸೌಕರ್ಯಗಳ ವ್ಯವಸ್ಥೆಯಾಗಬೇಕು. ಹಾಗಾಗಿ ಅದು ಶ್ರೀಮಂತ ರಾಷ್ಟ್ರಗಳಿಗೆ ಮಾತ್ರ ಸಾಧ್ಯ. ಈಚಿನ ದಿನಗಳಲ್ಲಿ ಈ ಕ್ರೀಡೋತ್ಸವದ ಪ್ರಾರಂಭ ಮತ್ತು ಮುಕ್ತಾಯ ಆತಿಥೇಯ ರಾಷ್ಟ್ರದ ಪ್ರತಿಷ್ಠೆಗನುಸಾರವಾಗಿ ಸಾಂಸ್ಕೃತಿಕ ಮೇಳವೂ ಆಗಿರುತ್ತದೆ. ಒಟ್ಟಿನಲ್ಲಿ ಹೇಳಬೇಕೆಂದರೆ ನಾಲ್ಕು ವರ್ಷಕ್ಕೊಮ್ಮೆ ಜರುಗುವ ಒಲಿಂಪಿಕ್ ಪಂದ್ಯಾವಳಿ ಎಲ್ಲ ರಾಷ್ಟ್ರಗಳ ಕ್ರೀಡಾಪಟುಗಳನ್ನು ಕಲೆಹಾಕಿ ನಡೆಸುವ ಉತ್ಸವ. ಇಂಥ ಪಂದ್ಯಗಳಿಗೆ ರಾಜಕೀಯ ಲೇಪ ಹಚ್ಚುತ್ತಿರುವುದೀಗ ವಿಷಾದಕರ. ಇದರಲ್ಲೂ ಪಶ್ಚಿಮದ ಶ್ರೀಮಂತ ರಾಷ್ಟ್ರಗಳ ಗುತ್ತೇದಾರಿ ಮನೋವೃತ್ತಿಯನ್ನು ಕಾಣಬಹುದು. ಇದುವರೆಗೆ ಪಂದ್ಯಗಳು ಹೆಚ್ಚಾಗಿ ನಡೆದಿರುವುದು ಯೂರೋಪಿನಲ್ಲಿ: ೧೪ ಸಲ; ಅಮೆರಿಕಾದಲ್ಲಿ ೪ ಸಲ, ಮೆಕ್ಸಿಕೋ, ಟೋಕಿಯೋ, ಸಿಯೋಲ್, ಕೆನಡಾ, ಮಾಸ್ಕೋಗಳಲ್ಲಿ ಒಂದೊಂದು ಬಾರಿ, ಆಸ್ಟ್ರೇಲಿಯದಲ್ಲಿ ಎರಡು ಬಾರಿ ಪಂದ್ಯಗಳು ನಡೆದಿವೆ. ಈ ವರ್ಷ ಚೀಣಾದಲ್ಲಿ ನಡೆಯುತ್ತಿದೆ. ೧೯೮೦ರಲ್ಲಿ ಒಲಿಂಪಿಕ್ ಪಂದ್ಯಗಳು ನಡೆದಾಗ ಅಮೆರಿಕಾದ ನೇತೃತ್ವದಲ್ಲಿ ಪಶ್ಚಿಮ ರಾಷ್ಟ್ರಗಳು ಮಾನವ ಹಕ್ಕುಗಳ ನೆಪ ಮುಂದೊಡ್ಡಿ ಪಂದ್ಯಗಳನ್ನು ಬಹಿಷ್ಕರಿಸಿದುವು. ಆದರೂ ಮಾಸ್ಕೋ ಒಲಿಂಪಿಕ್ ಪಂದ್ಯಗಳಲ್ಲಿ ೮೦ ರಾಷ್ಟ್ರಗಳು ಭಾಗವಹಿಸಿದ್ದು ಯಶಸ್ವಿಯಾಯಿತು. ಈಗ ಚೀಣಾದಲ್ಲಿ ಪಂದ್ಯಗಳು ನಡೆಯಬೇಕಾಗಿರುವ ಸಂದರ್ಭದಲ್ಲಿ ಪಾಶ್ಚಾತ್ಯ ರಾಷ್ಟ್ರಗಳು ಇನ್ನೊಮ್ಮೆ ಮಾನವ ಹಕ್ಕುಗಳ ಉಲ್ಲಂಘನೆಯ ಆರೋಪ ಮಾಡುತ್ತಿವೆ. ಟಿಬೆಟ್‌ನ ಪ್ರತ್ಯೇಕವಾದಿಗಳಿಗೆ ಬೆಂಬಲ ನೀಡಿ, ಅದರ ಸ್ವಾತಂತ್ರ್ಯದ ಪ್ರತಿಪಾದನೆ ಮಾಡಲು ಹೊರಟಿವೆ. ಇಷ್ಟು ದಿನ ಇಲ್ಲದ್ದು ಈಗೇಕೆ ಟಿಬೆಟ್‌ನ ಪ್ರಶ್ನೆ ಎತ್ತಲಾಗುತ್ತಿದೆ? ಬೀಜಿಂಗ್ ಪಂದ್ಯಗಳಿಗಾಗಿ ಬೇಕಾಗಿರುವ ವ್ಯವಸ್ಥೆಯನ್ನು ಮಾಡಿರುವ ಈ ಸಂದರ್ಭದಲ್ಲಿ ದುರುದ್ದೇಶದಿಂದಲೇ ಟಿಬೆಟಿನ ಪ್ರಶ್ನೆಯನ್ನು ದೊಡ್ಡದು ಮಾಡಲಾಗುತ್ತಿದೆ. ಚೀಣಾದಲ್ಲಿ ಒಲಿಂಪಿಕ್ ಪಂದ್ಯಗಳು ಯಶಸ್ವಿಯಾದರೆ ಪಾಶ್ಚಾತ್ಯ ಸಾಮ್ರಾಜ್ಯಶಾಹಿಗಳಿಗೆ ಮತ್ಸರ. ಅದಕ್ಕಾಗಿಯೇ ಕಳಂಕ ಹಚ್ಚಲು ನೋಡಲಾಗುತ್ತಿದೆ. ಮಾನವ ಹಕ್ಕುಗಳ ಮುಖವಾಡದ ಹಿಂದೆ ಇರುವ ದುರುದ್ದೇಶ ದಿನದಿಂದ ದಿನಕ್ಕೆ ಸ್ಪಷ್ಟವಾಗುತ್ತಿದೆ. ತಮ್ಮ ಪ್ರಭಾವವಲಯದ ಆಚೆ ಎಲ್ಲೇ ಪಂದ್ಯಗಳು ನಡೆದರೂ ಸಾಮ್ರಾಜ್ಯಶಾಹಿಗಳಿಗೆ ಅಸಹನೆ. ಮಾನವ ಹಕ್ಕುಗಳ ರಕ್ಷಣೆಯಲ್ಲಿ ಅಮೆರಿಕಾ ಮತ್ತು ಪಾಶ್ಚಾತ್ಯ ರಾಷ್ಟ್ರಗಳ ಪ್ರಾಮಾಣಿಕತೆ ಎಷ್ಟು ಎನ್ನುವ ವಿಚಾರ ಎಲ್ಲರಿಗೂ ತಿಳಿದಿದೆ. ಬಾಲಂಗೋಚಿಯಂತೆ ಅವರನ್ನು ಅನುಸರಿಸಲು ನಿರಾಕರಿಸುವ, ಸ್ವತಂತ್ರ ರಾಷ್ಟ್ರಗಳ ಮೇಲೆ ಮಾನವ ಹಕ್ಕುಗಳ ಆರೋಪ ಹೊರಿಸುವುದು ಅವರಿಗೆ ರೂಢಿಯಾಗಿಬಿಟ್ಟಿದೆ. ಟಿಬೆಟ್‌ನ ಪ್ರಶ್ನೆಯನ್ನು ಎತ್ತಿಕೊಂಡು ಮಾನವ ಹಕ್ಕುಗಳ ಉಲ್ಲಂಘನೆಯನ್ನು ಆರೋಪಿಸಿ ಒಲಿಂಪಿಕ್ ಜ್ಯೋತಿಯ ಮೆರವಣಿಗೆಗೆ ಈ ದೇಶಗಳು ಸರಿಯಾದ ವ್ಯವಸ್ಥೆ ಮಾಡದಿರುವುದು ಖಂಡನೀಯ. ಪಂದ್ಯಗಳನ್ನು ಬಹಿಷ್ಕರಿಸುವ, ದೂರ ಉಳಿಯುವ ಕೂಗೂ ಕೇಳಿಬರುತ್ತಿದೆ. ಈ ವಿಚಾರದಲ್ಲಿ ಮುಂದಳದಲ್ಲಿರುವ ಬ್ರಿಟನ್, ಫ್ರಾನ್ಸ್, ಜರ್ಮನಿ, ಅಮೆರಿಕಾಗಳ ಮಾನವ ಹಕ್ಕುಗಳ ರಕ್ಷಣೆಯ ದಾಖಲೆ ಏನು? ಇರಾಕಿನ ಮೇಲೆ ನಡೆಸಿದ ದುರಾಕ್ರಮಣ, ಅನಂತರದ ವರ್ಷಗಳಲ್ಲಿ ಅಮೆರಿಕಾ ಮತ್ತು ಮಿತ್ರರಾಷ್ಟ್ರಗಳು ನಡೆಸುತ್ತಿರುವ ದೌರ್ಜನ್ಯ, ಲಕ್ಷಾಂತರ ಮಂದಿ ಅಮಾಯಕರ ಕಗ್ಗೊಲೆ ಈ ಒಂದು



ಉದಾಹರಣೆಯೇ ಸಾಕು. ಬ್ರಿಟನ್ ಮತ್ತು ಫ್ರಾನ್ಸ್‌ಗಳು ವಸಾಹತು ಗಳಲ್ಲಿ ನಡೆಸಿದ ಹಿಂಸಾಚಾರ, ಲೂಟಿ ಈಗ ಇತಿಹಾಸ. ಚೀಣೀ ಒಲಿಂಪಿಕ್ ಪಂದ್ಯಗಳ ಉದ್ಘಾಟನೆಯಲ್ಲಿ ಪಾಲ್ಗೊಳ್ಳದಿರುವ ನಿರ್ಧಾರ ಪ್ರಕಟಿಸಿರುವ ಫ್ರಾನ್ಸ್ ಅಧ್ಯಕ್ಷರು ಆಲ್ಜೀರಿಯದಲ್ಲಿ ಫ್ರೆಂಚರು ನಡೆಸಿದ ಸರಮೇಧವನ್ನು ನೆನಪಿಗೆ ತಂದುಕೊಳ್ಳುವುದು ಉಚಿತ. ಇಪ್ಪತ್ತೊಂದನೆ ಶತಮಾನದಲ್ಲಿ ಅಮೆರಿಕಾ ಎಲ್ಲ ನಾಗರಿಕ ಮೌಲ್ಯಗಳನ್ನು ಗಾಳಿಗೆ ತೂರಿ ನಡೆದುಕೊಳ್ಳುತ್ತಿರುವ ರೀತಿಯನ್ನು ಖಂಡಿಸಲು ಶಬ್ದಗಳೇ ಸಾಲದಾಗಿವೆ. ಹಾಗಿರುವಾಗ ಟಿಬೆಟಿನ ಜನರ ಮೇಲೆ ಚೀಣಾ ದಬ್ಬಾಳಿಕೆ ನಡೆಸುತ್ತಿದೆ ಎನ್ನುವ ಆರೋಪ ಕ್ಷುಲ್ಲಕವಷ್ಟೇ ಅಲ್ಲದೆ ದುರುದ್ದೇಶದಿಂದ ಕೂಡಿದ್ದು.

ಟಿಬೆಟಿನ ಪ್ರಶ್ನೆ ಎನ್ನುವುದು ಪಾಶ್ಚಾತ್ಯ ರಾಷ್ಟ್ರಗಳಿಗೆ ಬೇಕೆನಿಸಿದಾಗ ಚೀಣಾವನ್ನು ಟೀಕಿಸಲು ಬಳಸಿಕೊಳ್ಳುವ ಅಸ್ತ್ರವಾಗಿದೆ. ಹಿಮಾಲಯದ ಅತಿ ಎತ್ತರದಲ್ಲಿ ಇರುವ (೪೫೭೫ ಮೀಟರುಗಳು) ಟಿಬೆಟ್ ಚೀಣಾಗೆ ಸೇರಿದ ಪ್ರದೇಶ. ಅನಾದಿಕಾಲದಿಂದ ಚೀಣೀ ಸಾಮ್ರಾಟರುಗಳ ಆಡಳಿತಕ್ಕೆ ಒಳಪಟ್ಟಿತ್ತು. ಬೌದ್ಧ ಸಂನ್ಯಾಸಿಗಳಾದ ಲಾಮಾಗಳದೇ ಪಾರುಪತ್ಯ ಇಲ್ಲಿ. ಅತ್ಯಂತ ಹಿಂದುಳಿದ ಈ ಪ್ರದೇಶ ಚೀಣಾದಲ್ಲಿ ಚಿಯಾಂಗ್ ಕೈ ಷೆಕ್ ಆಡಳಿತದ ಕಾಲದಲ್ಲಿ ಬ್ರಿಟಿಷರ ರಕ್ಷಣೆಗೆ ಒಳಪಟ್ಟಿತ್ತು. ಆಯಕಟ್ಟಿನ ಸ್ಥಳದಲ್ಲಿರುವ ಟಿಬೆಟ್‌ಅನ್ನು ಬ್ರಿಟಿಷರು ನಡುಕಾಪು ಪ್ರದೇಶವಾಗಿ ಉಳಿಸಿಕೊಂಡಿದ್ದರು. ಅಂದಿನ ಸೋವಿಯೆತ್ ಒಕ್ಕೂಟದ ಮೇಲೆ, ಆಫ್ಘಾನಿಸ್ತಾನದ ಮೇಲೆ ಕಣ್ಣಿರಿಸಲು ಅದು ಉಪಯುಕ್ತವಾಗಿತ್ತು. ಈಗಲೂ ಸಾಮ್ರಾಜ್ಯಶಾಹಿಗಳ ಉದ್ದೇಶ ಅದೆ. ಚೀಣೀ ಜನತಾ ಗಣರಾಜ್ಯ ಸ್ಥಾಪನೆಯಾದ ನಂತರ ಟಿಬೆಟ್ ಚೀಣಾದ ಆಡಳಿತಕ್ಕೊಳಪಟ್ಟಿತು (೧೯೫೦). ಒಂಬತ್ತು ವರ್ಷಗಳು ಏನೂ ತೊಡಕಿಲ್ಲದೆ ಇತ್ತು. ಅಮೆರಿಕಾ ಮತ್ತು ಪಾಶ್ಚಾತ್ಯ ರಾಷ್ಟ್ರಗಳು ಟಿಬೆಟಿನ ಮೇಲೆ ಚೀಣೀ ಆಡಳಿತವನ್ನು ಮಾನ್ಯ ಮಾಡಲಿಲ್ಲ. ಭಾರತ ಸರಕಾರ ಸ್ಪಷ್ಟವಾದ ನಿಲುವು ತಳೆದು ಟಿಬೆಟನ್ನು ಚೀಣೀಯರಿಗೆ ಸೇರಿದ ಭಾಗ ಎಂದು ಮಾನ್ಯಮಾಡಿತ್ತು. ಒಂದು ಕಡೆ ಚೀಣಾಗೆ ಸೇರಿದ ತೈವಾನ್ ದ್ವೀಪವನ್ನು ತನ್ನ ರಕ್ಷಣಾವ್ಯಾಪ್ತಿಯಲ್ಲಿರಿಸಿಕೊಂಡಿರುವ ಹಾಗೆ ಟಿಬೆಟನ್ನೂ ಆಕ್ರಮಿಸಿಕೊಳ್ಳಲು ಅಮೆರಿಕಾ ಹಂಚಿಕೆ ಹೂಡಿತು. ಟಿಬೆಟಿನ ಧರ್ಮ ಗುರು ದಲಾಯಿ ಲಾಮಾನನ್ನು ಚೀಣಾದ ವಿರುದ್ಧ ಎತ್ತಿಕಟ್ಟಿತು. ಟಿಬೆಟಿನ ಸ್ವಾಯತ್ತತೆಗೆ ಬದ್ಧವಾಗಿರಲು ಚೀಣಾದೊಂದಿಗೆ ಮಾಡಿಕೊಂಡಿದ್ದ ಒಪ್ಪಂದವನ್ನು ಮುರಿದು ದಲಾಯಿ ಲಾಮಾ ಮತ್ತು ಅವನ ಅನುಯಾಯಿಗಳು ಟಿಬೆಟ್‌ಅನ್ನು ಸ್ವತಂತ್ರ ರಾಷ್ಟ್ರವೆಂದು ಘೋಷಿಸಿ ಅಸ್ಥಿರ ಪರಿಸ್ಥಿತಿ ಉಂಟುಮಾಡಿದಾಗ ಚೀಣೀ ಸೇನೆ ಪ್ರವೇಶಿಸಿತು. ಪರಿಸ್ಥಿತಿ ನಿಯಂತ್ರಿಸಲು ಆಗ ದಲಾಯಿ ಲಾಮಾ ತನ್ನ ಅನುಯಾಯಿಗಳ ಜೊತೆಗೆ ಪರಾರಿಯಾಗಿ ಭಾರತ ಪ್ರವೇಶಿಸಿದ, ನಿರಾಶ್ರಿತನಾಗಿ. ೧೯೫೯ರಲ್ಲಿ ಸಂಭವಿಸಿದ ಈ ಘಟನೆಯ ಸಂದರ್ಭದಲ್ಲಿ ದಲಾಯಿ ಲಾಮಾಗೆ, ಅವನ ಅನುಯಾಯಿಗಳಿಗೆ ರಾಜಕೀಯ ವ್ಯವಹಾರಗಳಲ್ಲಿ ತೊಡಗದಂತೆ ಷರತ್ತು ವಿಧಿಸಿ ಭಾರತ ಬೇರೆ ಬೇರೆ ಭಾಗಗಳಲ್ಲಿ ಅವರನ್ನು ನೆಲೆಗೊಳಿಸಿತು. ಆಗಿನಿಂದ ಚೀಣೀ ಆಡಳಿತವನ್ನು ಒಪ್ಪದಿರುವ ಟಿಬೆಟಿನಿಂದ ಬಂದ ದಲಾಯಿ ಲಾಮಾನ ಅನುಯಾಯಿಗಳು ಪಾಶ್ಚಾತ್ಯ ದೇಶಗಳಲ್ಲೂ ನಿರಾಶ್ರಿತರಾಗಿ ನೆಲೆಸಿದ್ದಾರೆ. ಯಾವುದೇ ಸುಧಾರಣೆಗಳನ್ನು ಒಪ್ಪದಿದ್ದ ದಲಾಯಿ ಲಾಮಾನ ಅನುಯಾಯಿಗಳು ಪಾಶ್ಚಾತ್ಯರ ಪ್ರಚೋದನೆಯಿಂದ ಪ್ರತಿಭಟನೆ ನಡೆಸಿ ನಿರಾಶ್ರಿತರಾಗಿ ಬಂದರು. ಪಾಶ್ಚಾತ್ಯರ ಕಿತಾಪತಿಯಿಂದ ಬೇಕೆನಿಸಿದಾಗ ಟಿಬೆಟಿನಲ್ಲಿ ಗಲಭೆ ನಡೆಸಿ ಚೀಣಾದ ವಿರುದ್ಧ ಪ್ರಚಾರ ನಡೆಸುವುದು ಸುಮಾರು ಅರ್ಧ ಶತಮಾನದಿಂದ ನಡೆಯುತ್ತ ಬಂದಿದೆ. ಒಲಿಂಪಿಕ್ ಪಂದ್ಯಗಳು ಮುಂಬರುವ ಆಗಸ್ಟ್ ತಿಂಗಳಲ್ಲಿ ನಡೆಯಲಿರುವ ಸಂದರ್ಭದಲ್ಲಿ ಜಗತ್ತಿನ ಗಮನವನ್ನು ಸೆಳೆಯಲು ದಲಾಯಿ ಲಾಮಾ ಮತ್ತು ಅವನ ಅನುಯಾಯಿಗಳು ಸಜ್ಜಾಗಿ ಈಗ ದಾಂಧಲೆ ನಡೆಸಿದ್ದಾರೆ. ಇದು ಖಂಡನೀಯ. ಪ್ರಚಾರ ಗಿಟ್ಟಿಸುವುದೊಂದೇ ಗುರಿ. ಮಾನವ ಹಕ್ಕುಗಳ ರಕ್ಷಣೆಯ ಹೆಸರಿನಲ್ಲಿ ಕೆಲ ಪಾಶ್ಚಾತ್ಯ ದೇಶಗಳ ನಾಯಕರು ಇದಕ್ಕೆ ಬೆಂಬಲವಾಗಿ ನಿಂತಿದ್ದಾರೆ. ಚೀಣೀ ಆಡಳಿತಕ್ಕೆ ಬಂದ ಮೇಲೆ ಟಿಬೆಟ್‌ನಲ್ಲಿ ಅನೇಕ ಬದಲಾವಣೆಗಳಾಗಿವೆ, ಸುಧಾರಣೆಗಳಾಗಿವೆ. ಪ್ರವಾಸಿ ಕೇಂದ್ರವಾಗಿ ಅದು ಅಭಿವೃದ್ಧಿಗೊಂಡಿದೆ. ಈಚೆಗಷ್ಟೇ ಚೀಣಾ ಇಲ್ಲಿಗೆ ರೈಲುಮಾರ್ಗ ಹಾಕಿದೆ. ಅದೊಂದು ಇಂಜಿನಿಯರಿಂಗ್ ಕ್ಷೇತ್ರದ ಪವಾಡವೇ ಆಗಿದೆ. ಪ್ರಗತಿಪರವಾದ ಸುಧಾರಣೆಗಳನ್ನು ವಿರೋಧಿಸುವವರು ಚೀಣಾದ ವಿರುದ್ಧ ಪ್ರಚಾರದಲ್ಲಿ ತೊಡಗಿದ್ದಾರೆ. ಒಲಿಂಪಿಕ್ ಪಂದ್ಯಗಳಿಗೆ ಕಳಂಕ ತರಲು ನೋಡುತ್ತಿದ್ದಾರೆ. ಇದು ಖಂಡನಾರ್ಹ. ಪಂದ್ಯಗಳನ್ನು ನಡೆಸಲು ಚೀಣಾ ಅಭೂತಪೂರ್ವ ಸಿದ್ಧತೆ ನಡೆಸಿದೆ. ಪಂದ್ಯಗಳು ಯಶಸ್ವಿಗೊಂಡು ಒಲಿಂಪಿಕ್ ಸೌಹಾರ್ದ ಮನೋಭಾವ ಉಳಿಯಲಿ.

ಸೀಯಾರ್ಕೆ
'ಚೌಜನ್', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ರೈತರ ಸಾಲ ಮನ್ನಾದ ಸುತ್ತಮುತ್ತ

**ಇಂದಿನ ಸಾಮಾಜಿಕ, ರಾಜಕೀಯ, ಆರ್ಥಿಕ ಸನ್ನಿವೇಶದಲ್ಲಿ ಸಾಲ ಪಡೆಯುವ ಸಾಮರ್ಥ್ಯ ಎಲ್ಲಾ ರೈತರಿಗೂ ಏಕಪ್ರಕಾರವಾಗಿಲ್ಲ. ಅದರಲ್ಲೂ ವಿಶೇಷವಾಗಿ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಹಣಕಾಸು ಸಂಸ್ಥೆಗಳಿಂದ, ಬ್ಯಾಂಕುಗಳಿಂದ ಸಾಲ ಪಡೆಯುವ ಸಾಮರ್ಥ್ಯ ಅತ್ಯಂತ ಕಡಿಮೆ. ರಾಜಕೀಯ ವಶೀಲಿಬಾಜಿ, ಅಧಿಕಾರಶಾಹಿಗಳ ಭ್ರಷ್ಟಾಚಾರ ಮುಂತಾದವುಗಳು ಈ ರೈತ ಸಮೂಹವನ್ನು ಇಂದಿಗೂ ಖಾಸಗಿ ಲೇವಾದೇವಿದಾರರ ಕಪಿಮುಷ್ಟಿಗೆ ತಳ್ಳಿಬಿಟ್ಟಿವೆ. ಇವುಗಳ ದೃಷ್ಟಿಯಲ್ಲಿ ಈ ಬಡವರು ಸಾಲಾರ್ಹತೆಯನ್ನೇ ಹೊಂದಿಲ್ಲ. ಇಂದು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ರೈತರು ಇಂತಹ ದುಬಾರಿ ಸಾಲಗಳಿಂದಲೇ ಅಧಿಕವಾಗಿ ಬಾಧಿಸಲ್ಪಡುತ್ತಿದ್ದಾರೆ.**

ಬಹಳ ದಿನಗಳಿಂದ ರಾಜಕೀಯ ವಲಯಗಳಲ್ಲಿ ಬಹಳವಾಗಿ ನಿರೀಕ್ಷಿಸುತ್ತಿದ್ದ ಸಾಲ ಮನ್ನಾ ಈ ವರ್ಷದ ಕೇಂದ್ರ ಬಜೆಟ್‌ನಲ್ಲಿ ಅತ್ಯಂತ ಪ್ರಮುಖ ಕೊಡುಗೆಯಾಗಿ ನೀಡಲ್ಪಟ್ಟಿದೆ. ಈ ಹಿಂದೆ ಸಾಲ ಮನ್ನಾಗಳಾಗಿದ್ದರೂ ಇಷ್ಟೊಂದು ಬೃಹತ್ ಪ್ರಮಾಣದಲ್ಲಿ ಆಗಿರಲಿಲ್ಲ. ಈ ಬಾರಿ ಅರವತ್ತು ಸಾವಿರ ಕೋಟಿ ರೂ.ಗಳಿಗೂ ಅಧಿಕ ಪ್ರಮಾಣದ ಸಾಲ ಮನ್ನಾವನ್ನು ಘೋಷಿಸಲಾಗಿದೆ. ೩೧ನೇ ಡಿಸೆಂಬರ್ ೨೦೦೭ರವರೆಗೆ ಬಾಕಿಯಿದ್ದ ಮತ್ತು ೨೯ನೇ ಫೆಬ್ರವರಿ ೨೦೦೮ರವರೆಗೆ ತೀರುವಳಿಯಾಗದೆ ಉಳಿದಿರುವ ೩ ಕೋಟಿ ಸಣ್ಣ ಮತ್ತು ಅತಿ ಸಣ್ಣ ರೈತರ ಸಾಲವನ್ನು ಸಂಪೂರ್ಣವಾಗಿ ಮನ್ನಾ ಮಾಡಲಾಗಿದೆ. ಮುಂದುವರಿದು ಉಳಿದ ರೈತರಿಗೆ ಇದೇ ಅವಧಿಯ ಸಾಲಗಳ ಮೇಲೆ ಒಂದು ಸಮಯದ ತೀರುವಳಿಯಾಗಿ ಶೇ. ೭೫ ಸಾಲ ಮರುಪಾವತಿ ಮಾಡಿದರೆ ಅವರಿಗೆ ಶೇ. ೨೫ರ ಸಾಲ ರಿಯಾಯಿತಿಯನ್ನು ಘೋಷಿಸಿದೆ. ಸುಮಾರು ಒಂದು ಕೋಟಿ ರೈತರು ಇದರ ಲಾಭ ಪಡೆಯಲಿದ್ದಾರೆ ಎಂದು ನಿರೀಕ್ಷಿಸಲಾಗಿದೆ. ಸಾರ್ವಜನಿಕ ವಲಯದ ವಾಣಿಜ್ಯ ಬ್ಯಾಂಕುಗಳಿಂದ, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಂದ, ಸಹಕಾರಿ ಸಾಲದ ಸಂಸ್ಥೆಗಳಿಂದ ಸಾಲ ಪಡೆದಿರುವ ಒಟ್ಟು ೪ ಕೋಟಿ ಜನ ಈ ಸಾಲ ಮನ್ನಾ ಯೋಜನೆಯ ಪ್ರಯೋಜನ ಪಡೆಯಲಿದ್ದಾರೆ ಎಂದು ಆಯವ್ಯಯ ಪತ್ರದಲ್ಲಿ ಆಶಿಸಲಾಗಿದೆ. ಸದ್ಯದ ಅಂದಾಜಿನಂತೆ ಸಾಲಮನ್ನಾದ ಪ್ರಮಾಣ ಸುಮಾರು ೬೦,೩೧೪ ಕೋಟಿ. ಸಣ್ಣ ಮತ್ತು ಅತಿ ಸಣ್ಣ ರೈತರ ಸಾಲಮನ್ನಾ ಮಾಡಲು ರೂ. ೫೦,೫೨೪ ಕೋಟಿಗಳಾಗಬಹುದು ಹಾಗೂ ಉಳಿದ ರೈತರಿಗೆ ಒಂದು ಕಾಲದ ತೀರುವಳಿಯಾಗಿ ನೀಡುವ ನೆರವು ರೂ. ೯,೭೯೦ ಕೋಟಿಗಳೆಂದು ಅಂದಾಜು ಮಾಡಲಾಗಿದೆ. ಈ ಸಾಲ ತೀರುವಳಿ ಕಾರ್ಯಕ್ರಮವನ್ನು ಸರ್ಕಾರ ಅತ್ಯಂತ ತುರ್ತಾಗಿ ಜೂನ್ ೩೦ರೊಳಗಾಗಿ ಪೂರ್ಣಗೊಳಿಸುವುದಾಗಿ ಹೇಳಿಕೊಂಡಿದೆ.

ಮೂರನೇ ಮತ್ತು ಅಂತಿಮ ಆಯವ್ಯಯದ ಬೇಡಿಕೆಯನ್ನು ಮಂಡಿಸುತ್ತಾ ಈ ಬಾಬಿಗೆ ಅರ್ಥ ಸಚಿವರು ಸುಮಾರು ರೂ. ೧೦,೦೦೦ ಕೋಟಿ ಬೇಡಿಕೆಯನ್ನು ಸದನದ ಮುಂದಿಟ್ಟು ಜೂನ್ ೩೦ರ ವೇಳೆಗೆ ಮತ್ತೆ ರೂ. ೧೫,೦೦೦ ಕೋಟಿಗಳನ್ನು, ೨೦೧೦-೧೧ರಲ್ಲಿ ರೂ. ೧೨,೦೦೦ ಕೋಟಿಗಳನ್ನು ಮತ್ತು ೨೦೧೧-೧೨ರಲ್ಲಿ ಉಳಿದ ರೂ. ೮೦೦೦ ಕೋಟಿಗಳನ್ನು ನೀಡುವುದಾಗಿ ತಿಳಿಸಿದ್ದಾರೆ. ಈ ಮೂಲಕ ಸರ್ಕಾರ ಅವಗಣನೆಗೆ ಗುರಿಯಾಗಿದ್ದ ರೈತ ಸಮುದಾಯದ ಒಂದು ಪ್ರಮುಖ ಬೇಡಿಕೆಯನ್ನು ತೀವ್ರವಾಗಿ ಪರಿಗಣಿಸಿ ಅದನ್ನು ಪರಿಹರಿಸುವುದರ ಕಡೆಗೆ ಒಂದು ಹೆಜ್ಜೆಯನ್ನಿರಿಸಿದೆ.

ಸರ್ಕಾರದ ಈ ಕ್ರಮದ ಬಗ್ಗೆ ರಾಜಕೀಯ ಪಕ್ಷಗಳಲ್ಲಿ, ಆರ್ಥಿಕ ತಜ್ಞರಲ್ಲಿ, ಮಾಧ್ಯಮಗಳಲ್ಲಿ ತೀವ್ರವಾದ ವಿವಾದಗಳು ಭುಗಿಲೆದ್ದಿವೆ. ಷೇರು ಪೇಟೆ ಸೂಚ್ಯಂಕ ಸೀನಿದರೆ ಸಾಕು ಅದರ ಸುಸ್ಥಿತಿ ಕಾಪಾಡಲು ಧಾವಿಸುತ್ತಿದ್ದ ಅರ್ಥ ಸಚಿವರು ಇದ್ದಕ್ಕಿದ್ದಂತೆ ರೈತರ ಕಡೆಗೆ ತಿರುಗಿರುವುದು ಅವರ ಅನೇಕ ಅಭಿಮಾನಿಗಳ ಕೋಪಾಕ್ರೋಶಗಳಿಗೂ ಕಾರಣವಾಗಿದೆ. ಇದು ರೈತರಲ್ಲಿ ಸಾಲವನ್ನು ಮರುಪಾವತಿಸಬೇಕೆಂಬ ಮನೋಭಾವವನ್ನು ಕೊಲ್ಲಲಿದೆ; ಇದರಿಂದಾಗಿ ಸರ್ಕಾರ ಜನರಿಗೆ ಸಾಲಪಡೆದು ತೀರಿಸದಿದ್ದರೂ ನಡೆಯುತ್ತದೆಂಬ ಉಢಾಳ ಮನೋವೃತ್ತಿಯನ್ನು ಉದ್ದೀಪಿಸುತ್ತದೆ; ಇದು ಅತ್ಯಂತ ಅಪಾಯಕಾರಿ ಹೆಜ್ಜೆ; ಈ ಹಿಂದೆ ಸಾಲ ತೀರಿಸಿದ ರೈತರಿಗೆ ಅನ್ಯಾಯವಾಗಿದೆ; ಇಷ್ಟು ದೊಡ್ಡ ಪ್ರಮಾಣದ ಬಂಡವಾಳವನ್ನು ರೈತರಿಗೆ ನೇರವಾಗಿ ಬೀಜ, ಗೊಬ್ಬರ, ಉತ್ತಮ ಸಂಗ್ರಹಣಾ ಬೆಂಬಲ ಬೆಲೆ, ಗ್ರಾಮೀಣ ಮೂಲ ಸೌಕರ್ಯಾಭಿವೃದ್ಧಿ, ವಿದ್ಯುತ್ ಸರಬರಾಜು ಮುಂತಾದ ಬಾಬುಗಳಿಗೆ ವಿನಿಯೋಗಿಸಿದ್ದರೆ ಹೆಚ್ಚಿನ ಪ್ರಯೋಜನವಾಗುತ್ತಿತ್ತು, ಮುಂತಾದ ಚಿತ್ರ ವಿಚಿತ್ರ ವಾದ ಮಾಡುತ್ತಾ ಸಾಲ ಮನ್ನಾ ಕ್ರಮವನ್ನೇ ಲೇವಡಿ ಮಾಡಲಾಗುತ್ತಿದೆ. ಆದರೆ ಬಹಳ ವಿಚಿತ್ರವೆಂದರೆ ರೈತರಿಗೆ ಸಾಲ ಮನ್ನಾ ಮಾಡಿದಾಗ ಸಾರ್ವಜನಿಕ ನೈತಿಕತೆ ಬಗ್ಗೆ ಇಷ್ಟೆಲ್ಲಾ ಮಾತನಾಡುವ ಆರ್ಥಿಕ ತಜ್ಞರು ಹಾಗೂ ಬಂಡವಾಳಗಾರರ ವಕ್ತಾರರು ಕಾರ್ಪೊರೇಟ್ ಜಗತ್ತಿನ ಉದ್ದಿಮೆಪತಿಗಳ ಸಾಲವನ್ನು ಬ್ಯಾಂಕು "ಕಾರ್ಯರಹಿತ ಆಸ್ತಿ" (ಎನ್.ಪಿ.ಎ.)ಯಾಗಿ ಪರಿವರ್ತಿಸಿ ವಸೂಲಾತಿಯನ್ನು ಕೈಬಿಟ್ಟಾಗ, ಅನೇಕ ರೀತಿಯ ತೆರಿಗೆ ರಿಯಾಯಿತಿಗಳನ್ನು ನೀಡಿದಾಗ, ಎಕ್ಸೈಸ್ ಹಾಗೂ ಕಸ್ಟಮ್ಸ್ ಸುಂಕ ವಿನಾಯಿತಿ ನೀಡಿದಾಗ, ಆದಾಯ ತೆರಿಗೆ ರಜೆ ರಿಯಾಯಿತಿಗಳನ್ನು ನೀಡಿದಾಗ ಆಗುವ ಸಾರ್ವಜನಿಕ ದುಷ್ಪರಿಣಾಮಗಳ ಬಗ್ಗೆ ಚಕಾರವೆತ್ತದೆ ಅದನ್ನೇ ಬೆಳವಣಿಗಾಭಿಮುಖಿ ಮುಂಗಡ ಪತ್ರವೆಂದು ಹಾಡಿ ಹೊಗಳುವ ಇಬ್ಬಂದಿತನವನ್ನು ತೋರಿಸುತ್ತಾರೆ. ೨೦೦೪-೦೫ರಲ್ಲಿ ಉದ್ದಿಮೆಪತಿಗಳಿಗೆ ಈ ರೀತಿಯ ಪ್ರೋತ್ಸಾಹಗಳನ್ನು ನೀಡಿದ್ದರಿಂದ ರೂ. ೨.೦೬ ಲಕ್ಷ ಕೋಟಿ ರೂ.ಗಳ ಆದಾಯ ನಷ್ಟ ಸರ್ಕಾರಕ್ಕಾಗಿದೆ ಎಂದು ಅಧಿಕೃತ ದಾಖಲೆಗಳೇ ತಿಳಿಸುತ್ತವೆ. ೨೦೦೫-೦೬ರಲ್ಲಿ ಇಂತಹ ನಷ್ಟ ರೂ. ೨.೩೫ ಲಕ್ಷ ಕೋಟಿಗಳಿಗೇರಿತು. ಇಷ್ಟು ದೊಡ್ಡ ಪ್ರಮಾಣದ ಕೊಡುಗೆಗಳನ್ನು ಸರ್ಕಾರ ಉದ್ದಿಮೆಪತಿಗಳಿಗೆ ನೀಡಿದಾಗ ಚರ್ಚಾವಲಯದಿಂದ ಅವುಗಳನ್ನು ದೂರವಿಡುವ ಮಾಧ್ಯಮಗಳು ಆತ್ಮಹತ್ಯೆಯ ಹಾದಿಯಲ್ಲಿರುವ ಅನ್ನದಾತನಾದ ರೈತನಿಗೆ ಅಪರೂಪಕ್ಕೆ ನೀಡಲಾಗಿರುವ ಕೇವಲ ರೂ. ೬೦,೦೦೦ ಕೋಟಿ ಕೊಡುಗೆಯ ಬಗ್ಗೆ ಯಾಕಿಷ್ಟು ಬೊಂಬಡಿ ಹೊಡೆಯುತ್ತಿದ್ದಾರೆಂಬುದು ಅವರು ಯಾರ ಪಕ್ಷಪಾತಿಗಳೆಂಬುದನ್ನು ಸ್ಪಷ್ಟಪಡಿಸುತ್ತದೆ. ಮತ್ತು ಅವರು ಯಾರ ತೊತ್ತಿನ ಆಳುಗಳಾಗಿ ವಾದ ಮಾಡುತ್ತಿದ್ದಾರೆಂಬುದರ ಸೂಚಿಯಾಗಿದೆ.

ಒಂದು ವರ್ಗ ಸಾಲ ಮನ್ನಾವನ್ನು ಅತ್ಯಂತ ಪ್ರತಿಗಾಮಿ ಆರ್ಥಿಕ ಕ್ರಮವೆಂದು ಜರಿಯುತ್ತಿರುವಾಗಲೇ ಇದನ್ನು ಅತ್ಯಂತ ಕ್ರಾಂತಿಕಾರಕ ಚರಿತ್ರಾರ್ಹ ಹೆಜ್ಜೆಯೆಂದೇ ಬಿಂಬಿಸಲು ಕೆಲವರು ಹರಸಾಹಸ ಪಡುತ್ತಿದ್ದಾರೆ. ಇದು ಕೃಷಿಕ್ಷೇತ್ರದ ಪುನಶ್ಚೇತನವನ್ನು ಉದ್ದೀಪಿಸಿ ರೈತರ ಆತ್ಮಹತ್ಯೆಯ ಯುಗಕ್ಕೆ ಅಂತ್ಯ ಹಾಡಲಿದೆ; ಹೊಸ ಹುಮ್ಮಸ್ಸಿನಿಂದ ರೈತರು ಇಳಿಮುಖವಾಗಿರುವ ಕೃಷಿ ಉತ್ಪಾದಕತೆಯನ್ನು ಹೆಚ್ಚಿಸುವಂತೆ ಮಾಡಲು ಈ ಕ್ರಮ ಪ್ರೇರಣೆ ನೀಡುತ್ತದೆಯೆಂದು ಹೇಳಲಾಗುತ್ತಿದೆ. ಮತ್ತೆ ಕೆಲವರು ಇದನ್ನು ಚುನಾವಣೆಯ ಅಗ್ಗದ ಗಿಮಿಕ್, ಇದರಿಂದ ರೈತರಿಗೆ ಯಾವುದೇ ಪ್ರಯೋಜನವಿಲ್ಲ. ಯಾವುದೇ ಕಾರಣಕ್ಕೂ ತೀರಿಸಲಾಗದಂತಹ ಅತ್ಯಂತ ಸಂಕಷ್ಟದಲ್ಲಿ ಇರುವ ರೈತರ ಸಾಲವನ್ನು ಮನ್ನಾ ಮಾಡಿದರೆ ಸರ್ಕಾರದ ಮತ್ತು ಹಣಕಾಸು ಸಂಸ್ಥೆಗಳ ಮುಂದೆ ಅನ್ಯ ಮಾರ್ಗಗಳೇ ಇಲ್ಲದ ಅನಿವಾರ್ಯ ಪರಿಸ್ಥಿತಿಯಲ್ಲಿ ಅತ್ಯಂತ ಸಹಜವಾದ ಈ ಕ್ರಮಕ್ಕೆ ವಿಶೇಷ ಮಹತ್ವ ಇಲ್ಲವೆಂದು ಮತ್ತೆ

ಸಿ. ಯತಿರಾಜು

ಕೆಲವರ ವಾದ. ಅನೇಕ ರೈತ ನಾಯಕರು ಈ ಕ್ರಮ ರೈತರಿಗೆ ಅತ್ಯಂತ ಸೀಮಿತ ಪರಿಹಾರವನ್ನೊದಗಿಸುತ್ತಿದೆ; ರೈತರು ಎದುರಿಸುತ್ತಿರುವ ಬಿಕ್ಕಟ್ಟುಗಳ ಒಂದು ಎಳೆಯನ್ನು ಅರೆಬರೆಯಾಗಿ ಉದ್ದೇಶಿಸುವ ಈ ಕ್ರಮ ಅತ್ಯಂತ ಸೀಮಿತ ಪ್ರಯೋಜನಕಾರಿ, ಇದರಿಂದ ಲಾಭ ಪಡೆಯಲಿರುವ ಆತ್ಮಹತ್ಯೆಯ ಹಾದಿಯಲ್ಲಿರುವ ರೈತರ ಸಂಖ್ಯೆ ಅತ್ಯಲ್ಪವೆಂದು ತಮ್ಮ ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ಈ ಎಲ್ಲಾ ಹಿನ್ನೆಲೆಗಳಲ್ಲಿ ಸಾಲ ಮನ್ನಾದ ಉದ್ದೇಶ, ವ್ಯಾಪ್ತಿ ಮತ್ತು ಸಾರ್ಥಕತೆಯ ಬಗ್ಗೆ ಹೆಚ್ಚಿನ ವಿಶ್ಲೇಷಣೆ ಮಾಡುವ ಅಗತ್ಯವಿದೆ.

**ಕೃಷಿಕ್ಷೇತ್ರದ ಬಿಕ್ಕಟ್ಟು**

ಇಂದು ಕೃಷಿರಂಗ ಅತ್ಯಂತ ಸಂಕೀರ್ಣವಾದ ತೀವ್ರವಾದ ಬಿಕ್ಕಟ್ಟುಗಳನ್ನೆದುರಿಸುತ್ತಿದೆ. ಹಲವಾರು ವರ್ಷಗಳಿಂದ ಸರ್ಕಾರಗಳು ಅನುಸರಿಸುತ್ತಾ ಬಂದ ಕೃಷಿ ನೀತಿಗಳು; ಪ್ರೋತ್ಸಾಹಿಸುತ್ತಾ ಬಂದ ಕೃಷಿ ಪದ್ಧತಿಗಳು; ಜಾಗತೀಕರಣ ಉದಾರೀಕರಣದ ಹೆಸರಲ್ಲಿ ತಂದ ಸುಧಾರಣೆಗಳು; ಬೀಜ, ಗೊಬ್ಬರ, ವಿದ್ಯುತ್ ಮುಂತಾದವುಗಳಿಗೆ ನೀಡಲಾಗಿದ್ದ ಸಹಾಯಧನಗಳ ಕಡಿತ ಅಥವಾ ಹಿಂತೆಗೆತ; ಮುಕ್ತ ಮಾರುಕಟ್ಟೆಯ ಶಕ್ತಿಗಳಿಗೆ ನೀಡಲಾದ ಪ್ರೋತ್ಸಾಹ ಮತ್ತು ಬೆಂಬಲ; ಕೃಷಿ ಉತ್ಪನ್ನಗಳಿಗೆ ನ್ಯಾಯಯುತವಾದ ಬೆಲೆ ನಿಗದಿಪಡಿಸದೆ, ಸೂಕ್ತ ಬೆಂಬಲ ಬೆಲೆಯನ್ನು ಹಾಗೂ ಸಂಗ್ರಹಣಾ ಕಾರ್ಯಾಚರಣೆಯನ್ನು ನಡೆಸದೆ ಹೋದದ್ದು ಇಂದಿನ ಕೃಷಿ ಬಿಕ್ಕಟ್ಟಿಗೆ ಪ್ರಮುಖ ಕಾರಣ. ಬೀಜ, ಗೊಬ್ಬರ, ಕೀಟನಾಶಕಗಳಲ್ಲಿ ವ್ಯಾಪಕ ಮೋಸ ನಡೆಯುತ್ತಿದ್ದಾಗಲೂ ಸರ್ಕಾರ ಅದನ್ನು ನಿಯಂತ್ರಿಸಲು ಹತ್ತಿಕ್ಕಲು ಯಾವುದೇ ಕ್ರಮ ತೆಗೆದುಕೊಳ್ಳದೆ ಹಿಂದೆ ಸರಿದದ್ದು, ಕೃಷಿ ಒಳಸುರಿಗಳ ಬೆಲೆ ಅಪಾರವಾಗಿ ಹೆಚ್ಚಾದಾಗ್ಯೂ ಸರ್ಕಾರ ಕಣ್ಮುಚ್ಚಿ ರೈತರ ಲೂಟಿಗೆ ಬೆಂಬಲ ನೀಡಿದ್ದು – ಇಂದಿನ ಕೃಷಿ ಬಿಕ್ಕಟ್ಟಿಗೆ ಕಾರಣ. ಈ ಸಮಸ್ಯೆಗಳ ಸುಳಿಯಲ್ಲಿ ಬಳಲುತ್ತಿರುವ ರೈತ ಸಮೂಹ ಸಾಲದ ಸುಳಿಯಲ್ಲಿ ಸಿಲುಕಿ ಆತ್ಮಹತ್ಯೆಯ ಹಾದಿಯಲ್ಲಿ ಸಾಗಿದೆ. ಈ ನೀತಿಗಳ ಫಲವಾಗಿ ಸರ್ಕಾರದ ಅಧಿಕೃತ ದಾಖಲೆಗಳ ಪ್ರಕಾರವೇ ೧೯೯೭ ರಿಂದ ೨೦೦೫ರ ೯ ವರ್ಷಗಳ ಅವಧಿಯಲ್ಲಿ ೧.೫ ಲಕ್ಷಕ್ಕೂ ಅಧಿಕ ರೈತರು ಆತ್ಮಹತ್ಯೆಗೆ ಬಲಿಯಾಗಿದ್ದಾರೆ. ಅದರಲ್ಲೂ ವಿಶೇಷವಾಗಿ ವಾಣಿಜ್ಯ ಬೆಳೆ ಬೆಳೆಯುತ್ತಿದ್ದ ೫ ರಾಜ್ಯಗಳಲ್ಲೇ ೨/೩ ಭಾಗ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಪ್ರಧಾನ ಮಂತ್ರಿಗಳು ಈ ಆತ್ಮಹತ್ಯೆಯನ್ನು ತಡೆಗಟ್ಟಲು ರೂ. ೧೭,೦೦೦ ಕೋಟಿಗಳ ವಿಶೇಷ ಪ್ಯಾಕೇಜನ್ನು ಜಾರಿಮಾಡಿ ವರ್ಷ ಕಳೆದರೂ ಆತ್ಮಹತ್ಯೆಗಳು ಅವ್ಯಾಹತವಾಗಿ ಮುಂದುವರಿದಿವೆ ಎಂದರೆ ಬಿಕ್ಕಟ್ಟು ಎಷ್ಟು ಭೀಕರವಾದದ್ದೆಂಬುದು ಮನವರಿಕೆಯಾಗುತ್ತದೆ. ಇಂತಹ ಗಂಭೀರ ಪರಿಸ್ಥಿತಿಯಲ್ಲಿರುವ ರೈತ ಸಮೂಹವನ್ನು ಸಾಲ ಮನ್ನಾದಂತಹ ತೋರಿಕೆಯ ಕ್ರಮ ಯಾವ ರೀತಿ ಮೇಲೆತ್ತಬಹುದೆಂಬ ಬಗ್ಗೆ ಬಲವಾದ ಅನುಮಾನಗಳಿವೆ.

**ಸಾಲದಿಂದಲೂ ಸಂಪೂರ್ಣವಾಗಿ ಮುಕ್ತಿ ಇಲ್ಲ**

ಒಂದು ಅಂದಾಜಿನಂತೆ ಶೇ. ೮೨ರಷ್ಟು ಬಡ ಕೃಷಿ ಕುಟುಂಬಗಳು ಶಾಶ್ವತ ಸಾಲದ ಸುಳಿಯಲ್ಲಿವೆ. ರಾಷ್ಟ್ರೀಯ ಪ್ರಾತಿನಿಧಿಕ ಸರ್ವೇಕ್ಷಣಾ ಸಂಸ್ಥೆಯ ಅಂಕಿ-ಅಂಶಗಳ ಪ್ರಕಾರವೇ ಶೇ. ೧೭.೧ರಷ್ಟು ಸಾಲಗಾರ ರೈತ ಕುಟುಂಬಗಳು ಒಂದು ಹೆಕ್ಟೇರ್‌ಗಿಂತಲೂ ಕಡಿಮೆ ಭೂಮಿಯನ್ನು ಹೊಂದಿವೆ. ಬಾಕಿ ಉಳಿದಿರುವ ಶೇ. ೫೭.೭ರಷ್ಟು ಸಾಲವನ್ನು ರೈತರು ಹಣಕಾಸು ಸಂಸ್ಥೆಗಳಿಂದ ಪಡೆದಿದ್ದರೆ ಉಳಿದ ಶೇ. ೪೨.೩ರಷ್ಟು ಸಾಲವನ್ನು ರೈತರು ವರ್ತಕರು, ಖಾಸಗಿ ಲೇವಾದೇವಿದಾರರಿಂದ ಅಪಾರ ಬಡ್ಡಿದರದಲ್ಲಿ (ಶೇ. ೨೦ರಿಂದ ೩೫) ಪಡೆದಿದ್ದಾರೆ. ಸರ್ಕಾರವೇ ನೇಮಕ ಮಾಡಿದ ಪ್ರೊ|| ರಾಧಾಕೃಷ್ಣನ್ ಸಮಿತಿಯ ವರದಿ ಪ್ರಕಾರ ಶೇ. ೭೪ರಷ್ಟು ರೈತಸಾಲ ಖಾಸಗಿ ಮೂಲಗಳಿಂದ ಬಂದದ್ದಾಗಿದೆ. ಪರಿಸ್ಥಿತಿ ಹೀಗಿರುವಾಗ ಸರ್ಕಾರಿ ಸಾಲ ಮನ್ನಾದಿಂದ ಅರ್ಧಕ್ಕೂ ಅಧಿಕ ರೈತರಿಗೆ ಯಾವ ಪರಿಹಾರವೂ ದೊರಕದು. ಅವರನ್ನು ಸಾಲದ ಶೂಲದಿಂದ ಬಿಡುಗಡೆ ಮಾಡಲಾಗಿಲ್ಲ.

ಇನ್ನು ಸಣ್ಣ ಮತ್ತು ಅತಿ ಸಣ್ಣ ರೈತರ ವಿಭಜನೆ ಅತ್ಯಂತ ಅವೈಜ್ಞಾನಿಕ. ಇಡೀ ದೇಶಕ್ಕೆ ಏಕಪ್ರಕಾರವಾಗಿ ೧-೨ ಹೆಕ್ಟೇರ್ ಭೂಮಿ ಹೊಂದಿರುವವರನ್ನು ಸಣ್ಣ ರೈತರೆಂದು, ಒಂದು ಹೆಕ್ಟೇರ್‌ವರೆಗೆ ಭೂಮಿ ಹೊಂದಿರುವವರನ್ನು ಅತಿಸಣ್ಣ ರೈತರೆಂದು ವಿಂಗಡಿಸಲಾಗಿದೆ. ಭೂ ಹಿಡುವಳಿಯ ಪ್ರಮಾಣ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸಗೊಳ್ಳುತ್ತದೆ. ಮಳೆಯಾಶ್ರಿತ ಒಣ ಹಾಗೂ ಅರೆ ಒಣ ಭೂ ಪ್ರದೇಶಗಳಲ್ಲಿ ರೈತರು ಹೆಚ್ಚಿನ ಪ್ರಮಾಣದ ಭೂಮಿಯನ್ನು ಹೊಂದಿದ್ದರೂ ಅವರ ಕೃಷಿ ಉತ್ಪಾದಕತೆ ಕನಿಷ್ಠವಾಗಿ ಇರುತ್ತದೆ ಮತ್ತು ಅವರು ಕಡುಬಡತನದಲ್ಲಿರುತ್ತಾರೆ. ನೀರಾವರಿ ಪ್ರದೇಶದ ರೈತರು ಕಡಿಮೆ ಭೂಮಿಯನ್ನು ಹೊಂದಿದ್ದರೂ ಒಣ ಪ್ರದೇಶದ ರೈತರಿಗೆ ಹೋಲಿಸಿದಾಗ ಉತ್ತಮ ಸ್ಥಿತಿಯಲ್ಲಿರುವಂತೆ ಕಂಡುಬರುತ್ತದೆ. ಇಬ್ಬರನ್ನೂ ಒಂದೇ ಮಾನದಂಡದಿಂದ ಅಳೆದಾಗ ಹೆಚ್ಚು ಕಷ್ಟದಲ್ಲಿ ಇರುವ ಬಡ ರೈತರು ಸಾಲ ಮನ್ನಾ ಯೋಜನೆಯಿಂದ ಅನ್ಯಾಯಕ್ಕೊಳಗಾಗುವ ಅಪಾಯವಿದೆ. ಅದಕ್ಕಾಗಿಯೇ ತೀವ್ರ ಆತ್ಮಹತ್ಯಾ ಪೀಡಿತ ಪ್ರದೇಶಗಳಾದ ವಿದರ್ಭಾ, ರಾಯಲಸೀಮಾ ಮುಂತಾದ ಪ್ರದೇಶಗಳ ರೈತ ಸಂಘಟನೆಗಳು ಈ ವಿಂಗಡಣೆಯ ವಿರುದ್ಧ ಧ್ವನಿಯೆತ್ತಿವೆ. ಆದರೆ ಪಶ್ಚಿಮ ಮಹಾರಾಷ್ಟ್ರದಂತಹ ನೀರಾವರಿ ಹೊಂದಿರುವ ಪ್ರದೇಶಗಳ ಬಹುಪಾಲು ರೈತರು ಸಾಲ ಮನ್ನಾದಿಂದ ಪ್ರಯೋಜನ ಹೊಂದುವರೆಂದು ನಿರೀಕ್ಷಿಸಲಾಗಿದೆ. ಆದ್ದರಿಂದಲೇ ಸಣ್ಣ ಮತ್ತು ಅತಿ ಸಣ್ಣ ರೈತರೆಂಬ ವಿಭಜನೆಯನ್ನು ಮಳೆಯಾಶ್ರಿತ ಒಣ ಭೂ ಪ್ರದೇಶಗಳಲ್ಲಿ ಒಂದು ರೀತಿ ಮತ್ತು ನೀರಾವರಿ ಪ್ರದೇಶಗಳಲ್ಲಿ ಮತ್ತೊಂದು ರೀತಿ ಮಾಡಬೇಕೆಂದು ಒತ್ತಾಯ ಮಾಡಲಾಗುತ್ತಿದೆ. ಇಲ್ಲವೇ ದೊಡ್ಡ ಜಮೀನ್ದಾರರನ್ನು ಹೊರತುಪಡಿಸಿ ಎಲ್ಲಾ ರೈತರಿಗೂ ಸಾಲಮನ್ನಾ ಮಾಡಬೇಕೆಂದು ಒತ್ತಾಯಿಸಲಾಗುತ್ತಿದೆ. ಮತ್ತೆ ಕೆಲವರು ಈ ಎಕರೆವಾರು ಲೆಕ್ಕಾಚಾರಗಳನ್ನು ಕೈಬಿಟ್ಟು ಒಂದು ಗರಿಷ್ಠ ಮಟ್ಟದವರೆಗಿನ ಎಲ್ಲಾ ಸಾಲಗಳನ್ನು ಮನ್ನಾಮಾಡುವುದು ಸೂಕ್ತವೆಂದು ಅಭಿಪ್ರಾಯಪಡುತ್ತಾರೆ.

**ಮಕ್ಕಳಲ್ಲಿ ವೈಜ್ಞಾನಿಕ ಮನೋಭಾವ ಬೆಳೆಸಲು ಕರೆ**



ಈಗಷ್ಟೇ ವೈಜ್ಞಾನಿಕತೆ ಕುರಿತು ಭರ್ಜರಿ ಮಾತನಾಡಿ ಬಂದಿದ್ದೀರ... ಇಲ್ಲಿ ಬಂದು 'ಪಂಚಾಂಗ' ನೋಡಿ ಅದೇನೋ ಹೇಳ್ತಿದ್ದೀರಲ್ಲ...?!

ಇದಲ್ಲದೆ ಸಾಲ ಮನ್ನಾಕ್ಕೆ ಫೆಬ್ರವರಿ ೨೯ರ ಅಂತಿಮ ಗಡುವೂ ಕೂಡ ವೈಜ್ಞಾನಿಕವಾದದ್ದಲ್ಲ. ಸಾಲದ ಅಗತ್ಯ ಒಂದೊಂದು ಬೆಳೆಗೆ ಒಂದೊಂದು ಕಾಲದಲ್ಲಿ ಬೀಳುತ್ತದೆ. ಹತ್ತಿ ಬೆಳೆಗಾರರಿಗೆ, ಕಬ್ಬು ಬೆಳೆಗಾರರಿಗೆ, ಬತ್ತ, ಬಾಳೆ, ತರಕಾರಿ, ಹೂವು, ರೇಷ್ಮೆ ಮುಂತಾದ ಒಂದೊಂದು ಬೆಳೆಗೂ ರೈತರು ಒಂದೊಂದು ಅವಧಿಯಲ್ಲಿ ಸಾಲ ಮಾಡುತ್ತಾರೆ. ಇವರೆಲ್ಲರಿಗೂ ಒಂದೇ ಗಡುವನ್ನು ನಿಗದಿ ಪಡಿಸಿದರೆ ಅನೇಕ ರೈತರಿಗೆ ಸಾಲಮನ್ನಾದ ಲಾಭವನ್ನು ಪಡೆದುಕೊಳ್ಳಲಾಗುವುದಿಲ್ಲ. ಒಳಗೊಳ್ಳುವ ಆಲಂಗಿಸಿಕೊಳ್ಳುವ ಅಭಿವೃದ್ಧಿ ಮಾದರಿಯ ಆಯವ್ಯಯವೆಂದು ಕೊಚ್ಚಿಕೊಳ್ಳುವ ಈ ಆಯವ್ಯಯ ಹೇಗೆ ಬಡ ರೈತರನ್ನು ಅಂಚಿಗೆ ತಳ್ಳುತ್ತಿದೆ ಎಂಬುದು ಇದರಿಂದ ಬಹಳ ಸ್ಪಷ್ಟ.

ಇಂದಿನ ಸಾಮಾಜಿಕ, ರಾಜಕೀಯ, ಆರ್ಥಿಕ ಸನ್ನಿವೇಶದಲ್ಲಿ ಸಾಲಪಡೆಯುವ ಸಾಮರ್ಥ್ಯ ಎಲ್ಲಾ ರೈತರಿಗೂ ಏಕಪ್ರಕಾರವಾಗಿಲ್ಲ. ಅದರಲ್ಲೂ ವಿಶೇಷವಾಗಿ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಹಣಕಾಸು ಸಂಸ್ಥೆಗಳಿಂದ, ಬ್ಯಾಂಕುಗಳಿಂದ ಸಾಲ ಪಡೆಯುವ ಸಾಮರ್ಥ್ಯ ಅತ್ಯಂತ ಕಡಿಮೆ. ರಾಜಕೀಯ ವಶೀಲಿಬಾಜಿ, ಅಧಿಕಾರಶಾಹಿಗಳ ಭ್ರಷ್ಟಾಚಾರ ಮುಂತಾದವುಗಳು ಈ ರೈತ ಸಮೂಹವನ್ನು ಇಂದಿಗೂ ಖಾಸಗಿ ಲೇವಾದೇವಿದಾರರ ಕಪಿಮುಷ್ಟಿಗೆ ತಳ್ಳಿಬಿಟ್ಟಿವೆ. ಇವುಗಳ ದೃಷ್ಟಿಯಲ್ಲಿ ಈ ಬಡವರು ಸಾಲಾರ್ಹತೆಯನ್ನೇ ಹೊಂದಿಲ್ಲ. ಇಂದು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ರೈತರು ಇಂತಹ ದುಬಾರಿ ಸಾಲಗಳಿಂದಲೇ ಅಧಿಕವಾಗಿ ಬಾಧಿಸಲ್ಪಡುತ್ತಿದ್ದಾರೆ.

ರೈತರು ಕೇವಲ ಸಾಲದ ಬಾಧೆಯಿಂದ ಮಾತ್ರ ಆತ್ಮಹತ್ಯೆಯ ಹಾದಿ ಹಿಡಿದಿದ್ದಾರೆ; ಅವರನ್ನು ಇದರಿಂದ ಪಾರು ಮಾಡಿದರೆ ರೈತರು ನೆಮ್ಮದಿಯಿಂದ ಬಾಳಬಲ್ಲರು ಎಂದು ಭಾವಿಸುವುದು ಒಂದು ಭ್ರಮೆ ಹಾಗೂ ಸಮಸ್ಯೆಯ ಅತಿ ಸರಳೀಕರಣ ಮಾತ್ರ. ರೈತರು ಅನುಭವಿಸುತ್ತಿರುವ ಸಂಕಷ್ಟಗಳ ಸರಮಾಲೆಯಲ್ಲಿ ಸಾಲ ಒಂದು ಸಣ್ಣ ಭಾಗ. ಕೃಷಿ ದಿನೇ ದಿನೇ ಕೈಗಾರಿಕೀಕರಣಗೊಳ್ಳುತ್ತಿದೆ, ಯಾಂತ್ರೀಕರಣಗೊಳ್ಳುತ್ತಿದೆ. ಬೀಜ, ರಸಗೊಬ್ಬರ, ಕೀಟನಾಶಕಗಳು, ಕೃಷಿ ಸಾಧನ ಸಲಕರಣೆಗಳು, ವಿದ್ಯುತ್, ಇಂಧನ ಮುಂತಾದ ಒಳಸುರಿಗಳ ಬೆಲೆಗಳ ಮೇಲೆ ಯಾವುದೇ ನಿಯಂತ್ರಣವಿಲ್ಲ. ಇವುಗಳಿಗೆ ಸರ್ಕಾರ ನೀಡುತ್ತಿದ್ದ ಸಹಾಯಧನ ದಿನೇ ದಿನೇ ಕಡಿಮೆಯಾಗುತ್ತಾ ಕಣ್ಮರೆಯಾಗುವ ಕಡೆಗೆ ಸಾಗಿದೆ. ರೈತರಿಗೆ ಬಂಪರ್ ಬೆಳೆ ಬಂದಾಗ ಬೆಲೆ ಪಾತಾಳಕ್ಕಿಳಿದು ಹಾಳು ಮಾಡಿದರೆ, ಕೀಟ, ರೋಗಗಳು, ಕಳಪೆ

ಬೀಜಗಳು, ರಾಸಾಯನಿಕ ಗೊಬ್ಬರಗಳು ಮತ್ತು ಕೀಟನಾಶಕಗಳನ್ನು ಬಳಸಿ ರೈತ ಅಪಾರ ನಷ್ಟಕ್ಕೀಡಾಗುತ್ತಿದ್ದಾನೆ. ಕುಸಿಯುತ್ತಿರುವ ಅಂತರ್ಜಲ, ವಿಸ್ತರಣೆಯಾಗದ ನೀರಾವರಿ, ಸಮರ್ಪಕವಲ್ಲದ ವಿದ್ಯುತ್ ಸರಬರಾಜು ರೈತರ ಜೀವನದ ಜೊತೆ ಚೆಲ್ಲಾಟವಾಡುತ್ತಿವೆ. ಮಾರುಕಟ್ಟೆಯ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಹರಸಾಹಸದಲ್ಲಿ ರೈತ ತನ್ನ ಭೂಮಿಯ ಮಣ್ಣು ಮತ್ತು ನೀರನ್ನು ಕಲುಷಿತಗೊಳಿಸಿಕೊಂಡಿದ್ದಾನೆ. ಇಷ್ಟೆಲ್ಲಾ ಕಷ್ಟಗಳ ನಡುವೆಯೂ ಕೃಷಿ ಉತ್ಪನ್ನಗಳಿಗೆ ಸೂಕ್ತವಾದ ನ್ಯಾಯಸಮ್ಮತವಾದ ವೈಜ್ಞಾನಿಕ ಬೆಲೆ ದೊರಕುತ್ತಿಲ್ಲ. ಅನೇಕ ಬೆಳೆಗಳಿಗೆ ಸರ್ಕಾರ ನಿಗದಿಪಡಿಸುವ ಕನಿಷ್ಠ ಬೆಂಬಲ ಬೆಲೆ ಅತ್ಯಂತ ಅನ್ಯಾಯಕರವಾದದ್ದು. ಕೃಷಿ ಉತ್ಪನ್ನಗಳ ಸಂಗ್ರಹಣಾ ನೀತಿ ಕೂಡ ಸಮರ್ಪಕವಾಗಿಲ್ಲ ಮತ್ತು ಹಲವಾರು ಕೃಷಿ ಉತ್ಪನ್ನಗಳನ್ನು ಇದರ ವ್ಯಾಪ್ತಿಯಿಂದಲೇ ಹೊರಗಿಡಲಾಗಿದೆ. ಈ ಎಲ್ಲಾ ಬಾಧೆಗಳಿಂದ ಬಳಲುತ್ತಿರುವ ರೈತ ಇವುಗಳನ್ನು ತಾಳಿಕೊಳ್ಳಲಾಗದೆ ನಿರ್ಗತಿಕನಾಗಿ ನಗರ ಪ್ರದೇಶಗಳಿಗೆ ಗುಳೆ ಹೋಗುತ್ತಿದ್ದಾನೆ. ಕೃಷಿ ಇಂದು ಅತ್ಯಂತ ನಷ್ಟ ಅನುಭವಿಸುವ ವೃತ್ತಿಯಾಗಿ ಪರಿಣಮಿಸಿರುವುದರಿಂದ ಹೆಚ್ಚು ಹೆಚ್ಚು ರೈತರು ಕೃಷಿಯನ್ನೇ ಕೈಬಿಡುತ್ತಿದ್ದಾರೆ. ಶೇ. ೪೦ಕ್ಕೂ ಅಧಿಕ ರೈತರು ಕೃಷಿಯನ್ನು ಕೈಬಿಡುವ ಇಚ್ಛೆಯನ್ನು ಈಗಾಗಲೇ ವ್ಯಕ್ತಪಡಿಸಿದ್ದಾರೆ. ಇದನ್ನು ತಪ್ಪಿಸಿ ಕೃಷಿಯನ್ನು ಬಿಕ್ಕಟ್ಟಿನಿಂದ ಪಾರು ಮಾಡಬೇಕೆಂದರೆ ಸಾಲ ಮನ್ನಾದಂತಹ ಅರೆಬರೆ ಪ್ರಯತ್ನಗಳಿಂದ ಹೆಚ್ಚಿನ ಪ್ರಯೋಜನವಾಗದು. ಸಾಲಬಾಧೆ ಸಮಸ್ಯೆಯ ಒಂದು ಚಿಹ್ನೆ ಮಾತ್ರ. ಅದನ್ನೇ ರೋಗವೆಂದು ಭ್ರಮಿಸುವುದು ತಪ್ಪು. ಸಮಸ್ಯೆಯ ಆಳಕ್ಕಿಳಿದು ಸಾಲ ಮಾಡಬೇಕಾದಂತಹ ಪರಿಸ್ಥಿತಿಯಿಂದ ರೈತನನ್ನು ಪಾರುಮಾಡಬೇಕು. ಅದು ಆಗದವರೆವಿಗೂ ರೈತರನ್ನು ಸಾಲದ ಬಾಧೆಯಿಂದ ಪಾರುಮಾಡಲು ಸಾಧ್ಯವಿಲ್ಲ. ಸರ್ಕಾರ ರೂಪಿಸುತ್ತಿರುವ ಪರಿಹಾರ ಕಾರ್ಯಕ್ರಮಗಳು, ಯೋಜನೆಗಳು ಸರಿಯಾದ ರೀತಿಯಲ್ಲಿ ಜಾರಿಯಾಗುತ್ತಿಲ್ಲ. ವಿದರ್ಭ ಪ್ಯಾಕೇಜಿನ ಅನುಷ್ಠಾನದ ಬಗ್ಗೆ ಅಧ್ಯಯನ ಮಾಡಿದ ಪ್ರೊ॥ ರಾಧಾಕೃಷ್ಣನ್ ಸಮಿತಿಯ ವರದಿಯನ್ನು ಸರ್ಕಾರ ಅತ್ಯಂತ ಗಂಭೀರವಾಗಿ ಪರಿಗಣಿಸಬೇಕಾಗಿದೆ. ರೈತ ಕಲ್ಯಾಣ ಕಾರ್ಯಕ್ರಮಗಳಿಗೆ ಸರ್ಕಾರಗಳು ತೆಗೆದಿರಿಸುವ ಹಣವನ್ನು ಸೋರಿಕೆಯಾಗದಂತೆ ಅರ್ಹ ಫಲಾನುಭವಿಗಳಿಗೆ ಸಕಾಲದಲ್ಲಿ ತಲುಪಿಸುವ ಕೆಲಸ ಸಮರ್ಪಕವಾಗಿ ಆಗುತ್ತಿಲ್ಲ. ಈ ಕ್ಷೇತ್ರದಲ್ಲಿ ವ್ಯಾಪಕ ಭ್ರಷ್ಟಾಚಾರ, ವಿವಿಧ ಇಲಾಖೆಗಳ ನಡುವೆ ಇರುವ ಸಮನ್ವಯದ ಅಭಾವ, ರಾಜಕೀಯ ಹಸ್ತಕ್ಷೇಪ ಮುಂತಾದ ಕಾರಣಗಳಿಂದಾಗಿ ಆಯವ್ಯಯದಲ್ಲಿ ನಿಗದಿಯಾದ ಹಣಕಾಸು ಫಲಾನುಭವಿಗಳಿಗೆ ತಲುಪುವ ಮಾರ್ಗ ದಲ್ಲೇ ಕಣ್ಮರೆಯಾಗುತ್ತಿದೆ, ಇಲ್ಲವೆ ಅರೆಬರೆಯಾಗಿ ತಲುಪುತ್ತಿದೆ. ಈ ಕಾರಣಗಳಿಂದಾಗಿಯೇ ಸರ್ಕಾರದ ಅತ್ಯಾಕರ್ಷಕ ಉತ್ತಮ ಯೋಜನೆಗಳೂ ಸಹ ನಿರೀಕ್ಷಿತ ಫಲ ನೀಡದೆ ವಿಫಲಗೊಳ್ಳುತ್ತಿರುವುದು ಕಣ್ಣಿಗೆ ರಾಚುವಂತೆ ಕಾಣಿಸುತ್ತಿದೆ.

**ಕೇರಳದ ಸಾಲ ಮನ್ನಾದ ಪರ್ಯಾಯ ಮಾದರಿ**

ಬೇರೆ ರಾಜ್ಯಗಳಿಗೆ ಹೋಲಿಸಿದರೆ ಕೇರಳ ರಾಜ್ಯದಲ್ಲಿ ರೈತರ ಆತ್ಮಹತ್ಯೆ ಇಳಿಮುಖವಾಗಿದೆ. ಅಲ್ಲಿ ಸಾಲ ಮನ್ನಾವನ್ನು ಸಾರಾಸಗಟಾಗಿ ಮಾಡದೆ ಸಾಲದ ಪರಿಹಾರ ಮಾಡಲು 'ಸಾಲ ಪರಿಹಾರ ಆಯುಕ್ತರನ್ನು' ನೇಮಕ ಮಾಡಲಾಗಿದೆ. ಅವರು ಪ್ರತಿ ಪ್ರಕರಣವನ್ನೂ ವಿವರವಾಗಿ ಪರಿಶೀಲಿಸಿ ಸಾಲ ಪರಿಹಾರದ ಸ್ವರೂಪ, ವಿಧಾನ ಮತ್ತು ಪ್ರಮಾಣವನ್ನು ಅತ್ಯಂತ ಪಾರದರ್ಶಕವಾಗಿ ನಿರ್ಧಾರ ಮಾಡಲು ಪ್ರಯತ್ನಿಸುತ್ತಾರೆ. ಇದರಿಂದ ಸ್ಥಳ ವಿಶಿಷ್ಟ ಬೇಡಿಕೆಗಳಿಗನುಸಾರವಾಗಿ ಪರಿಹಾರವನ್ನು ರೂಪಿಸಲು ಸಾಧ್ಯ. ಈ ಕ್ರಮದಲ್ಲೂ ಹಲವಾರು ದೋಷಗಳು ಮತ್ತು ಮಿತಿಗಳಿದ್ದರೂ ಈಗ ಅನುಸರಿಸಲಾಗುತ್ತಿರುವ ಕ್ರಮಗಳಲ್ಲಿ ಹೆಚ್ಚು ಪರಿಣಾಮಕಾರಿಯಾದದ್ದೆಂದು ಅನೇಕ ವರದಿಗಳು ಸೂಚಿಸುತ್ತಿವೆ.




ಹೈದರಾಬಾದಿನಲ್ಲಿ ನಡೆದ ಭಾರತ ಕಮ್ಯುನಿಸ್ಟ್ ಪಕ್ಷದ ೨೦ನೇ ಮಹಾಧಿವೇಶನದ ಸಂದರ್ಭದಲ್ಲಿ (೨೨-೩-೨೦೦೮) ನವಕರ್ನಾಟಕ ಪ್ರಕಟಿಸಿರುವ 'ಸಾಂಪ್ರದಾಯಿಕತಾವಾದ್‌ಕೆ ಭಯಾನಕ ಚಿಹರೆ' ಹಿಂದಿ ಕೃತಿಯನ್ನು ಪ್ರಧಾನ ಕಾರ್ಯದರ್ಶಿ ಎ. ಬಿ. ಬರ್ಧನ್ ಅನಾವರಣಗೊಳಿಸಿದರು. ಇದು 'ಕೋಮುವಾದದ ಕರಾಳ ಮುಖಗಳು' (ಲೇಖಕರು : ಎಸ್. ಆರ್. ಭಟ್, ಜಿ. ರಾಜಶೇಖರ್ ಮತ್ತು ಕೆ. ಫಣಿರಾಜ್) ಕನ್ನಡ ಕೃತಿಯ ಹಿಂದಿ ಅನುವಾದ.

**ಅವಗಣನೆಯಿಂದ ಕುಸಿಯುತ್ತಿರುವ ಕೃಷಿ ಉತ್ಪಾದನೆ**

೧೯೫೦-೫೧ರಿಂದ ಹಿಡಿದು ೨೦೦೬ರವರೆಗೆ ಆಹಾರೋತ್ಪಾದನೆ ವಾರ್ಷಿಕವಾಗಿ ಶೇ. ೨.೫ರ ದರದಲ್ಲಿ ವೃದ್ಧಿಯಾಗಿ ನಾವು ಆಹಾರ ಸ್ವಾವಲಂಬನೆಯನ್ನು ಸಾಧಿಸಲು ಸಾಧ್ಯವಾಗಿತ್ತು. ಆದರೆ ೨೦೦೭ರಲ್ಲಿ ಅದು ಶೇ. ೧.೨ಕ್ಕೆ ಕುಸಿಯಿತು. ಹೀಗೆ ಕುಸಿದದ್ದು ಮತ್ತೆ ಚೇತರಿಸಿಕೊಳ್ಳುವ ಲಕ್ಷಣ ಕಾಣಿಸುತ್ತಿಲ್ಲ. ಆಯವ್ಯಯದ ಮುನ್ನಾದಿನ ಮಂಡಿಸಲ್ಪಟ್ಟ ಆರ್ಥಿಕ ಸಮೀಕ್ಷೆಯ ಪ್ರಕಾರ ಉತ್ಪಾದನಾ ಗುರಿಗೆ ಹೋಲಿಸಿದಂತೆ ಆಹಾರಧಾನ್ಯಗಳ ಉತ್ಪಾದನೆ ಶೇ. ೬೩; ದ್ವಿದಳಧಾನ್ಯಗಳ ಉತ್ಪಾದನೆ ಶೇ. ೮೭.೭; ಎಣ್ಣೆಕಾಳುಗಳ ಉತ್ಪಾದನೆ ಶೇ. ೮೫.೩ರಷ್ಟು ಸಾಧನೆ ಮಾತ್ರ ಆಗಿರುವುದು ಕಂಡುಬರುತ್ತದೆ. ರೈತ ಸಮುದಾಯ ಅಪಾರ ತ್ಯಾಗ ಬಲಿದಾನಗಳ ಮೂಲಕ ಸಾಧಿಸಿದ್ದ ಹಸಿರುಕ್ರಾಂತಿಯ ಸ್ವಾವಲಂಬನೆ ಕುಸಿದು ಪರಾವಲಂಬನೆಯ ಹಾದಿಯಲ್ಲಿ ಮತ್ತೆ ಭಿಕ್ಷಾಂ ದೇಹಿ ಎಂದು ಸಾಗುವ ದಿನಗಳು ನಿಚ್ಚಳವಾಗಿ ಗೋಚರಿಸುತ್ತಿವೆ. ಜೈ ಜವಾನ್, ಜೈ ಕಿಸಾನ್ ಎಂದು ಜಯಕಾರ ಹಾಕುತ್ತಾ ಆಹಾರ ಸುಭದ್ರತೆಯನ್ನಿತ್ತ ರೈತ ಯೋಧರನ್ನ ಆತ್ಮಹತ್ಯೆಗೆ ದೂಡಿ ಅಂತಃಕರಣ ವಿಹೀನ ಜನರಾಗಿ ಕುಳಿತುಬಿಟ್ಟಿದ್ದೇವೆ. ೨೦೧೫ರ ವೇಳೆಗೆ ೪೦೦ ಮಿಲಿಯನ್ ಜನ ಹಳ್ಳಿಗಳಿಂದ ನಗರಗಳಿಗೆ ವಲಸೆ ಹೋಗುವ ನಿರೀಕ್ಷೆ ಇದೆ. ಸರ್ಕಾರದ ಅಂದಾಜುಗಳಂತೆಯೇ ೩೨೦ ಮಿಲಿಯನ್ ಜನ ಹಸಿವಿನಿಂದ ಬಳಲುತ್ತಿದ್ದಾರೆ. ಕೃಷಿಯಲ್ಲಿ ತೊಡಗಿರುವ ದೇಶದ ಶೇ.೬೫ರಷ್ಟು ಜನ ಶೇ. ೧೮ ರಷ್ಟು ಜಿ.ಡಿ.ಪಿ.ಗೆ ಕೊಡುಗೆ ನೀಡುತ್ತಿದ್ದಾರೆ. ಭಾರತದ ಸರಾಸರಿ ಆಹಾರ ಉತ್ಪಾದಕತೆ ಹೆಕ್ಟೇರಿಗೆ ೧.೭ ಟನ್ ಆಗಿದೆ. ಕೃಷಿ ಬೆಳವಣಿಗೆಯ ದರ ಶೇ. ೩.೭ರಷ್ಟು ಇದ್ದದ್ದು ೨೦೦೬ರಲ್ಲಿ ಶೇ. ೧.೮೭ಕ್ಕೆ ಕುಸಿದಿದೆ. ಪರಿಸ್ಥಿತಿ ಇಷ್ಟೊಂದು ಗಂಭೀರವಾಗಿದ್ದರೂ ಕೃಷಿ ಕ್ಷೇತ್ರ ಸತತವಾಗಿ ಅವಗಣನೆಗೆ ಗುರಿಯಾಗಿ ಬೃಹತ್ ಸಾಲ ಮನ್ನಾದಂತಹ ದಂಡವನ್ನು ತೆರಬೇಕಾಗಿದೆ. ಪರಿಸ್ಥಿತಿ ಇಷ್ಟು ಗಂಭೀರವಾಗಿದ್ದರೂ ಕೃಷಿಕ್ಷೇತ್ರದಲ್ಲಿ ಬಂಡವಾಳ ಹೂಡುವಿಕೆ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದೆ. **''ಬೇರೆಲ್ಲಾ ಕಾಯಬಹುದು ಆದರೆ ಕೃಷಿ ಮಾತ್ರ ಕಾಯಬಾರದು''** ಎಂಬ ನೆಹರುರವರ ಜರೂರು ಕೇವಲ ಕಾಗದದ ಮೇಲೆ ಜಾರಿಯಾಗಬಾರದು.

**''ಕೃಷಿ ಬೆಳವಣಿಗೆಯನ್ನ ರೈತರ ನೈಜ ಆದಾಯದ ಹೆಚ್ಚಳದಲ್ಲಿ ಮಾತ್ರ ಅಳೆಯಲಾಗುವುದೆಂಬ''** ಹೇಳಿಕೆಯನ್ನು ಪಕ್ಷಗಳಲ್ಲಿ ಕಾರ್ಯರೂಪಕ್ಕಿಳಿಸಿದಾಗ ಮಾತ್ರ ಕೃಷಿ ಕ್ಷೇತ್ರದಲ್ಲಿ ನಿಜವಾದ ಪ್ರಗತಿಯುಂಟಾಗಿ ರೈತರ ಆತ್ಮಹತ್ಯೆಗೆ ಅಂತ್ಯ ಹಾಡಬಹುದು.

[illegible]




ಪುಟ : ೪೦೮ + ೧೬ ಬೆಲೆ : ರೂ. ೨೫೦

ಪ್ರಕಾಶಕರು

**ರಾಜ್ ವೈಚಾರಿಕ ವೇದಿಕೆ**

೪೩, ರೋಹಿಣಿ, ೫ನೇ ಮುಖ್ಯರಸ್ತೆ ಪದ್ಮನಾಭನಗರ, ಬೆಂಗಳೂರು - ೭೦

ದೂರವಾಣಿ : ೦೮೦-೨೬೬೯೬೫೫೩, ೨೬೬೯೧೯೨೭

e-mail : rajsri@bgl.vsnl.net.in





**ಕ**ನ್ನಡ ಸಾಹಿತ್ಯದಲ್ಲಿ ಅತಿ ವಿರಳವಾಗಿ, ೧೯೯೧ರಲ್ಲಿ ಬಹಳ ಅಪರೂಪದ ವಿಶೇಷ ವಸ್ತುವಿಷಯವಾಗಿ ಹೊರಬಂದ ಮೂರ್ತಿರಾಯರ ಪುಸ್ತಕ, 'ದೇವರು'ವಿನ ಜೊತೆಗೆ ಈ ಪುಸ್ತಕವನ್ನು ಹೋಲಿಸದಿರುವುದು ಅಸಾಧ್ಯ ; ಅಸಹಜವೂ ಸಹ. ಅದು, ಅವರ ಆಪ್ತ, ಅವರದಾಗಿಯೆಂದೆ ಪರಿಚಿತ, ಆಕರ್ಷಕ ಲಲಿತಪ್ರಬಂಧ ಶೈಲಿಯ ಒಂದು ದೊಡ್ಡ ಲೇಖನ ; ನಟರಾಜರ ಈ 'ದೇವರು' ಪುಸ್ತಕದಂತೆ ಒಂದು ಆಗ್ರಹಭರಿತ ಟೀಕೆಗಳ ಪ್ರವಾಹವಾಗಿರಲಿಲ್ಲ. ಅದು ಒಂದು ಅಪೀಲು; ಇದು ಒಂದು ಛಾಲೆಂಜು; ಸವಾಲು. ಅಲ್ಲಿಯ ಆಪ್ತ ಬುದ್ಧಿವಾದಕ್ಕೆ ಬದಲಾಗಿ ಇಲ್ಲಿಯ ಬಹುಮುಖೀಯ ವಾದಗಳ ಜೊತೆಗೆ, ಓದುಗರಲ್ಲಿ ಉಂಟಾಗಬಹುದಾದ ಅನೇಕ ಮರುವಾದಗಳಿಗೂ ಉತ್ತರವಾಗಿ ಪ್ರಖರ ಪ್ರತಿವಾದಗಳೂ ಸಿದ್ಧವಾಗಿ ದೊರೆಯುತ್ತವೆ. ಹೀಗಾಗಿ ಇದು ದೀರ್ಘವಾಗಿರುವುದು ಅವಶ್ಯಕವೆನಿಸುತ್ತದೆ. ಆ ಕಾಲದಲ್ಲಾಗಲೆ, 'ಚಿರಕಾಲದ ನರಬುದ್ಧಿ!' ಎನ್ನುವ ನಿರಾಸೆಯ ವಿತರ್ಕದಲ್ಲಿ ಮೂಲೆಯಲ್ಲಿ ಪೇರಿಸಿ ಮರೆಯುತ್ತಿದ್ದ ಹಳೆಯ ಮತಘರ್ಷಣೆಯ ಅನರ್ಥಗಳ ಜೊತೆಗೆ, 'ಬಾಬರಿ ಮಸ್ಜಿದ್' ಮತ್ತು 'ಕನ್ವರ್ ಸೈನ್' ಮುಂತಾದ ಪ್ರಕರಣಗಳು ಜನತೆಯನ್ನು ಸಾಕಷ್ಟು ಕಲಕಿದ್ದವು. ಆದರೂ, 'ದೇವರು ಮತ್ತು ಮತಾಚರಣೆಗಳು ಅವರವರ ನಂಬಿಕೆಗಳಷ್ಟೆ; ಬೇಕಾದರೆ ನಡೆಸಿಕೊಂಡು ಹೋಗಲಿ' ಎನ್ನುವ ಪೂರ್ವಗ್ರಹ ಬಹು ಸಾಮಾನ್ಯವಾಗಿತ್ತು; ಮೂರ್ತಿರಾಯರು ಇಂತಹ ಪ್ರಕರಣಗಳನ್ನು ನಿದರ್ಶನಗಳಾಗಿ ಕೊಡುತ್ತಾರೆ; 'ದೇವರು ಇಲ್ಲ, ಇದ್ದಿದ್ದರೆ ಚೆನ್ನಾಗಿತ್ತು' ಎಂದೂ ನೊಂದುಕೊಳ್ಳುತ್ತಾರೆ. ಪ್ರಪಂಚದ ಎಲ್ಲ ದೇವರು, ಮತ, ಪಂಥ, ನಂಬಿಕೆ, ರೂಢಿ ಮುಂತಾದವುಗಳ ಮೂಲಭೂತವಾದ, ನಂಬಿದವರನ್ನಷ್ಟೆ ಅಲ್ಲದೆ ನಂಬದವರನ್ನೂ, ಕಡೆಗೆ ಅಸಂಬದ್ಧ ಮುಗ್ಧರನ್ನೂ, ಹಾನಿಗೊಳಿಸಬಲ್ಲದೆಂಬ ಅರಿವು ಆಗಿನ್ನೂ ಸಾಮಾನ್ಯಜನರಲ್ಲಿ ಮೂಡಿರಲಿಲ್ಲ. ಅತಿ ಶೀಘ್ರಗತಿಯಲ್ಲಿ ಬದಲಾಗುತ್ತಿರುವ ಇಂದಿನ ಜಾಗತಿಕ ಬದುಕಿನಲ್ಲಿ, ಸಾರ್ವಜನಿಕರಲ್ಲಿ ವೈಚಾರಿಕತೆ ಹೆಚ್ಚುತ್ತಿರುವ ಈಗಿನ ಸಂದರ್ಭದಲ್ಲಿ, ಈ ಪುಸ್ತಕ ಇನ್ನೂ ಹೆಚ್ಚು ಸಮಗ್ರವಾಗಿ, ಗಹನವಾಗಿ, ಮತ್ತು ಒತ್ತಾಯಪೂರ್ವಕವಾಗಿ, ಈ ಕೆಲಸವನ್ನು ಮಾಡಹೊರಟಿರುವುದು ಸ್ವಾಗತಾರ್ಹ.

ಹಾಗೆಯೆ ನಟರಾಜ್ ಅವರ ಪುಸ್ತಕದಲ್ಲಿರುವ ಎಲ್ಲ ಮತಗಳ ದೀರ್ಘ ಪರಿಚಯವೂ ಸ್ವಾಗತಾರ್ಹ. ಎಲ್ಲ ಮತಗಳೂ ಭಯಂಕರವಾಗಬಲ್ಲವು ಎನ್ನುವ ಕಾರಣಕ್ಕಾಗಿಯಾದರೂ, ಎಲ್ಲರೂ ಎಲ್ಲ ಮತಗಳನ್ನು ಅರಿತುಕೊಳ್ಳ ಬೇಕಾಗಿದೆ; ಅರಿತು, ಚರ್ಚಿಸಬೇಕಾಗಿದೆ. ಸರ್ವ ಮತಗಳ ಪರಿಚಯದ ಮತ್ತೊಂದು ಉತ್ತಮ ಉಪಯೋಗವೂ ಇದೆ. ತಮ್ಮದೇ ದೇವರು ಮತ್ತು ಮತದ ವಿಷಯದಲ್ಲಿ ಯಾರೂ ಎಂತಹ ವಿಚಾರಮಾಡುವುದನ್ನೂ ಸಹಿಸದ ದೈವಮತೀಯರಿಗೆ, ಹೆಚ್ಚು ಮುಖ್ಯವಾಗಿ ಅವರ ಮಕ್ಕಳಿಗೆ, ದೇವರುಗಳ ಪ್ರಸ್ತಾಪವನ್ನೂ ಮಾಡದೆ ವೈಚಾರಿಕತೆಯನ್ನು ಕಲಿಸುವುದು ಹೇಗೆ ? 'ನನ್ನ ಮಗು ತಪ್ಪು ಮಾಡಿದಾಗ, ಪಕ್ಕದ ಮಗುವಿಗೆ ಹೊಡೆದು ಕಲಿಸಿ' ಎನ್ನುವ ಇಂತಹ ಮೋಹದ ತಾಯಿತಂದೆಯರ ಮಕ್ಕಳನ್ನು ತಿದ್ದುವುದು ಹೇಗೆ ? ದಡ್ಡ ಮಹಾರಾಜನ ನೀತಿಗೆಟ್ಟ ಮಕ್ಕಳನ್ನು ಶಿಕ್ಷಿಸಿ ತಾನೇ ದಂಡಿತನಾಗುವ ಬುದ್ಧಿಗೇಡಿತನ ಮಾಡದೆ, ನೀತಿ ಕಲಿಸುವುದು ಹೇಗೆ ? 'ಎಳೆದ ಗೆರೆಯನ್ನು ಮುಟ್ಟದೆಯೆ ಹಿಗ್ಗಿಸು ಅಥವಾ ಕುಗ್ಗಿಸು' ಎನ್ನುವ ಹಠಮಾರಿ ಮಗುವಿಗೆ, ತೋರಿಸಿಕೊಡುವುದು ಹೇಗೆ ? ವಿಷ್ಣು ಶರ್ಮ, ಬೀರಬಲ್‌ರಂತಹ ಜನಪದ ಕಥನಕಾರರು ಕೊಟ್ಟಿರುವ ಯುಕ್ತಿಗಳನ್ನು ಉಪಯೋಗಿಸುವ ಅನನ್ಯಭಾವಕ್ಕೆ ಶರಣಾಗಬೇಕಾಗುತ್ತದೆ. ಎಲ್ಲ ದೇವರುಗಳನ್ನೂ ಮತಗಳನ್ನೂ, ಅಕ್ಕಪಕ್ಕಗಳಲ್ಲಿಟ್ಟು ವಿಶ್ಲೇಷಿಸಿದಾಗ, ಮಿಕ್ಕವುಗಳ ಬಂಡವಾಳ ಬಯಲು ಮಾಡುವ ಹುಮ್ಮಸ್ಸಿನ ತರ್ಕದಲ್ಲಿ, ತನ್ನವೂ ಕೊಚ್ಚಿಹೋಗುವುದನ್ನು ಸಹಿಸುವುದು, ಈ ೨೧ನೆಯ ಶತಮಾನದಲ್ಲಾದರೂ ಕಷ್ಟವಾಗಲಾರದೇನೊ ? ಈ ಪುಸ್ತಕದಲ್ಲಿ, ಈ ಕೆಲಸ ನಡೆದಿದೆ. ಅನೇಕ ದೇಶಗಳ ಶಾಲಾಕಾಲೇಜು ಪಾಠಗಳಲ್ಲಿ, 'ಕಂಪ್ಯಾರಟೀವ್ ರೆಲಿಜನ್ಸ್' ಎಂಬ ಹೆಸರಿನಲ್ಲಿ ಈ ಕೆಲಸ ನಡೆಯುತ್ತದೆ ; ಭಾರತದಲ್ಲಿ ಮಿತಿಮೀರಿದ ಮತಾಸಕ್ತಿಯಿದ್ದರೂ, ಮುಟ್ಟಿದರೆ ಮುನಿಯುವ ಮತಭೀತಿಯಲ್ಲಿ, ಇದು ನಡೆಯುತ್ತಿಲ್ಲ. ಇಂತಹದೊಂದು ಪ್ರಾಥಮಿಕ ಕೋರ್ಸ್‌ಗೆ, ಈ ಬಹು ವ್ಯಾಪ್ತಿಯ ಪುಸ್ತಕ, ಪಠ್ಯಕ್ಕೆ ಆಧಾರವಾಗುವ ವಾಚಿಕೆಯಾಗಿ ಉತ್ತಮ ಕೆಲಸ ಮಾಡಬಲ್ಲದು. ಹಿಂದೂಮತದ ಸುದೀರ್ಘ ಚರ್ಚೆಯೊಂದಿಗೆ, ಇಸ್ಲಾಮ್, ಕ್ರೈಸ್ತ, ಬೌದ್ಧ, ಜೈನ, ಸಿಖ್ ಮತಗಳ ಮತ್ತು ಶಿಂಟೊ, ತಾವೊ, ಕನ್‌ಫ್ಯೂಶಿಯಸ್, ಜರತುಷ್ಟ್ರ ಪಂಥಗಳ ಕಿರುಪರಿಚಯಗಳೂ ಇರುವುದು ಈ ಕಾರ್ಯಕ್ಕೆ ಸೂಕ್ತ.

ಈ ಪುಸ್ತಕದಲ್ಲಿ ಓದುಗರ ಆಸಕ್ತಿ ಮತ್ತು ಅನುಕೂಲಗಳ ಬಗ್ಗೆ, ಲೇಖಕರ ಗಮನ ಬಹಳಷ್ಟಿದೆ; ಈ ಪುಸ್ತಕ ಒಂದು ದೊಡ್ಡ ಕೈಪಿಡಿಯಷ್ಟು ಮಾಹಿತಿ ಮತ್ತು ವಿಷಯಗಳನ್ನು ಒದಗಿಸುತ್ತಿದ್ದರೂ, ಇಲ್ಲಿಯ ಪರಿವಿಡಿ, ಪ್ಯಾರಾಗಳ ಸುದೀರ್ಘ ಶೀರ್ಷಿಕೆಗಳು, ಪುಟಪುಟಗಳಲ್ಲಿ ಮುಖ್ಯಾಂಶಗಳಿಗೆ ಕೊಟ್ಟಿರುವ ಒತ್ತು ಮುಂತಾದವು, ಓದುಗನನ್ನು ಸದಾ ಮೂಲ ಉದ್ದೇಶದ ಕೇಂದ್ರದತ್ತವೆ ನಡೆಸುತ್ತಿರುತ್ತವೆ. ಒಮ್ಮೆ ಓದಿದ ಈ ಸಮಗ್ರದ ಪರಿವಿಡಿಯಿಂದಲೇ, ಯಾವುದೇ ಮಾಹಿತಿಯನ್ನು ಕ್ಷಣಾರ್ಧದಲ್ಲಿ ಮತ್ತೆ ಎತ್ತಿಕೊಳ್ಳಬಹುದು; ನೋಟ್ಸ್ ಮಾಡಿಟ್ಟುಕೊಳ್ಳುವ ಅವಶ್ಯಕತೆಯೇ ಇಲ್ಲ. ಈ ಪುಸ್ತಕದ ಕೊನೆಯ 'ಗ್ರಂಥಋಣ'ದಲ್ಲಿ, ವೈಚಾರಿಕ ಅಧ್ಯಯನಕ್ಕೆ ನೆರವಾಗ ಬಲ್ಲ ಮುನ್ನೂರಕ್ಕೂ ಹೆಚ್ಚು ಆಕರ ಗ್ರಂಥಗಳ ಬಹು ಉಪಯೋಗಿ ಪಟ್ಟಿಯಿದೆ. ಹಾಗೆಯೆ, ಈ ಪುಸ್ತಕ ನಾನೂರ ಎಂಟು ಪುಟಗಳಷ್ಟು ದೀರ್ಘವಿದ್ದರೂ, ಇದರಲ್ಲಿ ಕಿಕ್ಕಿರಿದು ತುಂಬಿ ತುಳುಕುವಷ್ಟು ವಿವಿಧ ವಿಷಯಗಳ ಶೇಖರಣೆಯಿರುವುದು ಗಮನೀಯ.

ಯಾವ ತರಹೆಯ ವಿಚಾರವನ್ನು ಮಾಡದೆ, ಯಾವ ಬದಲಾವಣೆಯನ್ನು ಕಾಣದೆ, ನಾಲ್ಕೈದು ಸಾವಿರ ವರ್ಷಗಳಿಂದ ಹಳೆಯವುಗಳ ಜೊತೆಗೆ ಹೊಸವುಗಳೂ ಗುಡ್ಡೆಗುಡ್ಡೆಯಾಗಿ ಪೇರಿಕೊಂಡಿರುವ ಭಾರತದ ದೇವರುಗಳು ಮತ್ತು ಮತಾಚರಣೆಗಳು, ಯಾವ ಎಂತಹ ಹೊರಗಿನ ಪ್ರಶ್ನೆಗಳನ್ನು ಎದುರಿಸಿದಾಗ ಎಷ್ಟು ಉಳಿಯಬಲ್ಲವು ಎನ್ನುವ ಪ್ರಶ್ನೆ ಮುಂದಕ್ಕಿರಲಿ. ಈಗ, ಈ ಪುಸ್ತಕದಲ್ಲಿನ ಬಹಳ ಪ್ರಶ್ನೆಗಳು, ಒಳಗಿನ ವಿರೋಧಾಭಾಸಗಳ ಮೂಲಪ್ರಶ್ನೆಗಳಾದ್ದರಿಂದ ಬಹಳವಾಗಿ ನಂಬಿರುವವರೂ ಕೇಳುವಂತಹವುಗಳೆ. ದೈವವಾದಿಗಳು ಸಹ, ಶ್ರುತಿ ಸ್ಮೃತಿ ಆಗಮಗಳಷ್ಟನ್ನೇ ಪ್ರಮಾಣವೆಂದು ನಂಬಿಕೊಂಡಿರದೆ, ಈ ಪುಸ್ತಕದ ಪ್ರಶ್ನೆಗಳನ್ನು ಎದುರಿಸುವ ಪ್ರಯತ್ನ ಮಾಡಲೆಂಬುದು ನನ್ನ ಆಶಯ; ಮತ್ತು ಹಾಗಾಗುವುದೆಂದು ನನ್ನ ವಿಶ್ವಾಸ.

ಈ ಪುಸ್ತಕದ ಪಠಣದಿಂದ, ನಾಸ್ತಿಕರಂತೆಯೆ ಆಸ್ತಿಕರಿಗೂ ಜ್ಞಾನವೃದ್ಧಿಯುಂಟೆಂಬ ಫಲಶ್ರುತಿಯನ್ನು ನಾನು ಇಲ್ಲಿ ಹೇಳುವಂತಹವನಾಗಿದ್ದೇನೆ. ಹಾಗಾದಾಗ, 'ಸರ್ವೇಜನಾಸ್ಸುಖಿನೋ ಭವಂತು' ಎಂಬ ಲೋಕ ಕಲ್ಯಾಣದ ದಾರಿ ತೋರಬಹುದು, ಈ ಪುಸ್ತಕ.


**ಡಾ|| ಎಂ. ಎನ್. ಕೇಶವ ರಾವ್**

೩೮೮, ವೆಂಕಟೇಶ ದಾಸ್ ರಸ್ತೆ

ಪದ್ಮನಾಭ ನಗರ, ಬೆಂಗಳೂರು - ೫೬೦೦೭೦

# ನಿಶ್ಶಸ್ತ್ರೀಕರಣ ಕಾಯಿದೆ ಹಾಗೂ ಸ್ಥಳೀಯ ಪ್ರತಿಭಟನೆಗಳು

ದುಡಿವ ವರ್ಗಗಳನ್ನು ಯಜಮಾನರನ್ನಾಗಿ ಫಲಾನುಭವಿಗಳನ್ನಾಗಿ ನಿರಾಶ್ರಿತರನ್ನಾಗಿ ಮಾಡುವ ಸ್ಥಿತಿ ನಿಶ್ಶಸ್ತ್ರೀಕರಣ ಕಾಯಿದೆಯ ಗರ್ಭದೊಳಗಿದೆ. ದುಡಿವ ವರ್ಗಗಳ ಅನ್ನ ಹಾಗೂ ಅಗತ್ಯತೆಯ ಪ್ರಶ್ನೆ ಇದ್ದಿದೆ. ಸುಧಾರಣೆಗಳು ಹಾಗೂ ಕಾಯಿದೆಗಳು ಜನರನ್ನು ಸಕ್ರಿಯಾತ್ಮಕವಾಗಿ ತೊಡಗಿಸಿಕೊಳ್ಳುವಂತಿರಬೇಕೇ ಹೊರತು ಅವರನ್ನು ನಿಷ್ಕ್ರಿಯರನ್ನಾಗಿ ಮಾಡಬಾರದು. ನಿಶ್ಶಸ್ತ್ರೀಕರಣ ಕಾಯಿದೆಯು ಸ್ಥಳೀಯ ಹಲವು ಸಮುದಾಯಗಳ ಅಸ್ತಿತ್ವವನ್ನೇ ಅಳಿಸಲು ಪ್ರಯತ್ನಿಸಿತ್ತು. ಹೀಗಾಗಿ ಕಂಪನಿ ಸರಕಾರದ ವಿರುದ್ಧ ದಂಗೆಯೆದ್ದದ್ದು ಶ್ರೀಮಂತ ವರ್ಗಗಳೂ ಅಲ್ಲ ದೇಸಗತಿಗಳೂ ಅಲ್ಲ. ಬದಲಾಗಿ ದಿನನಿತ್ಯ ದುಡಿದು ತಿನ್ನುವ ಶ್ರಮಿಕ ವರ್ಗಗಳು ಎಂಬುದು ವಿಶೇಷ.

ಡಾ|| ವೀರೇಶ ಬಡಿಗೇರ

ಭಾರತದ ರಾಜಕೀಯ ಸ್ವಾತಂತ್ರ್ಯದ ಪೂರ್ವ ಕಾಲಘಟ್ಟದಲ್ಲಿ ಭಾರತದಾದ್ಯಂತ ವಿವಿಧ ರೀತಿಯಲ್ಲಿ ನಡೆದ ಸ್ಥಳೀಯ ಪ್ರತಿಭಟನೆಗಳನ್ನು ಭಾರತ ರಾಜಕೀಯ ಸ್ವಾತಂತ್ರ್ಯದ ಪೂರ್ವಸಿದ್ಧತೆಯ ರಂಗತಾಲೀಮು ಎನ್ನುವಂತೆ ವ್ಯಾಖ್ಯಾನಿಸುತ್ತ ಬರಲಾಗಿದೆ. ವಿಶೇಷವಾಗಿ ೧೮೫೭ರ ಆಸುಪಾಸಿನಲ್ಲಿ ಕರ್ನಾಟಕದೊಳಗೆ ನಡೆದ ಕಿತ್ತೂರು ಬಂಡಾಯ, ನರಗುಂದ ಬಂಡಾಯ, ಹಲಗಲಿ ಬಂಡಾಯ, ಸಿಂಧೂರ ಲಕ್ಷ್ಮಣನ ದಂಗೆ (ಸು ೧೯-೨೨) ಮುಂತಾದ ಪ್ರತಿಭಟನೆಗಳನ್ನು ವ್ಯಾಖ್ಯಾನಿಸಿದ ರೀತಿಗಳನ್ನು ಇಂದು ಪುನರ್‌ವಿಮರ್ಶೆಗೆ ಅಣಿಗೊಳಿಸಬೇಕಾದ ಅಗತ್ಯವಿದೆ. ಇಂಥ ಪ್ರತಿಭಟನೆಗಳನ್ನು 'ದಂಗೆ', 'ಬಂಡಾಯ', 'ತಳ್ಳಿ' ಮತ್ತು 'ಸ್ವಾತಂತ್ರ್ಯ ಹೋರಾಟ'ಗಳೆಂದು ವಸಾಹತುಶಾಹಿ ಹಾಗೂ ರಾಷ್ಟ್ರೀಯವಾದಿ ಸಂಕಥನಗಳೊಳಗಿಟ್ಟು ವಿಶ್ಲೇಷಿಸಲಾಗಿದೆ. ಚರಿತ್ರೆಯನ್ನು ಒಂದು ಏಕಾಕೃತಿಯೊಳಗಿಂದ ಗ್ರಹಿಸುವ ಇಂಥ ವಿಧಾನಗಳು ಈಗಾಗಲೇ ಚಾಲ್ತಿಯಲ್ಲಿರುವ ಸಂಗತಿಗಳನ್ನೇ ಮತ್ತೆ ಮತ್ತೆ ಹೇಳುತ್ತಿರುತ್ತವೆ. ಕೇಂದ್ರ ಹಾಗೂ ಪಂಥೀಯ ಎನ್ನುವ ವರ್ಗೀಕೃತ ವಿನ್ಯಾಸದಲ್ಲಿಯೇ ಇಂದು ಸ್ಥಳೀಯ ಕ್ರಿಯಾಶೀಲ ನೆಲೆಗಳನ್ನು ಪುನರ್‌ನಿರ್ಮಿಸಿಕೊಳ್ಳುತ್ತಿದ್ದೇವೆ. ರಾಜನ ಬದಲು ಜನರ ದೃಷ್ಟಿಯಲ್ಲಿಯೇ ಪ್ರಭುತ್ವದ ಚರಿತ್ರೆಯನ್ನು ಹೇಳಲಾಗುತ್ತದೆಯೇ ಹೊರತು ಜನರ ಚರಿತ್ರೆಯನ್ನಲ್ಲ.

ಲಿಖಿತ ಅಥವಾ ಆ ಸ್ವರೂಪದ ದಾಖಲೆಗಳ ಮೂಲಕ ಸ್ಥಳೀಯ ಪ್ರಕ್ರಿಯೆ ಹಾಗೂ ಸಂಕಥನಗಳ ಮೂಲಕ ಇಂಥ ಸ್ಥಳೀಯ ಪ್ರತಿಭಟನೆಗಳನ್ನು ಅರ್ಥಮಾಡಿಕೊಳ್ಳಬೇಕಿದೆ. ಏಕರೂಪದ, ಸರಳ ರೇಖಾತ್ಮಕ ಹಾಗೂ ಪಂಚಾಂಗೀಯ ನೆಲೆಯಲ್ಲಿ ಇಂಥ ಸಾಮಾಜಿಕ ಸಂಚಲನೆಗಳನ್ನು ವಿಶ್ಲೇಷಿಸುವ ಬದಲು ಅದರ ಸಾಮಾಜಿಕ ಹಾಗೂ ಸಾಂದರ್ಭಿಕ ಸಂಗತಿಗಳ ಮೂಲಕ ವ್ಯಾಖ್ಯಾನಿಸಿಕೊಳ್ಳಬೇಕಾಗಿದೆ. ಕಾರಣ, ಸರಳ ರೇಖಾತ್ಮಕವಾದ ಪಂಚಾಂಗೀಯ ನೆಲೆಗಳಲ್ಲಿ ಸಾರ್ವಭೌಮ ಅಧಿಕಾರ ರಾಜಕಾರಣದ ಸ್ವಯಂಘೋಷಿತ ದೃಷ್ಟಿಕೋನ ಮುಖ್ಯವಾಗಿರುತ್ತದೆ. ಅವು ಸ್ವತಂತ್ರ ವ್ಯಕ್ತಿತ್ವಕ್ಕಾಗಿ ಹೋರಾಡುವವರನ್ನು 'ದಂಗೆಕೋರರು', 'ಪುಂಡರು', 'ಘಟಿಂಗರು', 'ತಂಟೆಕೋರರು', 'ಡಕಾಯಿತರು', ಸ್ವಭಾವತಃ ಗಲಭೆಕೋರರು, ದಾರಿ ಬಡುಕರು ಎಂದು ವ್ಯಾಖ್ಯಾನಿಸುತ್ತವೆ. ಬ್ರಿಟಿಷ್ ದಾಖಲೆಗಳಂತೂ ಇಂಥವರನ್ನು 'ರೆಬಲ್ಸ್' ಎಂದು ಕರೆಯುತ್ತವೆ. ಇವತ್ತಿಗೂ ಸಂಗೊಳ್ಳಿ ರಾಯಣ್ಣ, ಸಿಂಧೂರ ಲಕ್ಷ್ಮಣ, ಹಲಗಲಿ ಬೇಡರು ನಡೆಸಿದ ವ್ಯವಸ್ಥೆಯೊಂದಿಗಿನ ಗುದ್ದಾಟಗಳನ್ನು ಇದೇ ಮಾದರಿಯಲ್ಲಿಯೇ ಅರ್ಥಮಾಡಿಕೊಂಡು ಖುಷಿ ಪಡುತ್ತಿದ್ದೇವೆ. ನಮ್ಮನ್ನು ನಾವೇ ತಳ್ಳಿಕೋರರು ಎಂದು ಕರೆದುಕೊಂಡು ಆತ್ಮಸಂತೋಷ ಅನುಭವಿಸುವ ಹಾಗೂ ಮೀಸಿ ಹುರಿಗೊಳಿಸಿ ಬೀಗುವ ಸ್ಥಿತಿಗೆ ತಲುಪಿದ್ದೇವೆ. ಇಂದು ನಮ್ಮ ವಿಸ್ಮೃತಿಗೆ ನಾವೇ ಕಾರಣರಾಗಿದ್ದೇವೆ. ಚರಿತ್ರೆ ವ್ಯಾಖ್ಯಾನಿಸಿದ ದಾಸ್ಯ ಸ್ಥಿತಿಯನ್ನೇ ಪರಮ ಮೋಕ್ಷ ಎಂದು ಭಾವಿಸಿಕೊಂಡಿರುವ ಸ್ಥಿತಿ ಮೂರು ದಿನಗಳ ಕಾಲ ನಾಗರಾಳದಲ್ಲಿ ನಡೆದ ನಮ್ಮ ಹಲಗಲಿ ಬಂಡಾಯ ವಿಚಾರ ಸಂಕಿರಣದ ಹೆಚ್ಚಿನ ಚರ್ಚೆಯಲ್ಲಿ ಬಿಂಬಿತವಾಯಿತು. ಹಾಗಾಗಬಾರದು. ನಮ್ಮ ಚರಿತ್ರೆಯನ್ನು ನಮ್ಮ ದೃಷ್ಟಿಕೋನಗಳಿಂದ ಬದುಕಿನ ಒಳಗಡೆಯಿಂದ ಒಮ್ಮೆ ನೋಡಿಕೊಳ್ಳಬೇಕಾಗಿದೆ. ಆ ಮೂಲಕ ಊನಗೊಂಡ ಹಾಗೂ ಗೈರುಹಾಜರಾಗಿರುವ ಅನುಭವ ಜಗತ್ತನ್ನು ಚರಿತ್ರೆಯ ಮುಖ್ಯವಾಹಿನಿಗೆ ತರಬೇಕಾಗಿದೆ. ಹೊಸ ರೀತಿಯ ವ್ಯಾಖ್ಯಾನಗಳಿಗೆ ಗುರಿಪಡಿಸಬೇಕಾಗಿದೆ.

**ದುಡಿತದ ಮೇಲಿನ ದಿಗ್ಬಂಧನ**

ಹಲಗಲಿ ಬಂಡಾಯ ಹಾಗೂ ಸಿಂಧೂರ ಲಕ್ಷ್ಮಣ ಇಂಥ ಸ್ವಯಂಪ್ರೇರಿತ ಪ್ರತಿಭಟನೆಗಳು ಬಹು ಮುಖ್ಯವಾಗಿ ಆರ್ಥಿಕ ಹಾಗೂ ಸಾಮಾಜಿಕ ಅಸಮಾನತೆಯ ಆಯಾಮಗಳೊಂದಿಗೆ ಥಳುಕುಹಾಕಿಕೊಂಡಿವೆ. ಹಾಗಾಗಿ ಭಾರತದ ರಾಜಕೀಯ ಸ್ವಾತಂತ್ರ್ಯದ ಚೌಕಟ್ಟಿನೊಳಗಷ್ಟೇ ಇಟ್ಟು ನೋಡಿದರೆ ಆ ಪ್ರತಿಭಟನೆಗಳಿಗಿದ್ದ ಸ್ಥಳೀಯ ತುರ್ತು ಮರೆಮಾಚುತ್ತದೆ. ಆರ್ಥಿಕ ಖಾಸಗೀಕರಣ ಬಂಡವಾಳಶಕ್ತಿಯ ಕೇಂದ್ರೀಕರಣವಾದಂತೆ ಭಕ್ತಿಯ ಖಾಸಗೀಕರಣ ಶಿವಭಕ್ತಿಯ ಕೇಂದ್ರೀಕರಣವೂ ಆಗಬಲ್ಲದು. ಹಾಗೆ ನಿಶ್ಶಸ್ತ್ರೀಕರಣ ಎನ್ನುವ ಕಾಯಿದೆಯ ಹೇರಿಕೆ ಕೂಡ ಶ್ರಮಿಕ ವರ್ಗಗಳ ದಾಸ್ಯದ ಪ್ರತೀಕವೂ ಆಗಿದೆ. ಬ್ರಿಟಿಷ್ ಆಳ್ವಿಕೆಯ ರೀತಿ ರಿವಾಜುಗಳಿಗೆ ಸರಿಯಾಗಿ ಇನ್ನೂ ಹೊಂದಿಕೊಳ್ಳದಿದ್ದ ದುಡಿವ ವರ್ಗಗಳಿಗೆ ಈ ಆಜ್ಞೆ ದೊಡ್ಡ ಆಘಾತ ತಂದಿತ್ತು.

ಹಲಗಲಿ ದಕ್ಷಿಣ ಮರಾಠಾ ನಾಡಿನ ಮುಧೋಳ ಸಂಸ್ಥಾನಕ್ಕೆ ಸೇರಿದ ಕೊನೆಯ ಹಳ್ಳಿಯಾಗಿತ್ತು. ೧೮೫೭ರ ಬಂಡಾಯದ ಪರಿಣಾಮವಾಗಿ ಬ್ರಿಟಿಷ್ ಜಿಲ್ಲೆಗಳಲ್ಲಿ ಹಾಗೂ ಅದರ ರಾಜಕೀಯ ಮೇಲ್ವಿಚಾರಣೆಗೊಳಪಟ್ಟ ಸ್ವದೇಶಿ ಸಂಸ್ಥಾನಗಳಲ್ಲಿ ಈ ಕಾಯಿದೆ ಊರ್ಜಿತಗೊಂಡಿತು. ಸಂಸ್ಥಾನಗಳು ಈ ಕಾಯಿದೆ ಕುರಿತು ಯಾವ ಪ್ರತಿಕ್ರಿಯೆಯನ್ನು ವಹಿಸಲಿಲ್ಲ. ಆದರೆ ಸಂಸ್ಥಾನಗಳಿಗೆ ನಿಷ್ಠರಾಗಿದ್ದ ಸ್ಥಳೀಯ ಸೇವಾವರ್ಗಗಳು ಅನ್ಯ ಮೂಲದ ಇಂಥ ಕಾಯಿದೆಗಳಿಂದ ಕಂಗಾಲಾಗುವಂತಾಯಿತು. ಯಾವಾಗಲೂ ಅಧಿಕಾರ ವರ್ಗಗಳು ಆ ಸ್ಥಾನಿಕ ಉತ್ಪಾದನೆ ಅಥವಾ ಅಂಥ ಸಾಮಗ್ರಿಗಳ ಮೇಲೆ ಒಡೆತನವನ್ನು ಹೊಂದಿ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುತ್ತಿರುತ್ತವೆ. ಇಂಥ ಸಂದರ್ಭದಲ್ಲಿ ದುಡಿವ ವರ್ಗಗಳಿಗೆ ತನ್ನ ಪ್ರತಿನಿಧೀಕರಣ ಹಾಗೂ ಪ್ರತಿಭಟನೆ ಮಾಡಲು ಇರುವ ಏಕೈಕ ಮಾರ್ಗವೆಂದರೆ ಉತ್ಪಾದನಾ ಸಾಮರ್ಥ್ಯ ಹಾಗೂ ಉತ್ಪಾದನಾ ಸಂಗತಿಗಳು. ಇವು ದುಡಿವ ವರ್ಗಗಳ ಕೈಗೆಟುಕದ ಕಾರಣ ಇವರಿಗೆ ನಿಲುಕದೆ ಹೋಗುತ್ತದೆ. ಅಧಿಕಾರ ಉಳ್ಳವರಿಂದ ಕೂಡಿದ ಜಾತಿಗಳ ವಶದಲ್ಲಿದೆ. ಸುಧಾರಣೆಗಳಿಂದು ಉಳ್ಳವರ ತಿಜೋರಿಯನ್ನು ಭರ್ತಿ ಮಾಡುತ್ತಿವೆಯೇ ಹೊರತು ಉಳಿದವರ ಹೊಟ್ಟೆಯನ್ನು ತುಂಬಿಸುತ್ತಿಲ್ಲ. ಕೈಗಾರಿಕಾಭಿವೃದ್ಧಿಯಂತಹ ಅತೀ ನಾಗರಿಕ ಪ್ರಣೀತ ಹಂಬಲಗಳನ್ನು ಮುಂದಿಟ್ಟುಕೊಂಡು ನಡೆದ ಸ್ವಾತಂತ್ರ್ಯದ ಕೆಲಸಗಳ ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆ ಹಾಗೂ ಅವಮಾನಗಳ ವಿರುದ್ಧ ಸಿಡಿದೆದ್ದ ಸ್ಥಳೀಯ ಪ್ರತಿಭಟನೆಗಳಿಗೂ ಮಾಡುವ ಹೋಲಿಕೆ ಈ ಅರ್ಥದಲ್ಲಿ ವಿಹಿತವೆನಿಸದು. ಜನರ ಬದುಕಾಗಿ ಬರಬೇಕಾಗಿದ್ದ ಅಭಿವೃದ್ಧಿ ಅಥವಾ ಅಂಥ

ಸುಧಾರಣೆಗಳು ಜನರ ಬದುಕನ್ನು ಕಸಿದುಕೊಳ್ಳುವ ಸ್ವಾರ್ಥಪರ ಚಿಂತನೆಗಳಾಗಿ ಪ್ರಚಲಿತಗೊಳ್ಳುತ್ತಿವೆ. ಅಭಿವೃದ್ಧಿಯನ್ನು ಜನರ ಬದುಕಾಗಿ ಪರಿವರ್ತಿಸಿಕೊಳ್ಳಲು ಸಾಧ್ಯವಾಗದಿರುವುದೇ ಸ್ವಾತಂತ್ರ್ಯೋತ್ತರ ಭಾರತದ ಬಹುದೊಡ್ಡ ವೈಫಲ್ಯವಾಗಿದೆ. ದುಡಿವ ಜನರನ್ನು ಯಾಚಕರನ್ನಾಗಿ ಫಲಾನುಭವಿಗಳನ್ನಾಗಿ ನಿರಾಶ್ರಿತರನ್ನಾಗಿ ಮಾಡುವ ಕ್ರಿಯೆ ನಿಶ್ಶಸ್ತ್ರೀಕರಣ ಕಾಯಿದೆಯ ಗರ್ಭದೊಳಗಿದೆ. ದುಡಿವ ವರ್ಗಗಳ ಅನ್ನ ಹಾಗೂ ಅನನ್ಯತೆಯ ಪ್ರಶ್ನೆ ಇಲ್ಲಿದೆ. ಸುಧಾರಣೆಗಳು ಹಾಗೂ ಕಾಯಿದೆಗಳು ಜನರನ್ನು ಸಕ್ರಿಯಾತ್ಮಕವಾಗಿ ತೊಡಗಿಸಿಕೊಳ್ಳುವಂಥವಾಗಬೇಕೇ ಹೊರತು ಅವರನ್ನು ನಿಷ್ಕ್ರಿಯರನ್ನಾಗಿ ಮಾಡಬಾರದು. ನಿಶ್ಶಸ್ತ್ರೀಕರಣ ಕಾಯಿದೆಯು ಸ್ಥಳೀಯ ಹಲವು ಸಮುದಾಯಗಳ ಅಸ್ತಿತ್ವವನ್ನೇ ಅಡಗಿಸಲು ಪ್ರಯತ್ನಿಸುತ್ತದೆ. ಹೀಗಾಗಿ ಕಂಪನಿ ಸರಕಾರದ ವಿರುದ್ಧ ದಂಗೆಯೆದ್ದದ್ದು ಶ್ರೀಮಂತ ವರ್ಗಗಳೂ ಅಲ್ಲ ದೇಶಗತಿಗಳೂ ಅಲ್ಲ, ಬದಲಾಗಿ ದಿನನಿತ್ಯ ದುಡಿದು ತಿನ್ನುವ ಶ್ರಮಿಕ ವರ್ಗಗಳು ಎಂಬುದು ಇಲ್ಲಿನ ವಿಶೇಷ.

ನಿಶ್ಶಸ್ತ್ರೀಕರಣ ಕಾಯಿದೆ ಅಡಿಯಲ್ಲಿ ನಿಷೇಧಕ್ಕೆ ಒಳಗಾದ ಹಲಗಲಿ ಬೇಡರ ಆಯುಧಗಳಾದರೂ ಎಂಥವು. ಲಾವಣಿಯೊಂದರಲ್ಲಿ ಹೇಳುವಂತೆ,

*'ಕತ್ತಿ ಕಟಾರಿ ಕೈಚೂರಿ ಬಾಕು ಗುರ್ದಿ ಸುರಾಯಿ ಚಕ್ರಾ*
*ಬರ್ಚಿ ಬಿಚ್ಚುಗತ್ತಿ ಬಾಣ ಬಿಲ್ಲಿನವರಾ'*
*'ಪಟಾತ ಪಿಸ್ತೂಲ ಕುರಲಿ ತೇಗಾ ಚಾಪಗೊಡ್ಲಿ ಶಸ್ತ್ರಾ*
*ತೋಪು ತುಬಾಕಿ ಹೊಡವ ಮದ್ದು ಗುಂಡಾ ಬಿಡಬ್ಯಾಡರಿ ಚೂರಾ'*

ಮೇಲಿನ ಸಾಲಿನಲ್ಲಿ ಕಾಣುವ ಅಸ್ತ್ರಗಳ ವಿವರ ಕುತೂಹಲಭರಿತವಾದಂಥವು. ದುಡಿಮೆಗೆ, ಅಂದಿನ ಅನ್ನದ ಅವತಾರಕ್ಕೆ, ದುಡಿವ ವರ್ಗಗಳಿಗೆ ಬೇಕಾಗಿರುವ ಅತಿ ಮುಖ್ಯ ಆಯುಧಗಳು ಇವಾಗಿವೆ. ಗುಡ್ಡಗಾಡು ತಿರುಗಿ, ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸಿ ಅನ್ನದ ದಾರಿ ಮಾಡಿಕೊಳ್ಳುವ ಜನರ ತುತ್ತನ್ನೇ ಈ ಕಾಯ್ದೆ ಕಸಿದುಕೊಳ್ಳುತ್ತದೆ. "ಸಾಲ ಸಮುದಾ ಮಾಡಿ, ದನಕರ ಮಾರಿ ತಂದೀನಿ", "ಹಬ್ಬದಾಗ ನೋಡ ನೋಡ ಹ್ಯಾಂಗ ಕೊಡೂನ ಅಂತ ಹುಗಿದಿಟ್ಟರ ನೆಲದಾಗ"– ಈ ಸಾಲುಗಳು ಆಯುಧ, ಅನ್ನ ಹಾಗೂ ಬದುಕು ಇವುಗಳ ಅಭಿನ್ನತೆಯನ್ನೂ ತೀವ್ರತೆಯನ್ನೂ ಹೇಳುವಂಥವಾಗಿವೆ. "ಹೋದ ಹತಾರಕ ಹೊಟಿಬ್ಯಾನಿ ಹಚ್ಚಕೊಂಡ ನಿಂತಾರ ಸಾವುದಕ" ಎನ್ನುವಲ್ಲಾಗಲೀ,

*'ಹಲ್ಲ ಕಿತ್ತ ಹಾಂವಿನ ಪರಿಯು ನಮಗ ಆದಿತಲ್ಲಾ*
*ರಂಡಿ ಮುಸಕ ಹಾಕಿ ತಿರಿಗಿದರ ನಮ ಮಾನ ಉಳಿಯುವದಿಲ್ಲಾ*
*ಮಗ್ಗಲದಾಗಿನ ಹೇಣತಿ ಕೊಟ್ಟಾಂಗ ಅತಿಹೇಡಿ ಆದೆವಲ್ಲಾ*
*ಸತ್ತ ಹೆಣಕ ಸಿಂಗಾರ ಮಾಡಿದ ಪರಿ ಆದಿತಲ್ಲಾ'*

ಆಯುಧವೇ ಬದುಕು, ಬದುಕೇ ಆಯುಧವಾದ ಪರಿ ಇಲ್ಲಿದೆ. ಕಂಪನಿ ಸರಕಾರದ ಕಾಯಿದೆ ಜನರ ಬದುಕನ್ನು ಅಭಿವೃದ್ಧಿಪಡಿಸುವ ಬದಲು ಅವರನ್ನು ನಾಗರಿಕ ಬದುಕಿನಿಂದ, ಶ್ರಮ ಬದುಕಿನ ಮೂಲಗಳಿಂದ, ಸ್ವಾವಲಂಬಿ ನೆಲೆಗಳಿಂದ ವಂಚಿತರನ್ನಾಗಿ ಮಾಡುತ್ತಿದೆ. ಕಸುಬಿಗೆ ಮೂಲವಾಗಿದ್ದ, ಅನ್ನಕ್ಕೆ ದಾರಿಯಾಗಿದ್ದ ಪರಿಕರಗಳು ಸಾಮ್ರಾಜ್ಯಶಾಹಿಯ ಎದೆ ನಡುಗಿಸುತ್ತವೆಂದರೆ ಅವುಗಳಿಗಿದ್ದ ಸಾಮರ್ಥ್ಯದ ಅರಿವಾಗದೇ ಇರದು.

ನಿಶ್ಶಸ್ತ್ರೀಕರಣ ಕಾಯಿದೆಯ ಬಿಸಿ ತಟ್ಟಿದ್ದು ಹೆಚ್ಚಾಗಿ ದುಡಿವ ಹಾಗೂ ಅಂಚಿನ ವರ್ಗಗಳಿಗೆ, ಕಾರಣ ಅವುಗಳಿಗಿರುವ ಸಾಮಾಜಿಕ ಹಾಗೂ ಆರ್ಥಿಕ ಅಭದ್ರತೆಗಳು. ಸ್ವ ಮೂಲವನ್ನು ಬಿಡದ ಅನ್ಯ ಮೂಲವನ್ನು ಆಶ್ರಯಿಸದ ಅವುಗಳ ಅನನ್ಯ ಸ್ವಭಾವವು ಅನ್ನ ಹಾಗೂ ನೆಲೆ ಕಸಿದುಕೊಳ್ಳುವ ಪ್ರವೃತ್ತಿಗಳ ವಿರುದ್ಧ ಸೆಟೆದು ನಿಲ್ಲುವಂತೆ ಮಾಡುತ್ತದೆ. ಹಲಗಲಿ ಬೇಡರಂತಹ ಅಡವಿ ಅವಲಂಬಿತ ಸಮುದಾಯಗಳಿಗೆ ವೃತ್ತಿ ಎನ್ನುವುದು ಅಸಮಾನತೆಯ ನೆಲೆಯಾಗದೆ ಅದೊಂದು ಸಾಮುದಾಯಿಕ ಆಚರಣೆಯ ಭಾಗವಾಗಿತ್ತು. ಎಲ್ಲ ದುಡಿವ ಸಂಸ್ಕೃತಿಗಳಲ್ಲಿ ಈ ಗುಣವನ್ನು ಕಾಣುತ್ತೇವೆ. ಹೀಗಾಗಿ ಹಲಗಲಿ ದಂಗೆ ಹಾಗೂ ಸಿಂಧೂರ ಲಕ್ಷ್ಮಣನ ಪ್ರತಿಭಟನೆಗಳು ಬರೀ ಆಂಶಿಕ ಅಗತ್ಯಗಳಾಗಿರದೆ ಆ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ ಅಸ್ತಿತ್ವದ ಅಗತ್ಯ ಹಾಗೂ ಅನಿವಾರ್ಯತೆಗಳಾಗಿ ಮೂಡಿ ಬಂದಂತಹವು. ಈ ಆರ್ಥಿಕ ಸ್ವಾವಲಂಬನೆ ಹಾಗೂ ಅಸ್ತಿತ್ವ ನಾಶದ ಪ್ರವೃತ್ತಿಗಳ ವಿರುದ್ಧ ಶ್ರಮ ಹಾಗೂ ಸ್ವಾವಲಂಬಿ ಮನಸ್ಸುಗಳು ತೋರಿದ ಚುರುಕುತನವದು. ಬೇಡರದು ನಿಸರ್ಗಮುಖಿ ಹಾಗೂ ನಿಸ್ವಾರ್ಥ ಬದುಕು. ಪ್ರಭುತ್ವದ್ದು ಸ್ವಾರ್ಥಮುಖಿ ಬದುಕು. ವಸಾಹತು ಪ್ರಭುತ್ವ ಯಾವಾಗಲೂ ಸ್ಥಳೀಯ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸಂಬಂಧಗಳ ವಿಘಟನೆಯಾಗಿ ಕೆಲಸ ಮಾಡುತ್ತ ಬಂದಿದೆ. ಇದಕ್ಕೆ ಸ್ಥಳೀಯ ಕೆಲವು ಪ್ರತಿಷ್ಠಿತ ಹಿತಾಸಕ್ತಿಗಳ ಸ್ವಾರ್ಥಪರ ಸಹಾಯವೂ ಕಾರಣವಾಗಿದೆ. ಸ್ಥಳೀಯ ಉತ್ಪಾದನೆಯ ಮುಖ್ಯ ಗುಣವೇ ಮಾನವಮುಖಿ ಹಾಗೂ ಸಮಾಜಮುಖಿ ಸಂಬಂಧಗಳನ್ನು ಗಟ್ಟಿಗೊಳಿಸುವುದು. ಆ ಮೂಲಕ ವ್ಯಕ್ತಿಯ ಸಾಂಸ್ಕೃತಿಕ ಲೋಕದ ವಿಸ್ತಾರಕ್ಕೆ ಹಾಗೂ ಆರ್ಥಿಕ ಭದ್ರತೆಗೆ ಹಂಬಲಿಸುವುದು. ಹೀಗಾಗಿ ಬದುಕನ್ನು ಅಭದ್ರಗೊಳಿಸುವ, ಅವಮಾನಿಸುವ, ನಾಶಗೊಳಿಸುವ ಶಕ್ತಿಗಳ ವಿರುದ್ಧ ಸಿಡಿದೇಳುವ ಮೂಲಕ ಹಲಗಲಿ ಬೇಡರು ಹಾಗೂ ಸಿಂಧೂರ ಲಕ್ಷ್ಮಣನಂತಹ ಸ್ಥಳೀಯ ಪ್ರತಿಭಟನಾಕಾರರು ಪ್ರಭುತ್ವ ಹಾಗೂ ಅದರ ಪರಿವಾರವನ್ನು ತಮ್ಮ ಹೋರಾಟಗಳ ಮೂಲಕ ಕಂಗೆಡಿಸಿದರು.

ನಿಶ್ಶಸ್ತ್ರೀಕರಣ ಕಾಯಿದೆಯಡಿಯಲ್ಲಿ ನಿಷೇಧಕ್ಕೊಳಗಾದ ಕುಡುಗೋಲು, ಕೊಡ್ಲಿ, ಭರ್ಚಿಯಂಥ ಆಯುಧಗಳನ್ನು ಮತ್ತೆ ಮಾಡಿಕೊಳ್ಳುವಂಥ ಸಾಮರ್ಥ್ಯ ಹಲಗಲಿ ಬೇಡರಿಗೆ ಇರಲಿಲ್ಲವೆಂದಲ್ಲ, ಇತ್ತು. ಈ ವರೆಗೆ ಚರ್ಚಿಸಿದಂತೆ ಆಯುಧವೆಂದರೆ ಅದೊಂದು ಪರಿಕರ ಮಾತ್ರವಾಗಿರಲಿಲ್ಲ. ಅದು ಅವರ ಜೀವನ ವಿಧಾನವಾಗಿತ್ತು. ಅಂಥ ಜೀವನವನ್ನು ಕಾಯಿದೆ ಸರ್ವನಾಶ ಮಾಡುತ್ತದೆ ಕಸಿದುಕೊಳ್ಳುತ್ತದೆ.

*ಕುಬಸಾ ಸಿರಿ ಹಪ್ಪಳ ಶಾಂಡಿಗಿ ಕುರ್ಚಿಗಿ ಕುಡಗೋಲಾ*
*ಕೊಡಲಿ ಕೋತಿ ಕುಡ ಕಜ್ಜಿಣಾ ಮಸರು ಬೆಣ್ಣೆ ಹಾಲಾ*
*ಉಪ್ಪ ಎಣ್ಣೆ ಅರಿಶಿಣ ಜೀರಿಗಿ ಅಕ್ಕಿ ಸಕ್ಕರಿ ಬೆಲ್ಲಾ*
*ಗಂಗಾಳ ಚರಗಿ ಮಂಗಳಸೂತ್ರಾ ತಕ್ಕೊಂಡ ಹೋದರ ಬೀಸುಕಲ್ಲಾ*
*ಎಲ್ಲಾ ತಗೊಂಡ್ರೊಸಿಕಷ್ಟ। ಸರ್ದನಿಂತ ಊರಿಗೆ ಕೊಳ್ಳಿ ಕೊಟ್ಟು*
*ಬೂದಿ ಮಾಡ್ಯಾರ ಹಲಗಲಿ ಸುಟ್ಟು ಗುರ್ತ ಎಳ್ಳಷ್ಟು ಸಿಗದಷ್ಟು*

–ಲಾವಣಿಯ ಈ ಸಾಲುಗಳು ತುಂಬ ಅರ್ಥಗರ್ಭಿತವಾಗಿರುವುದನ್ನು ಇಲ್ಲಿ ಕಾಣಬಹುದು. ಹಲಗಲಿ ಬೇಡರ ಎಣ್ಣೆ, ಉಪ್ಪು, ಹಪ್ಪಳ, ಸೆಂಡಿಗೆ ಉತ್ಪಾದನೆಗೆ ಮುಖ್ಯವಾದ ವಸ್ತುಗಳೇ ಕೊಡಲಿ, ಕೋತಿ, ಕುಡುಗೋಲು. ಅವುಗಳು ಅಭಿನ್ನವಾಗಿ ಇಲ್ಲಿ ಬಳಕೆಯಾಗಿವೆ. ಅಂಥ ಅಭಿನ್ನ ಬದುಕಿನ ಸರ್ವನಾಶವನ್ನು ಕಂಪನಿ ಸರ್ಕಾರ ಇಲ್ಲಿ ಮಾಡುವುದನ್ನು ಲಾವಣಿ ಮಾರ್ಮಿಕವಾಗಿ ಧ್ವನಿಸುತ್ತದೆ.

*'ಹಲಗಲಿ ಎಂಬುವ ಹಳ್ಳಿ ಮುಧೋಳ ರಾಜ್ಯದಾಗ ಇತ್ತೊ*
*ಪೂಜೇರಿ ಹಣಮಾ ಬಾಲ ಜಡಗ ರಾಮ ಮಾಡ್ಯಾರ ಮಸಲತ್ತ*
*ಕೈಯಾನ ಹತಾರಕೊಡಬಾರದು ನಾವು ನಾಲ್ಕು ಮಂದಿ ಜತ್ತೋ*
*ಹತಾರ ಹೋದಿಂದ ಬಾರದ ನಮ್ಮ ಜೀವ ಸತ್ತ ಹೋಗುದು ಗೊತ್ತು'*

ಹಲಗಲಿ ಬಂಡಾಯದ ರೂವಾರಿಗಳಾದ ಹಣಮ, ಬಾಲ, ಜಡಗ ಹಾಗೂ ರಾಮ ಇವರು ಹೇಳುವ ಈ ಮಾತು, ಕೆಳವರ್ಗಗಳ ಅಂತಃಸ್ಥೈರ್ಯ ಹಾಗೂ ತಲ್ಲಣಗಳಿಗೆ ಸಾಕ್ಷಿಯಾಗಿವೆ. ಅಸ್ತಿತ್ವವನ್ನೇ ಅಡಗಿಸಲು ಪ್ರಯತ್ನಿಸುವ ಪ್ರಭುತ್ವದ ಹುನ್ನಾರದ ವಿರುದ್ಧ ನಡೆದ ಈ ದಂಗೆಗಳನ್ನು ಬರೀ ಬ್ರಿಟಿಷ್ ವಿರೋಧಿ ಅಥವಾ ಭಾರತ ರಾಜಕೀಯ ಸ್ವಾತಂತ್ರ್ಯದ ರಂಗತಾಲೀಮೆಂದು ಬೀಗುವುದು ಬರೋಬ್ಬರಿಯಲ್ಲ. 'ಸ್ವಾತಂತ್ರ್ಯ'ದ ಪರಿಕಲ್ಪನೆಯೇ ಇಲ್ಲದೆ ಬದುಕು ಅರಸುತ್ತಿರುವ ಸಮುದಾಯಗಳು ಸ್ವಾತಂತ್ರ್ಯೋತ್ತರ ಕಾಲದಲ್ಲೂ ಇರುವಾಗ ಹಲಗಲಿ ಬಂಡಾಯ ಹಾಗೂ ಸಿಂಧೂರ ಲಕ್ಷ್ಮಣರ ಪ್ರತಿಭಟನೆಗಳನ್ನು ಈ ರೀತಿಯ ವ್ಯಾಖ್ಯಾನಗಳಿಗೆ ಹೊಂದಿಸುವುದು ವಿಚಿತ್ರವೆನಿಸುತ್ತದೆ. ಹೀಗೆ ಮಾಡುವುದರಿಂದ ಈ ಪ್ರತಿಭಟನೆಗಳಿಗಿದ್ದ ಆಂತರಿಕ ತಾಕತ್ತು ಹಾಗೂ ತುರ್ತುಗಳು, ಮಿತಿಗಳು, ಸೂಕ್ಷ್ಮತೆಗಳು ಸಪಾಟಾಗಿ ಹೋಗುತ್ತವೆ. ಅವುಗಳನ್ನು ನೇರವಾಗಿ ಅರ್ಥಮಾಡಿಕೊಳ್ಳಲು ಆಗದ ಜಡತೆ ಆವರಿಸುತ್ತದೆ. ಅನಗತ್ಯವಾಗಿ ಅವುಗಳನ್ನು ರಾಷ್ಟ್ರೀಯವಾದಿ ಕಕ್ಷೆಯಲ್ಲಿಟ್ಟು ನೋಡದೆ ಅದರ ಸ್ಥಳೀಯ ಸಾಮಾಜಿಕ ತುರ್ತಿನಲ್ಲಿಟ್ಟು ವ್ಯಾಖ್ಯಾನಿಸಿದರೆ ಹೊಸ ರೀತಿಯ ಸೂಕ್ಷ್ಮ ಚಾರಿತ್ರಿಕ ಸಂಕಥನಗಳನ್ನು ನಮ್ಮದಾಗಿಸಿಕೊಳ್ಳಬಹುದಾಗಿದೆ. ಹೀಗಾಗಿ ಇಂಥ ಪ್ರತಿಭಟನೆಗಳನ್ನು ಅರ್ಥ ಮಾಡಿಕೊಳ್ಳುವ ನೆಲೆಯೇ ಬದಲಾಗಬೇಕಿದೆ.



ಸಧ್ಯ.. ನಾವೂ ಕಾರ್ ಮೇಲೇ ಡ್ಯೂಟಿಗೆ ಹೋಗೋ ಕಾಲ ಶೀಘ್ರದಲ್ಲೇ ಬರಲಿದೆ ಅಂತಾಯ್ತು ಕಣೋ..?!


**ಡಾ॥ ವೀರೇಶ ಬಡಿಗೇರ**
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ – ೫೮೩೨೭೬






ಮೂಲ : ಲೀಯೊ ಟಾಲ್‌ಸ್ಟಾಯ್
ಕನ್ನಡಕ್ಕೆ : ವೀರೇಶ ಗೋನವಾರ

# ಕೋಳಿಯ ಮೊಟ್ಟೆಯಷ್ಟೇ ದೊಡ್ಡದಾದ ಕಾಳು

**ಒಂ**ದು ದಿನ ಮಕ್ಕಳೆಲ್ಲಾ ಕೊಳವೊಂದರ ಬಳಿ ಆಟವಾಡುತ್ತಿದ್ದಾಗ ಕಾಳಿನಾಕಾರದ ಧಾನ್ಯವೊಂದು ಅವರ ಕಣ್ಣಿಗೆ ಬಿತ್ತು. ಕಾಳಿನ ಮಧ್ಯಭಾಗದಲ್ಲಿ ಗೆರೆಯೊಂದನ್ನು ಕೊರೆದಂತಿತ್ತು. ಆದರೆ ಈ ಕಾಳು ಕೋಳಿಯ ಮೊಟ್ಟೆಯಷ್ಟೇ ದೊಡ್ಡದಾಗಿತ್ತು. ಅಲ್ಲಿಯೇ ತೆರಳುತ್ತಿದ್ದ ದಾರಿಹೋಕನೊಬ್ಬ ಇದನ್ನು ನೋಡಿದ. ೬ ಪೈಸೆ ಕೊಟ್ಟು ಮಕ್ಕಳಿಂದ ಇದನ್ನು ಖರೀದಿಸಿದ. ಕುತೂಹಲದಿಂದ ಇದನ್ನು ಪಟ್ಟಣಕ್ಕೆ ತಂದು ರಾಜನಿಗೆ ಮಾರಾಟ ಮಾಡಿದ.

ರಾಜನು ತನ್ನ ಆಸ್ಥಾನದ ಎಲ್ಲಾ ಪಂಡಿತರನ್ನು ಕರೆಯಿಸಿ, ಇದು ಏನು ಎಂದು ಪತ್ತೆಹಚ್ಚಲು ಹೇಳಿದ. ಪಂಡಿತರೆಲ್ಲಾ ಮತ್ತೆ ಮತ್ತೆ ಯೋಚಿಸಿದರು. ಒಂದು ದಿನ ಕಳೆದರೂ ಇದರ ತಳಬುಡವೂ ಗೊತ್ತಾಗಲಿಲ್ಲ. ಕಿಟಕಿಯ ತಳಕಲ್ಲಿನ ಮೇಲೆ ಇಟ್ಟಾಗ ಕೋಳಿಯೊಂದು ಹಾರಿ ಬಂದು ತೂತು ಬೀಳುವವರೆಗೂ ಕುಕ್ಕಿತು. ಆಗ ಇದು 'ಕಾಳು' ಎಂಬುದು ಎಲ್ಲರಿಗೂ ಖಚಿತವಾಯಿತು. ಪಂಡಿತರೆಲ್ಲಾ ರಾಜನ ಬಳಿಗೆ ಹೋಗಿ, ''ಇದೊಂದು ಧಾನ್ಯದ ಜಾತಿಗೆ ಸೇರಿದ ಕಾಳು'' ಎಂದರು.

ಈ ವಿಷಯ ರಾಜನಿಗೆ ಮತ್ತಷ್ಟು ಅಚ್ಚರಿಯನ್ನುಂಟುಮಾಡಿತು. ಆಗ ರಾಜನು ಪರಿಣತರನ್ನೆಲ್ಲಾ ಬರಹೇಳಿ ಈ ತೆರನಾದ ಕಾಳು ಯಾವಾಗ, ಎಲ್ಲಿ, ಬೆಳೆಯುತ್ತಿದ್ದರು ಎಂಬುದನ್ನು ಕಂಡುಹಿಡಿಯಲು ಆಜ್ಞಾಪಿಸಿದ. ಪರಿಣತರೆಲ್ಲಾ ತಾವು ಅಭ್ಯಾಸ ಮಾಡಿದ ಬೃಹತ್ ಗ್ರಂಥಗಳಲ್ಲೆಲ್ಲಾ ಹುಡುಕಾಡಿದರು, ಯೋಚಿಸಿದರು. ಆದರೆ ಈ ಕಾಳಿನ ಬಗ್ಗೆ ಒಂದಿನಿತೂ ಸಹ ಗೊತ್ತಾಗಲಿಲ್ಲ. ಇವರೆಲ್ಲಾ ರಾಜನ ಹತ್ತಿರ ಬಂದು, ''ನಮ್ಮಿಂದ ಉತ್ತರ ಕೊಡಲು ಸಾಧ್ಯವಿಲ್ಲ. ನಮ್ಮೆಲ್ಲಾ ಪುಸ್ತಕಗಳಲ್ಲಿ ಇದರ ಬಗ್ಗೆ ಏನೂ ಇಲ್ಲ. ಈ ಕುರಿತು ರೈತರನ್ನು ಕೇಳಿದರೆ ಪ್ರಾಯಶಃ ಅವರ ಹಿರಿಯರಿಂದ ಇಷ್ಟು ದೊಡ್ಡ ಗಾತ್ರದ ಕಾಳನ್ನು ಯಾವಾಗ ಬೆಳೆದಿತ್ತು ಎಂಬುದನ್ನು ಅವರು ಕೇಳಿ ತಿಳಿದಿರಬಹುದು'' ಎಂದರು.

ಮುಪ್ಪಾನ ಮುದಿ ರೈತನೊಬ್ಬನನ್ನು ಕರೆತರಲು ರಾಜನು ಆಜ್ಞಾಪಿಸಿದ. ಆತನ ಸೇವಕರೆಲ್ಲಾ ಹಣ್ಣುಹಣ್ಣಾದ ಮುದುಕನೊಬ್ಬನನ್ನು ಹುಡುಕಿ ತಂದು ರಾಜನ ಬಳಿ ನಿಲ್ಲಿಸಿದರು. ತುಂಬಾ ವಯಸ್ಸಾಗಿತ್ತು, ಬೆನ್ನು ಬಾಗಿತ್ತು, ಮುಖವೆಲ್ಲಾ ಸುಕ್ಕುಗಟ್ಟಿತ್ತು, ಬೊಚ್ಚು ಬಾಯಿ. ತನ್ನ ಎರಡು ಊರುಗೋಲಿನ ಸಹಾಯದಿಂದಲೇ ಪ್ರಯಾಸಪಟ್ಟು ನಡೆದುಕೊಂಡು ಬಂದು ರಾಜನ ಬಳಿ ಹಾಜರಾಗಿದ್ದ.

''ಹಿರಿಯರೆ, ಈ ತೆರನಾದ ಕಾಳನ್ನು ಎಲ್ಲಿ ಬೆಳೆಯುತ್ತಿದ್ದರೆಂದು ಹೇಳಬಲ್ಲಿರಾ ? ನೀವು ಎಂದಾದರೂ ಇಂತಹ ಕಾಳನ್ನು ಖರೀದಿ ಮಾಡಿದ್ದೀರಾ ?''

ಈ ಮುದುಕ ಒಂದು ಶಬ್ದವನ್ನೂ ಸಹ ಕೇಳದಷ್ಟು ಕಿವುಡನಾಗಿದ್ದ. ರಾಜ ಏನು ಹೇಳಿದ ಎಂಬುದನ್ನು ತುಂಬಾ ಕಷ್ಟಪಟ್ಟು ಅರ್ಥಮಾಡಿಕೊಂಡ.

''ಇಲ್ರಿ'' ಎನ್ನುತ್ತಾ, ''ನಮ್ಮ ಹೊಲ್ದಾಗ ಇಂಥ ಕಾಳನ್ನು ಬಿತ್ತಿ ಮಾಡಿಲ್ಲ. ಕಟಾವು ಮಾಡಿಲ್ಲ. ಅಲ್ಲದೆ ನಾನೆಂದೂ ಇಂಥದ್ನ ಖರೀದಿ ಮಾಡಿಲ್ಲ. ನಾವೆಲ್ಲಾ ಕಾಳುಕಡಿ ಖರೀದಿ ಮಾಡಾಗ ಈಗಿರುವ ಕಾಳಿನಷ್ಟ ಸಣ್ಣ ಇರ್ತಿದ್ದವು. ಆದರೆ ಈ ಬಗ್ಗೆ ನಮ್ಮ ತಂದೆಯವರನ್ನು ಕೇಳ್ರಿ. ಇಂತಹ ಕಾಳು ಎಲ್ಲಿ ಬೆಳೆತಿತ್ತು ಅನ್ನೋದನ್ನು ಅವರು ಕೇಳಿಸಿಕೊಂಡಿರಬಹುದು'' ಎಂದನು. ನಂತರ ರಾಜನು ಈ ಹಣ್ಣು ಮುದುಕನ ತಂದೆಯನ್ನು ಕರೆ ಕಳುಹಿಸಿದ. ಆತನ ಸೇವಕರು ಅವನನ್ನು ಹುಡುಕಿ ತಂದು ರಾಜನ ಹತ್ತಿರ ನಿಲ್ಲಿಸಿದರು. ಈತ ಒಂದೇ ಊರುಗೋಲಿನಿಂದ ನಡೆದುಕೊಂಡೇ ಇಲ್ಲಿಗೆ ಬಂದಿದ್ದ. ರಾಜನು ಕಾಳನ್ನು ತೋರಿಸಿದನು. ಈ ರೈತನಿಗೆ ಇನ್ನೂ ದೃಷ್ಟಿ ಚೆನ್ನಾಗಿಯೇ ಇತ್ತು. ಕಾಳನ್ನು ಚೆನ್ನಾಗಿಯೇ ಗಮನಿಸಿದ. ನಂತರ ರಾಜನು ಇವರನ್ನು ಉದ್ದೇಶಿಸಿ, ''ಮುದುಕರೇ, ಈ ತರಹದ ಕಾಳನ್ನು ಎಲ್ಲಿ ಬೆಳೆಯುತ್ತಿದ್ದರು ಎಂದು ಹೇಳಬಲ್ಲಿರಾ ? ಎಂದಾದರೂ ಇಂತಹ ಕಾಳನ್ನು ಖರೀದಿ ಮಾಡಿರುವಿರಾ ? ಇಲ್ಲವೆ ನಿಮ್ಮ ಹೊಲಗಳಲ್ಲಿ ಬಿತ್ತಿದ್ದಿರೆ ?'' ಎಂದು ಕೇಳಿದ.

ತನ್ನ ಮಗನಿಗಿಂತಲೂ ಈ ಮುದುಕ ಚೆನ್ನಾಗಿಯೇ ಕೇಳಿಸಿಕೊಂಡ.

ಆಗ ಇವನು, ''ಇಲ್ಲ'' ಎನ್ನುತ್ತಾ, ''ನಾನು ಎಂದೂ ಈ ಪೈಕಿ ಕಾಳನ್ನು ನನ್ನ ಹೊಲ್ದಾಗ ಬಿತ್ತಿಯೇ ಇಲ್ಲ. ರಾಶಿನೂ ಮಾಡಿಲ್ಲ. ಇನ್ನ ಖರೀದಿ ಬಗ್ಗೆ ಹೇಳೋದಾದರೆ, ನಾನೆಂದೂ ಏನನ್ನೂ ಖರೀದಿ ಮಾಡಿಲ್ಲ. ನಮ್ಮ ಕಾಲ್ದಾಗ ರೊಕ್ಕ ರೂಪಾಯಿ ಉಪಯೋಗ ಮಾಡ್ತಿದ್ದಿಲ್ಲ. ಪ್ರತಿಯೊಬ್ರು ತಮ್ಮದೇ ಆದ ಕಾಳುಕಡಿಗಳನ್ನು ಬೆಳಿತ್ತಿದ್ದರು. ಏನಾದರೂ ನಮ್ಗೆ ಬೇಕಾದ್ರ ನಮ್ದು ಅವರ್ಗೆ ಅವರ್ದು ನಮ್ಗ ಹಿಂಗ ಒಬ್ಬರಿಗೊಬ್ಬರು ಹಂಚಿಕೊಳ್ಳುತ್ತಿದ್ವಿ. ಈ ನಮೂನಿ ಕಾಳು ಎಲ್ಲಿ ಬೆಳೀತಿತ್ತು ಅನ್ನೊದು ನನ್ಗ ಗೊತ್ತಿಲ್ರಿ. ಆವಾಗ ಈಗಿನ ಕಾಳಿಗಿಂತಲೂ ಹೆಚ್ಚು ಹಿಟ್ಟನ್ನ ಕೊಡುವ ಕಾಳುಗಳು ಇದ್ವು. ಇಷ್ಟ ಅಲ್ದ ಇವು ಉತ್ತಮವಾಗಿ ಇದ್ವು. ಹಂಗ ಚಲೋ ಇಳುವರಿಯನ್ನೂ ಕೊಡುತ್ತಿದ್ವು. ಆದ್ರ ನಾನು ಇಂತದನ್ನು ನೋಡಿಲ್ರಿ. ಈ ಬಗ್ಗೆ ನಮ್ಮ ತಂದೆಯವರು ಆಗಾಗ ಹೇಳೋದನ್ನ ನಾನು ಕೇಳಿಸಿಕೊಂಡೀನಿ. ಮಹಾ ಪ್ರಭುಗಳಾದ ತಾವು ಅವರನ್ನೆ ಕೇಳುವುದು ಪಾಡ ಅನಸ್ತದ'' ಎಂದನು ಹಣ್ಣು ಮುದುಕನ ಮಗ.

ತದನಂತರ ರಾಜನು ಈ ಮುದುಕನ ತಂದೆಯನ್ನು ಬರಹೇಳಿದ. ರಾಜನ ಸೇವಕರು ಈ ಮುದುಕನ ತಂದೆಯನ್ನು ಪತ್ತೆ ಹಚ್ಚಿ, ರಾಜನ ಬಳಿ ಕರೆತಂದರು. ಈತನು ಯಾವುದೇ

ಊರುಗೋಲಿನ ಸಹಾಯವಿಲ್ಲದೆ ನಿರಾಯಾಸವಾಗಿ ನಡೆದುಕೊಂಡೇ ಒಳಗೆ ಬಂದ. ಈತನ ಕಂಗಳು ಇನ್ನೂ ಚೆನ್ನಾಗಿಯೇ ಇದ್ದವು. ಕಿವಿಯಂತೂ ಸ್ಪಷ್ಟವಾಗಿಯೇ ಕೇಳುತ್ತಿದ್ದವು. ಮಾತುಗೊಳು ಸುಸ್ಪಷ್ಟವಾಗಿದ್ದವು. ರಾಜನು ಆ ಕಾಳನ್ನು ತೋರಿಸಿದ. ಈ ಅಜ್ಜನು ತನ್ನ ಕೈಯಾರೆಯೇ ಕಾಳನ್ನೊಮ್ಮೆ ತಿರುಗಿಸಿಕೊಂಡು ನೋಡಿದ.

''ಭಾಳ ವರ್ಷಗಳ ಹಿಂದಿನ ಇಂತದ್ದೊಂದು ಅದ್ಭುತ ಕಾಳನ್ನ ನೋಡಿದ್ಯಾ'' ಎನ್ನುತ್ತಾ ತನ್ನ ಹಲ್ಲಿನಿಂದ ಕಾಳನ್ನು ಕಡಿದು ಪುಡಿಪುಡಿ ಮಾಡಿದ. ಅದರ ರುಚಿಯನ್ನೂ ಸವಿದ.

''ಹೇಳಿ ಮುತ್ತಜ್ಜ, ಎಲ್ಲಿ ಮತ್ತು ಯಾವಾಗ ಇಂತಹ ಧಾನ್ಯವನ್ನು ಬೆಳೆಯುತ್ತಿದ್ದರು ? ಇಂತಹ ಧಾನ್ಯವನ್ನು ಎಂದಾದಾರೂ ಖರೀದಿ ಮಾಡಿದ್ದಿರಾ ? ಇಲ್ಲವೇ ನಿಮ್ಮ ಹೊಲಗಳಲ್ಲಿ ಏನಾದರೂ ಬಿತ್ತಿದ್ದುಂಟೇ ?'' ಎಂದು ಪ್ರಶ್ನಿಸಿದ ರಾಜ.

ಇದಕ್ಕೆ ಈ ಮುದುಕ ಹೇಳಿದ್ದಿಷ್ಟು,

''ನಮ್ಮ ಕಾಲ್ದಾಗ ಇಂಥ ಕಾಳನ್ನ ಎಲ್ಲಾ ಕಡಿಗೂ ಬೆಳೆಯುವ ರೂಢಿ ಇತ್ತು. ನಮ್ಮ ವಯಸ್ಸಿನ ದಿನಗಳಲ್ಲಿ ಈ ಕಾಳನ್ನು ತಿಂದೀನಿ. ಮತ್ತ ಬ್ಯಾರೆಯವರು ಇದನ್ನೇ ತಿಂತಿದ್ರು. ಇಂತಹ ಕಾಳನ್ನ ನಾವು ಬಿತ್ತಿ, ಬೆಳೆದು, ಕಟಾವು ಮಾಡಿದ್ವಿ'' ಎಂದು ಉತ್ತರಿಸಿದ.

''ಹೇಳಿ ಅಜ್ಜ, ನೀವು ಇದನ್ನು ಎಲ್ಲಿಯಾದರೂ ಖರೀದಿ ಮಾಡಿದ್ದಿರಾ ? ಇಲ್ಲವೇ ನೀವೇ ಇದನ್ನು ಬೆಳೆಯುತ್ತಿದ್ದಿರೇ ?''

ಈ ಮುದುಕ ಮುಗುಳುನಕ್ಕ.

''ನಮ್ಮ ಕಾಲ್ದಾಗ ಯಾರೊಬ್ರೂ ರೊಟ್ಟಿಯನ್ನ ಖರೀದಿ ಮಾಡುವುದಾಗಲಿ ಇಲ್ಲವೇ ಮಾರಾಟ ಮಾಡೋದಾಗಲಿ ಮಾಡ್ತಿರಲಿಲ್ಲ. ರೊಟ್ಟಿಯನ್ನು ಮಾರುವುದು ಮತ್ತು ಖರೀದಿಸಿವುದು ಮಹಾ ಪಾಪವಾಗಿತ್ತು. ನಮ್ಗ ರೊಕ್ಕ ಅಂದ್ರ ಏನಂತ ಅನ್ನೋದೆ ಗೊತ್ತಿರ್ಲಿಲ್ಲ. ಪ್ರತಿಯೊಬ್ಬ ಮನುಷ್ಯ ತನ್ಗ ಬೇಕಾದಷ್ಟು ಕಾಳುಕಡಿಗಳನ್ನು ಮಾತ್ರ ಹೊಂದಿರುತ್ತಿದ್ದನು.''

''ಹಾಗಾದರೆ ನಿಮ್ಮ ಹೊಲ ಎಲ್ಲಿತ್ತು ? ಇಂತಹ ಧಾನ್ಯವನ್ನು ಎಲ್ಲಿ ಬೆಳೆಯುತ್ತಿದ್ದಿರಿ ?'' ಎಂದು ಕೇಳಿದ ರಾಜ.

ಆಗ ಮುತ್ತಜ್ಜ, ''ನನ್ನ ಹೊಲ ಅದು ಆ ದೇವ್ರ ಭೂಮಿಯಾಗಿತ್ತು. ನಾನು ಎಲ್ಲಿ ಉಳುಮೆ (ಒಕ್ಕಲು) ಮಾಡುತ್ತಿದ್ದೇನೋ ಅದ ನನ್ನ ಭೂಮಿಯಾಗಿತ್ತು. ಈ ಭೂಮಿತಾಯಿ ಎಲ್ಲರಿಗೂ ಮುಕ್ತವಾಗಿದ್ಲು. ಯಾವೊಬ್ಬ ಮನುಷ್ಯನೂ ಈ ವಸ್ತು ಸ್ವಂತದ್ದು ಎಂದು ಹೇಳಿ ಕೊಳ್ಳುತ್ತಿರಲಿಲ್ಲ. ಶ್ರಮವನ್ನು ಮಾತ್ರ ತಮ್ಮದೆಂದು ಭಾಳ ಖುಷಿಲಿಂದ ಹೇಳಿಕೊಂತಿದ್ದರು.''

''ನನ್ನ ಇನ್ನೆರಡು ಪ್ರಶ್ನೆಗಳಿಗೆ ಉತ್ತರಿಸಿ'' ಎನ್ನುತ್ತಾ ರಾಜನು,

''ಮೊದಲ ಪ್ರಶ್ನೆಯೆಂದರೆ, ಇಂತಹ ಧಾನ್ಯವನ್ನು ಹೊತ್ತುಕೊಂಡಿದ್ದ, ಫಸಲು ನೀಡಿದ್ದ ಈ ಭೂತಾಯಿ ಈಗ ಇದನ್ನು ಏಕೆ ಬಿಟ್ಟುಕೊಟ್ಟಳು ?'' ಎಂದು ಕೇಳಿದ. ನಂತರ ರಾಜನು, ''ನಿಮ್ಮ ಮೊಮ್ಮಗ ಎರಡು ಊರುಗೋಲಿನಿಂದ, ನಿಮ್ಮ ಮಗ ಒಂದು ಊರುಗೋಲಿನಿಂದ, ನೀವು ಮಾತ್ರ ಯಾವುದೇ ಊರುಗೋಲಿನ ಸಹಾಯವಿಲ್ಲದೇ ನಡೆದಾಡುತ್ತಿದ್ದೀರಿ; ಇದು ಏಕೆ ? ಹೇಗೆ ಸಾಧ್ಯ ?'' ಎಂದು ಎರಡನೇ ಪ್ರಶ್ನೆ ಕೇಳಿದ.

ರಾಜನು ತನ್ನ ಮಾತುಗಳನ್ನು ಮುಂದುವರೆಸುತ್ತಾ, ''ನಿಮ್ಮ ಕಂಗಳು ಇನ್ನೂ ಹೊಳೆಯುತ್ತಿವೆ. ನಿಮ್ಮ ಹಲ್ಲುಗಳು ಗಟ್ಟಿಮುಟ್ಟಾಗಿವೆ. ಮತ್ತು ನಿಮ್ಮ ಕಂಚಿನ ಕಂಠದ ಮಾತುಗಳಂತೂ ಕಿವಿಗಳಿಗೆ ಸುಸ್ಪಷ್ಟವಾಗಿಯೂ, ಇಂಪಾಗಿಯೂ ಇವೆ. ಇವೆಲ್ಲವೂ ನಿಮಗೆ ಹೇಗೆ ಸಾಧ್ಯವಾದವು ?''

ಇದಕ್ಕೆ ಮುತ್ತಜ್ಜ ಉತ್ತರಿಸಿದ್ದಿಷ್ಟು:

''ಇವು ಹಿಂಗ... ಯಾಕಂದ್ರ ಮನುಷ್ಯರು ತಮ್ಮ ಶ್ರಮವನ್ನು ತಮ್ಮೊಳ್ಗ ಬಿಗಿದುಕೊಂಡಾರ. ಅಷ್ಟೇ ಅಲ್ದ ಇನ್ನೊಬ್ಬರ ಶ್ರಮದ ಮ್ಯಾಗ ಅವಲಂಬಿತರಾಗಿ ಬದುಕುತ್ತಿದ್ದಾರೆ. ಹಿಂದಿನ ನಮ್ಮ ಕಾಲ್ದಾಗ ಮನುಷ್ಯರೆಲ್ಲರೂ ಆ ದೇವನ ಆಣತಿಯಂತೆ ಬದುಕುತ್ತಿದ್ರು. ಅವರಲ್ಲಿ ಏನಿತ್ತೋ ಅದೇ ಅವರದಾಗಿತ್ತು. ಬೇರೆಯವರು ಉತ್ಪಾದನೆ ಮಾಡಿದ್ದನ್ನ ಅವರೆಂದೂ ದುರಾಸೆ ಪಡ್ತಿರ್ಲಿಲ್ಲ'' ಎಂದನು ಮುತ್ತಜ್ಜ.


ಲೀಯೊ ಟಾಲ್‌ಸ್ಟಾಯ್

ಕನ್ನಡಕ್ಕೆ : ವೀರೇಶ ಗೋನವಾರ

ಮಂಜುನಾಥ ಟಾಕೀಸ್ ಪಕ್ಕ, ಸುಕಾಲ ಪೇಟೆ ರಸ್ತೆ, ಸಿಂಧನೂರು - ೫೮೪೧೨೮, ರಾಯಚೂರು ಜಿಲ್ಲೆ


## ಹೊಲವೆಂಬ ಹೆಣದ ಮುಂದೆ...



ರಾಗಿಮುದ್ದೆಗೆ ಜೊತೆಯಾದ
ಕೆಂಪು ಮೆಣಸಿನಕಾಯಿ ಚಟ್ನಿಯಿಲ್ಲ
ಮುರಿದ ಗಂಗಾಳದ ತುಂಬ ;
ಹೋಳಿಗೆ-ತುಪ್ಪ-ಮಂಡಿಗೆ
ಅನ್ನ ಸಾರು ಹಪ್ಪಳ ಸಂಡಿಗೆ
ಗಂಗಾಳದ ಗೀರುಗಳ ಮೇಲೆ
ಬೆಚ್ಚಿ ಬಿದ್ದೆ.

ಗೋರಿಯಲ್ಲಿ ಯಾರೋ
ಸರಿದಾಡಿದ ಸದ್ದು
ಎತ್ತುಗಳ ಗಂಟೆ ಸದ್ದು
ಅಪ್ಪ ರಂಟೆ ಹೊಡೆವ ಸದ್ದು
ಅವ್ವ ಬಿತ್ತಿದ ಬೀಜಗಳು
ಮೊಳಕೆಯೊಡೆವ ಸದ್ದು !
ಕಾರ್ಖಾನೆಗಳ ಆಳದಿಂದ.

ಮುರಿದ ಗಂಗಾಳದ ತುಂಬ
ಅರಳಿದ
ರಾಗಿ-ಜೋಳ-ತೊಗರಿ
ಅವರೆ - ಅಲಸಂದೆ
ಗಿಡ - ಬಳ್ಳಿಗಳೆಲ್ಲಾ
ನರಳಿದ ಸದ್ದು!!

ಮರದ ಬೇರುಗಳು
ನರಳಿದ ಸದ್ದು
ಹೊಲದ ಮೇಲೆ ಕುಂತ
ಕಾರ್ಖಾನೆಗಳ ನೆಲದಡಿಯಿಂದ

ಉಣ್ಣಲಿ ಹೇಗೆ
ಮುರಿದ ಗಂಗಾಳ
ತುಂಬಿದ ಮೃಷ್ಟಾನ್ನ... ?
ಹೊಲವೆಂಬ
ಹೆಣದ ಮುಂದೆ... ?

ಉಣ್ಣಲಿ ಹೇಗೆ
ನನ್ನ ಗೋರಿಯ
ಮೇಲೆ ನಾನೇ ಕುಳಿತು... ?


ಬಿ. ಶ್ರೀನಿವಾಸ

ಶಿರಸ್ತೇದಾರ, ಜಿಲ್ಲಾ ನ್ಯಾಯಾಲಯ

ಹಾವೇರಿ - ೫೮೧೧೧೦

# ಇದೀಗ ಪ್ರಕಟವಾಗಿದೆ

## ನವಕರ್ನಾಟಕದ ಅಪೂರ್ವ ಕೊಡುಗೆ




ಡೆಮಿ 1/4 ಆಕಾರದ 320 ಪುಟಗಳು



**ಪ್ರತಿಯೊಂದು ಮನೆ, ಶಾಲಾ – ಕಾಲೇಜು ಗ್ರಂಥಾಲಯದಲ್ಲಿ ಇರಲೇಬೇಕಾದ ಉಪಯುಕ್ತ ಕೃತಿ**

**ಮುಖಬೆಲೆ ರೂ. 400**
'ಹೊಸತು' ಪತ್ರಿಕೆಯ
ಮೂರು ವರ್ಷದ ಚಂದಾದಾರರಿಗೆ
**ರೂ. 320 ಮಾತ್ರ**
(ಅಂಚೆ ವೆಚ್ಚ ರೂ. 20 ಪ್ರತ್ಯೇಕ)

ಪ್ರಾರಂಭದಿಂದ ಇಲ್ಲಿಯವರೆಗೆ ಸಾಹಿತ್ಯ, ಶಾಂತಿ, ಭೌತ ವಿಜ್ಞಾನ, ರಸಾಯನ ವಿಜ್ಞಾನ, ವೈದ್ಯ ವಿಜ್ಞಾನ, ಮತ್ತು ಅರ್ಥಶಾಸ್ತ್ರ ಕ್ಷೇತ್ರಗಳಿಗಾಗಿ ಪ್ರಶಸ್ತಿ ಪಡೆದ 774 ಮಂದಿ ಗಣ್ಯರ ಚಿತ್ರಗಳ ಸಹಿತ ಅವರ ಬದುಕು ಸಾಧನೆಗಳ ಸಮಗ್ರ ಮಾಹಿತಿ ಕೋಶ

*ಅಂಚೆ ವೆಚ್ಚ ರೂ. 20 ಸೇರಿಸಿ ಒಟ್ಟು ರೂ. 340ರ ಡಿ.ಡಿ. ಅಥವಾ ಎಂ.ಒ. ಕೆಳಕಂಡ ವಿಳಾಸಕ್ಕೆ ಕಳಿಸಿ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001. ಫ್ಯಾಕ್ಸ್: 30578023
ಫೋನ್ : 30578022, 22203580 e-mail : navakarnataka@dataone.in web : www.navakarnatakabooks.com

**ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302**

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /May 2008 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.